ಗಾಂಧೀ ಗ್ರಂಥಮಾಲೆ – ೮

# ಅರ್ಥವಿಚಾರ



ಮೋ. ಕ. ಗಾಂಧೀ



ಗಾಂಧೀ ಸ್ಮಾರಕ ನಿಧಿ
ಕರ್ನಾಟಕ ಶಾಖೆ
೧೯೫೯

**Works of Gandhiji in Kannada – 8**

# ARTHA VICHARA

## [ECONOMIC THOUGHT]



**M. K. GANDHI**



GANDHI SMARAK NIDHI
KARNATAKA SHAKHA
**1959**

# ಕನ್ನಡದಲ್ಲಿ ಗಾಂಧೀ ಗ್ರಂಥಗಳು

ವಿಶ್ವದ ಎಲ್ಲ ಭಾಷೆಗಳಲ್ಲಿಯೂ ಗಾಂಧೀಜಿಯವರ ವಿಚಾರಗಳ ಪ್ರಚಾರ ಮಾಡುವುದು ಗಾಂಧೀ ಸ್ಮಾರಕ ನಿಧಿಯ ಮುಖ್ಯ ಉದ್ದೇಶ್ಯಗಳಲ್ಲಿ ಒಂದು. ಕರ್ನಾಟಕಕ್ಕೆ ಹಾಗೂ ಕನ್ನಡಿಗರಿಗೆ ಅತೀವ ಮಹತ್ವದ ಗಾಂಧೀ ವಿಚಾರಗಳ ಪರಿಚಯ ಮಾಡಿಕೊಡುವುದು ಈಗ ಕೈಗೊಂಡ ಈ ಯೋಜನೆಯ ಗುರಿಯಾಗಿದೆ.

ಕರ್ನಾಟಕದ ಹಲವಾರು ಸಾಹಿತಿಗಳು, ಲೇಖಕರು, ಗಾಂಧೀಜಿಯವರ ಬರಹಗಳಲ್ಲಿ ಕೆಲವನ್ನು ಆಗಲೇ ಅನುವಾದಿಸಿ ಪ್ರಕಟಿಸಿದ್ದಾರೆ. ಸಾಧ್ಯವಾದಷ್ಟು ಈಗಲೇ ಪ್ರಕಟವಾಗಿರುವ ಅನುವಾದಗಳನ್ನು ಆವಶ್ಯಕವಿದ್ದಲ್ಲಿ ಪರಿಷ್ಕರಿಸಿ ಅವುಗಳನ್ನು ಈ ಗಾಂಧೀ ಗ್ರಂಥಮಾಲೆಯಲ್ಲಿ ಪೋಣಿಸುವ ಪ್ರಯತ್ನ ನಡೆದಿದೆ. ಗಾಂಧೀಜಿಯವರ ಮುಖ್ಯ ಹಾಗೂ ವಿವಿಧ ವಿಚಾರಗಳ ಪರಿಚಯವನ್ನು ಮಾಡಿಕೊಡಲು ಸುಮಾರು ಇಪ್ಪತ್ತು ಸಂಪುಟಗಳು ಸಿದ್ಧವಾಗುತ್ತಲಿವೆ.

ಗಾಂಧೀಜಿಯವರ ಎಲ್ಲ ಬರಹಗಳನ್ನೂ ಸಂಪೂರ್ಣವಾಗಿ ಅನುವಾದಿಸುವುದು ನಮ್ಮ ಉದ್ದೇಶ್ಯವಲ್ಲ. ಭಾರತ ಸರ್ಕಾರ ಆ ಕಾರ್ಯವನ್ನು ಕೈಗೊಂಡಿದೆ. ಆದರೆ ಈ ನಮ್ಮ ಯೋಜನೆಯ ಉದ್ದೇಶ್ಯ ಗಾಂಧೀಜಿಯವರ ಪ್ರಧಾನವಾದ ಅಭಿಪ್ರಾಯಗಳನ್ನು ಸಮಂಜಸವಾದ ರೀತಿಯಲ್ಲಿ ಕೂಡಿಸಿ ಮುಖ್ಯವಾದ ಶೀರ್ಷಿಕೆಗಳ ಅಡಿಯಲ್ಲಿ ಅವನ್ನು ಅಳವಡಿಸಿ ಕನ್ನಡಿಸಿ ಪ್ರಕಟ ಮಾಡುವುದಾಗಿದೆ. ಗಾಂಧೀಜೀ ಪುಸ್ತಕರೂಪವಾಗಿಯೇ ಬರೆದ ಗ್ರಂಥಗಳನ್ನು ಅವು ಇರುವಂತೆ ಅಥವಾ ಆವಶ್ಯಕವಾದರೆ ಸಂಗ್ರಹಿಸಿ ಅನುವಾದ ಮಾಡಲಾಗುತ್ತದೆ. ಮತ್ತೆ ಕೆಲವು ಗ್ರಂಥಗಳು ಗಾಂಧೀಜೀ ಅವರ ಅಭಿಪ್ರಾಯಗಳನ್ನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನಗಳಾಗಿವೆ. ಸಂಕಲನವು ಸ್ವಲ್ಪ ನಿಧಾನದ ಕೆಲಸ; ಕಷ್ಟವಾದ ಕೆಲಸವೂ ಹೌದು. ಎಷ್ಟು ಪ್ರಯತ್ನ ಮಾಡಿದರೂ ವಿಷಯಪ್ರತಿಪಾದನೆಯ ಪುನರಾವರ್ತನೆಯನ್ನು ತಪ್ಪಿಸುವುದು ಕಷ್ಟ. ನಮ್ಮ ಅನುವಾದಕರು ಕರ್ನಾಟಕದ

ನುರಿತ ಸಾಹಿತಿಗಳು ಮತ್ತು ಗಾಂಧೀ ಮಾರ್ಗದಲ್ಲಿ ಶ್ರದ್ಧೆಯುಳ್ಳವರು. ಆದಷ್ಟು ಸಮರ್ಪಕವಾಗಿ ಭಾಷಾಂತರ ಕೆಲಸವನ್ನು ಮಾಡುತ್ತಿದ್ದಾರೆ. ಗಾಂಧೀಜಿಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜಿಯವರ ಮನೋಗತವನ್ನು ಅರಿತವರು ಆಗಿರುವುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ.

ಈ ಸಂಪಾದಕ ಸಮಿತಿಯಿಂದ ಪ್ರಕಟಿಸಲ್ಪಡುವ ಗ್ರಂಥಗಳು ಬಹಳ ಸುಲಭ ಬೆಲೆಗೆ ಪಾಠಕರ ಕೈಸೇರಬೇಕೆಂಬ ಉದ್ದೇಶ್ಯದಿಂದ ಸಾಮಾನ್ಯ ಪ್ರತಿಯ ಬೆಲೆ ಅತಿ ಕಡಮೆ ಇಡಲಾಗಿದೆ. ಇದರೊಡನೆ ಉತ್ತಮ ಪ್ರತಿಯೂ ಸಹ ಮಾರಾಟಕ್ಕೆ ಇರುವುದಲ್ಲದೆ ಅದರ ಬೆಲೆಯೂ ಕೂಡ ಬಹಳ ಹೆಚ್ಚು ಇಡಲಾಗಿಲ್ಲ.

ಈ ಗ್ರಂಥಮಾಲೆ ಕನ್ನಡನಾಡಿನ ಜನಕ್ಕೆ ಗಾಂಧೀಸಾಹಿತ್ಯವನ್ನು ಒದಗಿಸಿಕೊಡುವ ಕೆಲಸದಲ್ಲಿ ಕೃತಕೃತ್ಯತೆಯನ್ನು ಪಡೆಯಬಲ್ಲದೆಂದು ಭಾವಿಸಲಾಗಿದೆ. ಗಾಂಧೀಜಿಯವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿಪ್ರಾಯಗಳು ಈ ಗ್ರಂಥಗಳ ಮೂಲಕ ಜನಸಾಮಾನ್ಯರಲ್ಲಿ ಹರಡಲಿ, ಸಕಲ ಜನರಿಗೆ ಸ್ಫೂರ್ತಿ ಕೊಟ್ಟು ನವಚೈತನ್ಯವನ್ನು ತುಂಬಲಿ ಎಂದು ಹಾರೈಸಿ ಈ ಗ್ರಂಥಗಳನ್ನು ಜನತಾಜನಾರ್ದನನಿಗೆ ಅರ್ಪಿಸುತಿರುವೆ.

ಗಾಂಧೀ ಸ್ಮಾರಕ ನಿಧಿ
ರಾಜಘಾಟ, ದಿಲ್ಲಿ
೭-೫-೧೯೫೮

**ರಂಗನಾಥ ದಿವಾಕರ**
ಅಧ್ಯಕ್ಷರು

# ನಿವೇದನ

## (ಗಾಂಧೀಜಿಯ ಮಾತುಗಳಲ್ಲಿ)

ಅನುವಾದಕರು : '**ಕುವೆಂಪು**'

ನಾನೊಬ್ಬ ಸತ್ಯಶೋಧಕ. ಅದಕ್ಕೊಂದು ಮಾರ್ಗವನ್ನು ಕಂಡುಕೊಂಡಿದ್ದೇನೆಂದು ನನ್ನ ವಿಶ್ವಾಸ. ಅದರ ಸಿದ್ಧಿಗಾಗಿ ನಾನು ನಿರಂತರ ಪ್ರಯತ್ನಶೀಲನಾಗಿದ್ದೇನೆಂದೂ ನನ್ನ ನಂಬಿಕೆ. ಅದು ಇನ್ನೂ ನನಗೆ ಸಿದ್ಧಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಸತ್ಯದ ಸಮ್ಯಕ್ ದರ್ಶನವೇ ಆತ್ಮ ಸಾಕ್ಷಾತ್ಕಾರ; ಅದೇ ಜೀವನದ ಅಂತಿಮ ಗುರಿ. ಅಂದರೆ ಪರಿಪೂರ್ಣತೆಯ ಸಿದ್ಧಿ. ನನ್ನ ನ್ಯೂನತೆಗಳು ಎಷ್ಟೆಂಬುದನ್ನು ನಾನು ವ್ಯಸನದಿಂದ ಅರಿತಿದ್ದೇನೆ. ಆ ಅರಿವು ನನಗೆ ದುಃಖ ತರುವಷ್ಟೂ ಇದೆ. ಆ ಅರಿವೇ ನನ್ನ ಶಕ್ತಿಯ ಸರ್ವಮೂಲ; ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ.೧

ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಅತ್ಯಂತ ಋಜುವಾಗಿ, ಅತ್ಯಂತ ಸತ್ಯವಾಗಿ, ಅತ್ಯಂತ ಅಹಿಂಸಕವಾಗಿ ನಡೆಯಬೇಕೆಂದು ಹೋರಾಡುತ್ತಿದ್ದರೂ, ನನಗೆ ಸರಿಯೆಂದು ತಿಳಿದ ಗುರಿಯನ್ನು ಮುಟ್ಟಲು ಹಂಬಲಿಸಿ ಹೆಣಗುತ್ತ ಸತತವೂ ಸೋಲುತ್ತಿರುವ ನಾನು ಒಂದು ಸಾಮಾನ್ಯ ಚೇತನ. ಆ ಯಾತ್ರೆ ಯೇನೋ ಕ್ಲೇಶಕರವೇ; ಆದರೆ ಆ ಯಾತನೆಯಲ್ಲಿಯೂ ನನಗೆ ಒಂದು ಆನಂದವಿದೆ. ಏರುವ ಒಂದೊಂದು ಹೆಜ್ಜೆಯೂ ನನ್ನನ್ನು ಬಲಿಷ್ಠನನ್ನಾಗಿ ಮಾಡಿ ಮುಂದಣ ಹೆಜ್ಜೆಗೆ ಸಾಮರ್ಥ್ಯವೀಯುತ್ತದೆ.೨

ದಾರಿ ನನಗೆ ಗೊತ್ತು. ಅದು ನೇರ ಮತ್ತು ಇಕ್ಕಟ್ಟು—ಕತ್ತಿಯ ಅಲಗಿನಂತೆ. ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ. ಜಾರಿ ದಾಗಲೆಲ್ಲ ಕಣ್ಣೀರಿಡುತ್ತೇನೆ. 'ನ ಮೇ ಭಕ್ತಃ ಪ್ರಣಶ್ಯತಿ' ಎಂದು ದೇವರ ವಚನವಿದೆ. ಆ ವಚನದಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಆದ್ದರಿಂದ ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ ನಾನೆಂದಿಗೂ

ಶ್ರದ್ಧೆಗೆಡುವುದಿಲ್ಲ. ಪ್ರತಿಯಾಗಿ, ಇಂದಲ್ಲ ನಾಳೆ, ಸ್ವತಃಸಿದ್ಧವಾಗಿ ಕೈಗೂಡಲೇಬೇಕಾಗಿರುವ ಇಂದ್ರಿಯಜಯ ಲಭಿಸಿದಂದು, ಬೆಳಕನ್ನು ಕಂಡೇ ಕಾಣುತ್ತೇನೆಂಬುದು ನನ್ನ ವಿಶ್ವಾಸ.೩

ಏಕೆಂದರೆ ಸಾವಿನ ನಡುವೆ ಬಾಳು, ಸುಳ್ಳಿನ ನಡುವೆ ಸತ್ಯ, ತಮಸ್ಸಿನ ನಡುವೆ ಜ್ಯೋತಿ ಚಿರಸ್ಥಾಯಿಯಾಗಿರುವುದನ್ನು ನಾನು ಕಾಣುತ್ತಿದ್ದೇನೆ, ಭಗವಂತನೇ ಪ್ರಾಣಶಕ್ತಿ, ಅವನೇ ಸತ್ಯ ಮತ್ತು ಜ್ಯೋತಿ ಎಂಬುದು ನನ್ನ ವಿಶ್ವಾಸ. ಆತ ಪ್ರೇಮಸ್ವರೂಪಿ ; ಆತನೆ ಪರಮಶ್ರೇಯಸ್ಸು.೪

ಬಾಲ್ಯದಿಂದಲೂ ನಾನೊಬ್ಬ ಸತ್ಯಾರಾಧಕ ಎಂಬುದು ನನ್ನ ವಿಶ್ವಾಸ. ಅದು ನನ್ನ ಅತ್ಯಂತ ಸಹಜಪ್ರವೃತ್ತಿ. ಉಪಾಸನಾಪೂರ್ವಕವಾದ ಶೋಧನೆ ಯಿಂದ ಭಗವಂತನೇ ಸತ್ಯ ಎಂಬ ರೂಢಿಯ ನಂಬಿಕೆಯ ಬದಲು ಸತ್ಯವೇ ಭಗವಂತ ಎಂಬ ಸೂತ್ರ ನನಗೆ ಸ್ಫುರಣವಾಯಿತು. ಭಗವಂತನನ್ನು ಪ್ರತ್ಯಕ್ಷವೋ ಎಂಬಂತೆ ಕಾಣಲು ಈ ಸೂತ್ರದಿಂದ ನನಗೆ ಸಾಧ್ಯವಾಗಿದೆ. ನನ್ನ ಚೇತನಸಮಸ್ತವನ್ನೂ ಆತ ವ್ಯಾಪಿಸಿದ್ದಾನೆ, ಎಂಬುದು ನನ್ನ ಅನುಭವ.೫

ಭಗವಂತನ ಪ್ರತ್ಯಕ್ಷ ದರ್ಶನದ ಹಂಬಲ ನನ್ನದು. ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ. ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ, ಪ್ರೇಮ.೬

ಅಹಿಂಸೆ ನನ್ನ ದೇವರು. ಸತ್ಯ ನನ್ನ ದೇವರು. ಅಹಿಂಸೆಯ ಸಾಧನೆ ಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: 'ನನ್ನ ಮೂಲಕವೇ ಅದರ ಸಿದ್ಧಿ' ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ: ನನ್ನ ಮೂಲಕವೇ ಅದರ ಸಿದ್ಧಿ.'೭

ಭಾರತದ ಸ್ವಾತಂತ್ರ್ಯಸಾಧನೆಯೇ ನನ್ನ ಜೀವಿತೋದ್ದೇಶ್ಯ. ಅದ ಕ್ಕಾಗಿ ನಾನು ಸಾಯಲು ಕೂಡ ಸಿದ್ಧ. ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧಮುಕ್ತವಾದಾಗಲೆ ಭರತಖಂಡ ಸತ್ಯಸ್ವರೂಪ ನಾದ ಭಗವಂತನನ್ನು ಪೂಜಿಸಬಲ್ಲುದು, ಭಾರತದ ಬಿಡುಗಡೆಗಾಗಿ ನಾನು ದುಡಿಯುತ್ತಿದ್ದೇನೆ ; ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿಯನ್ನು ಪಡೆದಿರುವುದರಿಂದ ಅದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ

ಸೇವೆಯ ಮೊದಲ ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶಿ ನನಗೆ ಕಲಿಸಿದೆ. ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮೀಸಲಾದುದಲ್ಲ. ಬೇರೆ ಯಾವ ರಾಷ್ಟ್ರದ ಹಿತಕ್ಕೂ ಧಕ್ಕೆಯೊದಗಬಾರದು ಎಂಬುದಷ್ಟೇ ಅಲ್ಲ ; ಸಕಲ ರಾಷ್ಟ್ರಗಳಿಗೂ, ಆ ಪದದ ಸಂಪೂರ್ಣಾರ್ಥದಲ್ಲಿ, ಸರ್ವಲಾಭ ಒದಗಬೇಕು ಎಂಬುದೇ ನನ್ನ ಮಾತಿನ ಆಶಯ. ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದೆಂದೂ ಲೋಕಹಿತಕಂಟಕವಾಗಲಾರದು.೮

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದರ್ಶಿಸಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯವಾಗಲೇಬೇಕು. ಆ ಹಂಬಲವನ್ನು ತುಂಬಿಕೊಂಡವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ. ನನ್ನ ಸತ್ಯಶ್ರದ್ಧೆ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಎಳೆದು ತಂದಿರುವುದು ಈ ಕಾರಣದಿಂದಲೇ. ಅಧ್ಯಾತ್ಮಕ್ಕೂ ರಾಜಕೀಯಕ್ಕೂ ಏನೂ ಸಂಬಂಧವಿಲ್ಲ ಎನ್ನುವವರಿಗೆ ಅಧ್ಯಾತ್ಮ ಎಂದರೇನು ಎಂಬುದೇ ತಿಳಿಯದೆಂದು ಸ್ವಲ್ಪವೂ ಅಳುಕದೆ, ಆದರೆ ವಿನೀತನಾಗಿ ನಾನು ಹೇಳಬಲ್ಲೆ.೯

ಆತ್ಮಶ್ರೀವಿದೂರವಾದ ರಾಜಕೀಯ ನನ್ನ ಪಾಲಿಗೆ ಸರ್ವಥಾ ತ್ಯಾಜ್ಯವಾದ ಕಲಂಕ. ರಾಜಕೀಯ ರಾಷ್ಟ್ರಗಳನ್ನು ಕುರಿತದ್ದು. ಯಾವುದು ರಾಷ್ಟ್ರಗಳ ಹಿತವನ್ನು ಕುರಿತದ್ದೋ ಅದು ಅಧ್ಯಾತ್ಮಪ್ರವೃತ್ತಿಯುಳ್ಳ ವ್ಯಕ್ತಿಯ, ಎಂದರೆ ಸತ್ಯದ ಮತ್ತು ಭಗವಂತನ ಅನ್ವೇಷಕ ಸಾಧನೆಯ ಅಂಗಗಳಲ್ಲಿ ಒಂದಾಗಿರುವುದು ಅನಿವಾರ್ಯ. ನನಗಾದರೊ ಭಗವಂತನೆಂದರೂ ಒಂದೇ. ಭಗವಂತ ಅಸತ್ಯದ ಮೂರ್ತಿಯೆಂದೂ ಹಿಂಸೆಯ ಮೂರ್ತಿ ಎಂದೂ ಯಾರಾದರೂ ಸ್ಥಿರಪಡಿಸಿದರೆ ಅಂತಹ ಭಗವಂತನನ್ನು ಪೂಜಿಸಲು ನಾನು ನಿರಾಕರಿಸುತ್ತೇನೆ. ರಾಜಕೀಯದಲ್ಲಿಯೂ ಭಗವಂತನ ರಾಜ್ಯ ಸ್ಥಾಪಿತವಾಗಬೇಕಾಗಿದೆ. ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯವನ್ನು ಬೇರ್ಪಡಿಸಲಾರೆ. ಕಾರಣ ಇಷ್ಟೆ: ನನ್ನ ರಾಜಕೀಯ ಕಲುಷಿತವಲ್ಲ, ಈ ಎಲ್ಲವೂ ಸತ್ಯ–ಅಹಿಂಸೆಗಳೊಂದಿಗೆ ಜಟಿಲವಾಗಿ ಹೆಣೆದುಕೊಂಡಿವೆ. ಸತ್ಯವನ್ನು ಬಲಿಗೊಟ್ಟು ಸ್ವಾತಂತ್ರ್ಯವನ್ನು ಪಡೆಯುವುದಕ್ಕಿಂತ ಭಾರತ ವಿನಾಶಹೊಂದುವುದೇ ಹೆಚ್ಚು ಲೇಸೆಂಬುದು ನನ್ನ ಮತ. ರಾಜಕೀಯ ಸಂಪರ್ಕವಿಲ್ಲದೆ

ಸಮಾಜಸೇವೆಯಂಥ ಕೆಲಸವನ್ನು ಕೂಡ ನಡೆಸುವುದು ಅಸಾಧ್ಯವೆಂಬುದು ನನ್ನ ಅನುಭವಕ್ಕೆ ಬಂದುದರಿಂದ ರಾಜಕೀಯ ಕ್ಷೇತ್ರವನ್ನು ನಾನು ಪ್ರವೇಶಿಸುವುದು ಅನಿವಾರ್ಯವಾಯಿತು. ಸಾಮಾಜಿಕ ಮತ್ತು ನೈತಿಕ ದೃಷ್ಟಿಯಿಂದ ರಾಜಕೀಯ ಕಾರ್ಯವು ಪರಿಗಣಿತವಾಗಲೇಬೇಕು.

ಮಾನವನ ಮನಸ್ಸಾಗಲಿ ಸಮಾಜವಾಗಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡಣೆಯಾಗಿಲ್ಲ ಎಂಬುದು ನನ್ನ ವಿಶ್ವಾಸ. ಅವುಗಳ ನಡುವೆ ಪ್ರತಿಕ್ರಿಯೆ ಇದ್ದೇ ತೀರುತ್ತವೆ.೧೦

ಆತ್ಮಶ್ರೀನಿಯಮಕ್ಕೆ ತನ್ನದೇ ಆದ ಒಂದು ಕ್ಷೇತ್ರವಿದೆ ಎಂಬುದನ್ನು ನಾನು ನಂಬುವುದಿಲ್ಲ. ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ. ಹೀಗೆ ಅದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಲಯಗಳ ಮೇಲೂ ಪರಿಣಾಮವನ್ನು ಉಂಟುಮಾಡುತ್ತದೆ.೧೧

ಮಾನವಜೀವಿತದ ಪರಮೋದ್ದೇಶ್ಯ ಭಗವತ್‌ಸಾಕ್ಷಾತ್ಕಾರ. ಅವನ ಕರ್ಮಕ್ರಿಯೆಗಳೇನೇ ಇರಲಿ, ಸಾಮಾಜಿಕ, ರಾಜಕೀಯ, ಧಾರ್ಮಿಕ ಎಲ್ಲವೂ ಈ ಈಶ್ವರಸಾಕ್ಷಾತ್ಕಾರದ ಪರಮೋದ್ದೇಶ್ಯದಿಂದಲೇ ನಿಯಂತ್ರಿತವಾಗಿರಬೇಕು. ಮಾನವಸೇವೆಯೆ ಈ ಸಾಧನೆಯ ಪ್ರಪ್ರಥಮ ಅನಿವಾರ್ಯಾಂಗವಾಗುತ್ತದೆ. ಏಕೆಂದರೆ ಇಷ್ಟೆ: ಈಶ್ವರದರ್ಶನಕ್ಕಿರುವ ಏಕೈಕ ಮಾರ್ಗವೆಂದರೆ ಆತನ ಸೃಷ್ಟಿಯಲ್ಲಿಯೆ ಆತನನ್ನು ಕಂಡು ಅದರಲ್ಲಿಯೆ ಒಂದಾಗಿರುವುದು. ಸರ್ವರ ಸೇವೆಯೊಂದೇ ಇದಕ್ಕೆ ಸಾಧನ. ನಾನು ಈ ಸರ್ವದ ಒಂದು ಅಂಶ. ಇತರರನ್ನು ಉಳಿದು ನಾನೊಬ್ಬನೇ ಅದನ್ನು ಪಡೆಯಲಾರೆ.೧೨

ಈಶಸೇವೆ ಅರ್ಥಾತ್ ಮಾನವಸೇವೆಯೇ ನನ್ನ ಧರ್ಮ, ನಿಷ್ಕಾಮ ಸೇವೆಯಿಂದ ಸೇವೆ ಸಲ್ಲಿಸುವುದೆಂದರೆ ಇತರರಿಗೆ ನಾವು ಉಪಕಾರಮಾಡಿದ್ದಕ್ಕಿಂತ ನಮ್ಮ ಸಾಲವನ್ನು ನಾವು ತೀರಿಸಿಕೊಂಡು ಕೃತಕೃತ್ಯರಾದಂತೆ. ನಮ್ಮ ಹೊಣೆಯನ್ನು ನಾವೇ ಇಳಿಸಿಕೊಂಡು ನಮ್ಮ ಕರ್ತವ್ಯವನ್ನು ಪರಿಪಾಲಿಸುವುದರ ಮೂಲಕ ನಮಗೆ ನಾವೇ ಉಪಕಾರ ಮಾಡಿಕೊಳ್ಳುತ್ತೇವೆ. ನಮ್ಮಲ್ಲಿ ಒಳ್ಳೆಯವರೆನಿಸಿಕೊಂಡವರು ಮಾತ್ರವಲ್ಲ, ನಾವೆಲ್ಲರೂ ನಮ್ಮ ಸರ್ವ

ಸಂಪತ್ತನ್ನೂ ಸರ್ವರಿಗಾಗಿ ವಿನಿಯೋಗಿಸಲು ಬದ್ಧರು. ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ತ್ಯಾಗಧರ್ಮ ಒಂದರಿಂದಲೇ.೧೩

ಮನುಷ್ಯ ಎಷ್ಟರಮಟ್ಟಿಗೆ ಪದಾರ್ಥಕ್ಕಾಗಿ ಶ್ರಮಿಸುತ್ತಾನೆಯೊ ಅಷ್ಟರ ಮಟ್ಟಿಗೆ ಅವನು ದೊಡ್ಡವನಾಗುತ್ತಾನೆ.೧೪

ನಾನು ಸೋದರಭಾವ ಅಥವಾ ತಾದಾತ್ಮ್ಯವನ್ನು ಸಾಧಿಸಲೆಳಸುವುದು ಕೇವಲ ಮಾನವಜೀವಿಗಳೊಂದಿಗೆ ಮಾತ್ರವಲ್ಲ, ಸಮಸ್ತ ಜೀವರಾಶಿಯೊಂದಿಗೆ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೆ ಕೂಡ. ನಿಮ್ಮನ್ನು ಚಕಿತಗೊಳಿಸಬಹುದಾದ ಈ ಬಯಕೆಗೆ—ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೂ ತಾದಾತ್ಮ್ಯವನ್ನು ಸಾಧಿಸಬೇಕೆನ್ನುವ ಬಯಕೆಗೆ—ಕಾರಣವಿಷ್ಟೆ; ನಾವೆಲ್ಲರೂ ಒಬ್ಬನೇ ಭಗವಂತನಿಂದ ಬಂದವರು ಎಂದು ಹೇಳುತ್ತೇವಲ್ಲ; ಹಾಗಿರುವುದರಿಂದ ಯಾವುದೇ ರೂಪದಲ್ಲಿ ಗೋಚರಿಸಿದರೂ ಮೂಲತಃ ಎಲ್ಲ ಜೀವವೂ ಒಂದೇ.೧೫

ಭಗವಂತನ ಕೇವಲ ಅಖಂಡತೆಯನ್ನು ನಾನು ನಂಬುತ್ತೇನೆ; ಆದುದರಿಂದಲೇ ಜನತೆಯ ಅಖಂಡತೆಯಲ್ಲೂ ನನಗೆ ಶ್ರದ್ಧೆಯಿರುವುದು. ಒಬ್ಬನು ಮಾತ್ರ ಅಧ್ಯಾತ್ಮಲಾಭ ಪಡೆದು ಅವನ ಸುತ್ತಣ ಜನರು ತೊಳಲುತ್ತಾರೆ ಎಂಬುದನ್ನು ನಾನು ನಂಬುವುದಿಲ್ಲ. ಅದ್ವೈತದಲ್ಲಿ ನನಗೆ ಶ್ರದ್ಧೆಯಿದೆ. ತತ್ತ್ವಶಃ ಮಾನವನ ಅಖಂಡತೆಯಲ್ಲಿ, ಹಾಗೆ ನೋಡಿದರೆ ಜೀವಸಮಸ್ತದ ಅಖಂಡತೆಯಲ್ಲಿ ನನಗೆ ವಿಶ್ವಾಸವುಂಟು. ಆದುದರಿಂದಲೇ ಒಂದು ವ್ಯಕ್ತಿಗೆ ಅಧ್ಯಾತ್ಮಲಾಭವಾದರೆ ಇಡಿಯ ವಿಶ್ವಕ್ಕೆ ಆ ಲಾಭ ಒದಗುತ್ತದೆ. ಒಂದು ವ್ಯಕ್ತಿ ಪತನ ಹೊಂದಿದರೆ ಅಷ್ಟರ ಮಟ್ಟಿಗೆ ಇಡಿಯ ವಿಶ್ವದ ಪತನವೇ ಆಗುತ್ತದೆ ಎಂದು ನಾನು ಭಾವಿಸಿರುವುದು.೧೬

ಈ ಪೃಥ್ವಿಯ ನಶ್ವರ ಸಾಮ್ರಾಜ್ಯದ ಬಯಕೆ ನನಗಿಲ್ಲ. ಮೋಕ್ಷರೂಪವಾದ ಅಮರ ಸಾಮ್ರಾಜ್ಯಕ್ಕಾಗಿ ನಾನು ಶ್ರಮಿಸುತ್ತಿದ್ದೇನೆ. ನನ್ನ ಧ್ಯೇಯ ಸಾಧನೆಗಾಗಿ ನಾನು ಗುಹಾನಿವಾಸಿಯಾಗಬೇಕಾಗಿಲ್ಲ.೧೭

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡೆಬಿಡದೆ ದುಡಿಯುವುದೇ ನನ್ನ ಮೋಕ್ಷಪಥ. ಜೀವಸಮಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ.೧೮

ಯಾವ ನೂತನ ಸಿದ್ಧಾಂತಗಳನ್ನೂ ನಾನು ಮಂಡಿಸಿಲ್ಲ. ಅದರ ಬದಲು ಪುರಾತನ ಸಿದ್ಧಾಂತಗಳ ಪುನರ್ನಿರೂಪಣೆಯ ಪ್ರಯತ್ನವೇ ನನ್ನದು. ಅದು ಎಷ್ಟರ ಮಟ್ಟಿಗೆ ಸರಿಯಾಗಿ ಸಾಗಿದೆಯೋ ಹೇಳಲಾರೆ. ಆದರೆ ಅದು ನನ್ನ ಪ್ರಾಮಾಣಿಕವಾದ ನಂಬಿಕೆಯನ್ನು ಪ್ರತಿನಿಧಿಸುತ್ತಿದೆ.೧೯

ಗಾಂಧೀಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥ ವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ. ನಾನು ಯಾವುದಾದರೂ ನೂತನ ತತ್ತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿ ಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ; ಅಷ್ಟೆ. ಸತ್ಯ-ಅಹಿಂಸೆ—ಈ ಭಾವಗಳು ಪರ್ವತಗಳಷ್ಟೇ ಪುರಾತನವಾದವು. ನನ್ನ ಶಕ್ತಿಗೆ ಸಾಧ್ಯವಾದಷ್ಟು ವಿಪುಲ ಪ್ರಮಾಣದಲ್ಲಿ ಅವೆರಡರಲ್ಲೂ ಪ್ರಯೋಗ ಗಳನ್ನು ನಡೆಸಿರುವುದಷ್ಟೆ ನನ್ನ ಕೆಲಸ. ಹಾಗೆ ಮಾಡುವಾಗ ಕೆಲವು ಸಲ ತಪ್ಪು ಮಾಡಿದ್ದೇನೆ; ಆ ತಪ್ಪುಗಳಿಂದ ಪಾಠ ಕಲಿತಿದ್ದೇನೆ. ಹೀಗೆ ಜೀವನ ಮತ್ತು ಅದರ ಸಮಸ್ಯೆಗಳು ಸತ್ಯ-ಅಹಿಂಸೆಗಳ ಅನುಷ್ಠಾನಗಳಲ್ಲಿ ನಡೆಸಿರುವ ಅನೇಕ ಪ್ರಯೋಗಗಳಾಗಿವೆ.೨೦

ನಿಮ್ಮ ಮುಂದೆ ಉದ್ಭವಿಸಿರುವ ಸಮಸ್ಯೆಗಳನ್ನು ನನ್ನ ಹೇಳಿಕೆಗೆ ಅನುಸಾರವಾಗಿ ಎದುರಿಸಬೇಕೆಂಬುದೇ ನನ್ನ ಇಚ್ಛೆ. ಹೀಗೆ ಸತ್ಯ-ಅಹಿಂಸೆಗಳಲ್ಲಿ ನನ್ನ ಶ್ರದ್ಧೆ ವರ್ಧಿಸುತ್ತಲೇ ಇದೆ. ನನ್ನ ಜೀವನದಲ್ಲಿ ಅವುಗಳನ್ನು ಅನುಸರಿ ಸುತ್ತ ಹೋದಂತೆ ನಾನು ಕೂಡ ಪ್ರತಿಕ್ಷಣವೂ ಬೆಳೆಯುತ್ತಲೇ ಇದ್ದೇನೆ. ಅವುಗಳಲ್ಲಿ ನನಗೆ ಹೊಸ ಅರ್ಥ ಸ್ಫುರಿಸುತ್ತಿದೆ. ದಿನದಿನವೂ ಅವುಗಳನ್ನು ಹೊಸ ಹೊಸ ಬೆಳಕಿನಲ್ಲಿ ಕಂಡು ಹೊಸ ಹೊಸ ಅರ್ಥಗಳನ್ನೂ ಅರಿಯುತ್ತಿ ದ್ದೇನೆ. ನನ್ನ ಜತೆಜತೆಗೆ ನೀವೂ ಕೂಡ ಬೆಳೆಯಬೇಕು. ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು. ಆದುದರಿಂದ ನನ್ನನ್ನು ಮರೆತುಬಿಡಿ. ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ತ್ವಗಳಿಗೆ. ಅದರ ಅಳತೆಗೋಲಿನಿಂದ ನಿಮ್ಮ ಒಂದೊಂದು ಚಟುವಟಿಕೆಯನ್ನೂ ಅಳೆದು ಉದ್ಭವಿಸಬಹುದಾದ ಎಲ್ಲ ಸಮಸ್ಯೆಗಳನ್ನೂ ನಿರ್ಭೀತರಾಗಿ ಎದುರಿಸಿ.೨೧

ನಿಲ್ಲುವುದು ನನ್ನ ಕೃತಿಯೇ ಹೊರತು, ನನ್ನ ಮಾತೂ ಅಲ್ಲ, ಬರಹವೂ ಅಲ್ಲ. ಇತ್ತೀಚೆಗೆ ನಾನು ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಸಕಲ ಶಾಸ್ತ್ರಗಳೂ ಒಂದು ವೇಳೆ ವಿನಾಶ ಹೊಂದುವುದಾದರೂ ಹಿಂದೂ ಧರ್ಮದ ಸಾರವನ್ನು ಸಾರಲು ಈಶೋಪನಿಷತ್ತಿನ ಒಂದು ಮಂತ್ರ ಸಾಕು; ಆದರೆ ಅದನ್ನು ಅನುಷ್ಠಾನಕ್ಕೆ ತರಲು ಯಾರೊಬ್ಬರೂ ಇರದಿದ್ದರೆ ಆ ಒಂದು ಮಂತ್ರವೂ ನಿರರ್ಥಕ. ಅದರಂತೆಯೆ ನನ್ನ ಮಾತು, ಬರಹಗಳು ಸತ್ಯ-ಅಹಿಂಸೆಯ ಮಹಾತತ್ತ್ವಗಳನ್ನು ರಕ್ತಗತಮಾಡಿಕೊಳ್ಳಲು ನಿಮಗೆ ನೆರವು ನೀಡಿರುವಷ್ಟರಮಟ್ಟಿಗೆ ಮಾತ್ರ ಉಪಯುಕ್ತ. ಅವುಗಳನ್ನು ನೀವು ಹಾಗೆ ರಕ್ತಗತ ಮಾಡಿಕೊಳ್ಳದಿದ್ದರೆ ನನ್ನ ಬರಹಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಒಬ್ಬ ಸತ್ಯಾಗ್ರಹಿಯಾಗಿ ನಾನು ಈ ಒಂದೊಂದು ಮಾತನ್ನೂ ಉದ್ದೇಶ್ಯಪೂರ್ವಕವಾಗಿ ಹೇಳುತ್ತಿದ್ದೇನೆ.೨೨

ಗಾಂಧೀಪಂಥ ಎಂಬುದು ದೋಷದ ಪ್ರತೀಕವಾಗಿರುವುದಾದರೆ ಅದು ನಾಶಹೊಂದಲಿ. ಸತ್ಯ-ಅಹಿಂಸೆಗಳು ಅಜರಾಮರ. ಆದರೆ ಗಾಂಧೀಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶ ಯೋಗ್ಯವೇ ನಿಜ. ತಾನು ಗಾಂಧೀಯ ಅನುಯಾಯಿ ಎಂದು ಯಾರೊಬ್ಬನೂ ಹೇಳದಿರಲಿ. ನಾನು ನನ್ನನ್ನು ಅನುಸರಿಸಿದರೆ ಸಾಕು. ಅದರಲ್ಲೂ ನಾನು ಎಂತಹ ಅಸಮರ್ಪಕ ಅನುಯಾಯಿ ಎಂಬುದನ್ನು ನಾನು ಬಲ್ಲೆ; ಯಾವ ತತ್ತ್ವಗಳಿಗಾಗಿ ನಾನು ನಿಂತಿದ್ದೇನೆಯೊ ಅವುಗಳಿಗೆ ತಕ್ಕಂತೆ ನಾನು ಬಾಳುತ್ತಿಲ್ಲ. ನೀವು ಅನುಯಾಯಿಗಳಲ್ಲ; ಸಹವಿದ್ಯಾರ್ಥಿಗಳು, ಸಹಯಾತ್ರಿಕರು, ಸಹ-ಅನ್ವೇಷಕರು, ಸಹ-ಉದ್ಯೋಗಿಗಳು.೨೩

ಸತ್ಯ-ಅಹಿಂಸೆಗಳನ್ನು ಕೇವಲ ವೈಯಕ್ತಿಕ ಅನುಷ್ಠಾನದ ತತ್ತ್ವಗಳನ್ನಾಗಿ ಮಾಡಿಕೊಂಡರೆ ಸಾಲದು; ಸಮಾಜ ಸಮುದಾಯುಗಳು, ರಾಷ್ಟ್ರಗಳೂ ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು. ಹೇಗೇ ಆಗಲಿ, ಅದಂತೂ ನನ್ನ ಕನಸು. ನನ್ನ ಬದುಕೆಲ್ಲ ಅದರ ಸಾಕ್ಷಾತ್ಕಾರದ ಪ್ರಯತ್ನಕ್ಕಾಗಿಯೆ, ನನ್ನ ಸಾವೂ ಅದರಲ್ಲಿಯೆ. ನನ್ನ ಶ್ರದ್ಧೆ ನನಗೆ ಅನುದಿನವೂ ನೂತನ ಸತ್ಯಗಳನ್ನು ಕಾಣಿಸುತ್ತಿದೆ. ಆತ್ಮದ ಸ್ವರೂಪವೆ ಅಹಿಂಸೆ; ಆದುದರಿಂದಲೆ ಸಕಲರೂ ಬದುಕಿನ ಸಕಲ ವ್ಯವಹಾರಗಳಲ್ಲೂ ಅದನ್ನು ಅನುಷ್ಠಾನಕ್ಕೆ

ತರಬೇಕು. ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಅನುಷ್ಠಾನ ಮಾಡಲಾಗದಿದ್ದರೆ ಅದಕ್ಕೆ ಔಪಯೋಗಿಕ ಮೌಲ್ಯವೇ ಇಲ್ಲ.೨೪

ನಮ್ಮ ದೇಶಕ್ಕಾಗಿ ನಾನು ತ್ಯಾಗ ಮಾಡಲಾರದುದು ಈ ಜಗತ್ತಿನಲ್ಲಿ ಏನೂ ಇಲ್ಲ—ಎರಡರ ಹೊರತು. ಅವು ಸತ್ಯ ಮತ್ತು ಅಹಿಂಸೆ. ಇಡೀ ಜಗತ್ತನ್ನೇ ನನ್ನ ಮುಂದಿಟ್ಟರೂ ಈ ಎರಡನ್ನು ನಾನು ಬಿಡಲಾರೆ. ಏಕೆಂದರೆ ನನ್ನ ಪಾಲಿಗೆ ಸತ್ಯವೇ ದೇವರು. ಸತ್ಯಸಾಧನೆಗೆ ಅಹಿಂಸೆಯಿಲ್ಲದೆ ಅನ್ಯಪಥ ಇಲ್ಲ. ಸತ್ಯ ಅಥವಾ ಭಗವಂತನನ್ನು ಬಲಿಗೊಟ್ಟು ಭಾರತಕ್ಕೆ ಸೇವೆ ಸಲ್ಲಿಸುವ ಆಲೋಚನೆಯನ್ನು ನಾನು ಮಾಡಲಾರೆ. ನಾನು ಬಲ್ಲೆ. ಸತ್ಯವನ್ನು ಕೈಬಿಡ ಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ, ಆಪ್ತೇಷ್ಟರನ್ನೂ ಕೈಬಿಡಬಲ್ಲ. ನನ್ನಾತ್ಮ ಮತ್ತು ನನ್ನ ಕರ್ತ ಇಬ್ಬರೂ ಮೆಚ್ಚುವಂತೆ ನಾನು ಹೋದೆಡೆಯೆಲ್ಲ ನನ್ನ ಕರ್ಮಕ್ಷೇತ್ರದ ಗಾಯತ್ರಿಗಳಾದ ಈ ನನ್ನ ಧರ್ಮಸೂತ್ರಗಳನ್ನು ಸಾರುತ್ತ ಹೋಗುತ್ತೇನೆ.

ನನ್ನದು ಧರ್ಮಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗೆ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಭಯ ಯಾವಾಗಲೂ ಇದ್ದೇ ಇದೆ. ಇತರರಿಂದ ನಾನು ನಿರೀಕ್ಷಿಸುವಂತೆ ಸ್ವವಿಮರ್ಶೆಯಲ್ಲಿ ಸತ್ಯದಂತೆಯೇ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ.೨೫

'ಗಾಂಧೀತತ್ತ್ವ' ಎಂದು ಯಾವುದನ್ನು ಕರೆಯುತ್ತಾರೋ ಅದನ್ನು, ಅದರ ಪ್ರಸಾರವಿಧಾನಗಳನ್ನು ವಿಚಾರಿಸೋಣ. ಸತ್ಯ–ಅಹಿಂಸೆಗಳನ್ನು ಕುರಿತು ಪುಸ್ತಕಗಳನ್ನು ಬರೆಯುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಸತ್ಯ–ಅಹಿಂಸೆಗಳ ಪ್ರಸಾರ ಸಾಧ್ಯ. ಅವುಗಳನ್ನು ಅನುಷ್ಠಾನಕ್ಕೆ ತಂದರೆ ಅನುಷ್ಠಾನದ ಜೀವನ ಪುಸ್ತಕಕ್ಕಿಂತ ಶ್ರೇಷ್ಠ. ಪುಸ್ತಕ ಮತ್ತು ಪತ್ರಿಕೆಗಳ ಪ್ರಕಟನೆ ಅನಗತ್ಯ ಎಂದು ನಾನು ಹೇಳುತ್ತಿಲ್ಲ. ಅವು ಅನಿವಾರ್ಯವೇನಲ್ಲ ಎಂದಷ್ಟೆ ನನ್ನ ಅಭಿಪ್ರಾಯ. ನಾವು ಸತ್ಯ–ಅಹಿಂಸೆಗಳ ನಿಜವಾದ ಆರಾಧಕರಾಗುವ ಪಕ್ಷದಲ್ಲಿ ಸಮಸ್ಯೆಗಳನ್ನು ಪರಿಹರಿಸಲು ಅಗತ್ಯವಾಗಿ ಬೇಕಾದ ಬುದ್ಧಿಶಕ್ತಿಯನ್ನು ಭಗವಂತನೆ ನಮಗೆ ದಯಪಾಲಿಸುತ್ತಾನೆ. ಪ್ರತಿಪಕ್ಷದ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳುವ ಇಚ್ಛೆ ಅಂತಹ ಶ್ರದ್ಧೆಯ ಪೂರ್ವಾಂಗವಾಗಿಯೇ

ಉಳಿದಿದೆ. ಪ್ರತಿಪಕ್ಷಿಯ ಮನಸ್ಸನ್ನು ಹೊಕ್ಕು ಆತನ ದೃಷ್ಟಿ ಏನೆಂದು ಅರಿಯಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಹಿಂಸೆಯ ಬಾಯನ್ನೇ ಅಹಿಂಸೆ ನೇರವಾಗಿ ಹೊಗುತ್ತದೆ ಎಂಬುದರ ಅರ್ಥ ಇದೇ. ಅಂತಹ ಮನೋಧರ್ಮದ ಕವಚ ನಮಗಿದ್ದರೆ ಅಹಿಂಸೆಯ ತತ್ತ್ವಗಳನ್ನು ಪ್ರಸಾರ ಮಾಡುವ ವಿಶ್ವಾಸ ನಮಗೆ ಬರುತ್ತದೆ. ಅದಿಲ್ಲದೆ ಪುಸ್ತಕದ, ಪತ್ರಿಕೆಗಳ ಪ್ರಚಾರ ವ್ಯರ್ಥ.೨೬

ನನ್ನ ಸಲಹೆಗಳಲ್ಲೆಲ್ಲ ಒಂದು ರಕ್ಷಾಸೂತ್ರ ಇದ್ದೇ ಇರುತ್ತದೆ. ತಮ್ಮ ಬುದ್ಧಿಗೂ ಹೃದಯಕ್ಕೂ ಒಪ್ಪಿಗೆಯಾಗದಿದ್ದರೆ ಯಾರೂ ಅವುಗಳನ್ನು ಅನುಸರಿಸ ಬೇಕಾಗಿಲ್ಲ.೨೭

ನನ್ನನ್ನು ಮೆಚ್ಚುವವರಿಗೂ ನನ್ನ ಮಿತ್ರರಿಗೂ ಒಂದು ಧೈರ್ಯ ಹೇಳಬಲ್ಲೆ. ಮಹಾತ್ಮಾ ಎಂಬುದನ್ನು ಮರೆತು ನನ್ನನ್ನು ಬರಿಯ 'ಗಾಂಧೀ' ಎಂದು ಭಾವಿಸುವುದಾದರೆ ಅವರು ನನ್ನ ಮೆಚ್ಚುಗೆಗೆ ಹೆಚ್ಚಾಗಿ ಪಾತ್ರರಾಗುತ್ತಾರೆ. ನಾನು ಯಾವ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕೆಂದು ಕಾರ್ಯಕ್ರಮ ಹಾಕಿಕೊಂಡಿದ್ದೇನೆಯೋ ಅದನ್ನು ತಾವು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು; ಇಲ್ಲವೆ ಅದರಲ್ಲಿ ಅವರಿಗೆ ನಂಬುಗೆ ಇರದಿದ್ದ ಪಕ್ಷದಲ್ಲಿ ಅದನ್ನು ಸರ್ವರೀತಿಯಿಂದಲೂ ವಿರೋಧಿಸಬೇಕು—ಇದೇ ನನ್ನ ಮಿತ್ರರು ನನಗೆ ತೋರಿಸಬಹುದಾದ ಗೌರವ.೨೮

ಯಾವ ಮಹಾ ಉದ್ಯಮದಲ್ಲಿಯೇ ಆಗಲಿ ನಿರ್ಣಯಕಾರಿಯಾಗುವುದು ಹೋರಾಡುವವರ ಸಂಖ್ಯೆಯಲ್ಲ, ಅವರ ಸತ್ತ್ವ. ಜಗತ್ತಿನ ಮಹಾವ್ಯಕ್ತಿಗಳೆಲ್ಲ ಏಕಾಂಗಿಯಾಗಿ ನಿಂತರು. ಝುರತುಷ್ಟ್ರ, ಬುದ್ಧ, ಏಸು, ಮಹಮ್ಮದ್ ಈ ಎಲ್ಲ ಮಹಾಪ್ರವಾದಿಗಳನ್ನೂ ಗಮನಿಸಿ. ನಾನಿನ್ನೂ ಹೆಸರಿಸಬಹುದಾದ ಇತರ ಹಲವರಂತೆಯೆ ಅವರೆಲ್ಲರೂ ಏಕಾಂಗಿಯಾಗಿಯೆ ಕೆಲಸ ಮಾಡಿದರು. ಆದರೆ ಅವರಿಗೆ ತಮ್ಮಲ್ಲಿಯೂ ಭಗವಂತನಲ್ಲಿಯೂ ಜೀವಂತ ಶ್ರದ್ಧೆಯಿತ್ತು; ಭಗವಂತ ತಮ್ಮ ಪಕ್ಕದಲ್ಲಿದ್ದಾನೆಂಬ ವಿಶ್ವಾಸ ಇದ್ದುದರಿಂದ ತಾವು ಏಕಾಕಿ ಗಳು ಎಂಬ ಭಾವನೆಯೆ ಅವರಿಗೆ ಬರಲಿಲ್ಲ.೨೯

ನನ್ನಲಿರುವ ಏನೋ ಒಂದು ವಾಣಿ ನನ್ನ ಸಂಕಟವನ್ನು ಕೂಗಿ ಸಾರು ವಂತೆ ನನ್ನನ್ನು ಪ್ರಚೋದಿಸುತ್ತಿದೆ. ಅದು ಯಾವುದೆಂಬುದನ್ನು ನಾನು

ಖಚಿತವಾಗಿ ಬಲ್ಲೆ. ನನ್ನನ್ನೆಂದೂ ವಂಚಿಸದ ನನ್ನೊಳಗಿನ ಆ ವಾಣಿ ಹೇಳುತ್ತದೆ: ' ನೀನು ಒಬ್ಬೊಂಟಿಗನೆ ಆಗಿ ನಿಲ್ಲಬೇಕಾಗಿ ಬಂದರೂ ಸರಿ, ಇಡಿಯ ಜಗತ್ತನ್ನೆ ಎದುರಿಸಿ ನಿಲ್ಲಬೇಕಾಗುತ್ತದೆ.

' ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರದುರನೆ ನೋಡಿದರೂ ಸರಿ, ನೀನು ಅದರ ದೃಷ್ಟಿಗೆ ದೃಷ್ಟಿ ಕೊಟ್ಟು ನಿಲ್ಲಬೇಕಾಗುತ್ತದೆ. ಭೀತಿ ಬೇಡ. ನಿನ್ನ ಹೃದಯದಲ್ಲಿ ನೆಲೆಸಿ ಹೀಗೆಂದು ಹೇಳುತ್ತಿರುವ ಆ ಅಣುರೂಪಿಯಲ್ಲಿ ನಿನಗೆ ಶ್ರದ್ಧೆಯಿರಲಿ. ಯಾವುದಕ್ಕಾಗಿ ನೀನು ಬದುಕ್ಕಿದ್ದೀಯೋ, ಯಾವುದಕ್ಕಾಗಿ ನೀನು ಮಡಿಯಬೇಕೋ ಅದಕ್ಕಾಗಿ ಮನೆ ಮಠ ಮಡದಿ ಮಕ್ಕಳು ಸರ್ವಸ್ವವನ್ನೂ ಪರಿತ್ಯಜಿಸು; ಆದರೆ ಅದರ ಸತ್ಯಕ್ಕೆ ಸಾಕ್ಷಿಯಾಗಿ ಬಾಳು.'[೨೦]

---

# ಯಥಾದರ್ಶನ

## (ಬರೆದವರು : ಶ್ರೀ ರಂ. ರಾ. ದಿವಾಕರ)

ಹಲವಾರು ಸಂಸ್ಕೃತ ಪದಗಳಿಗೆ ಅನೇಕ ಅರ್ಥಗಳು ಇರುವುದುಂಟು. ಅದೇ ರೀತಿ 'ಅರ್ಥ' ಎಂಬುದಕ್ಕೂ ಅನೇಕ ಅರ್ಥಗಳು ಇರುವುವು. ಇಲ್ಲಿ 'ಅರ್ಥ' ಎಂಬುದಕ್ಕೆ ಯಾವುದೇ ಉಪಯುಕ್ತ (ಈಗ ಇಲ್ಲವೆ ಆಮೇಲೆ) ವಸ್ತು, ಎಂಬ ಅರ್ಥವನ್ನು ಕಲ್ಪಿಸಬಹುದು. ಅರ್ಥಶಾಸ್ತ್ರದ ಇಂಗ್ಲೀಷ್ ಪುಸ್ತಕಗಳಲ್ಲಿ ಇದೇ ಅರ್ಥದಲ್ಲಿ 'ವೆಲ್ಥ್' ಎಂಬ ಶಬ್ದವನ್ನು ಉಪಯೋಗಿಸುವರು.

ಮೌರ್ಯರ ಕಾಲದಲ್ಲಿ (ಕ್ರಿಸ್ತಪೂರ್ವ ಮೂರನೇ ಶತಮಾನ ಅಂದರೆ ೨೨೦೦ ವರುಷಗಳಾಚೆ) ಸಮ್ರಾಟ್ ಚಂದ್ರಗುಪ್ತ ಮೌರ್ಯನ ಪ್ರಧಾನಮಂತ್ರಿ ಆದ ಕೌಟಿಲ್ಯನು 'ಅರ್ಥಶಾಸ್ತ್ರ' ಎಂಬ ಮಹಾಗ್ರಂಥವನ್ನು ರಚಿಸಿದನು. ಅಲ್ಲಿ 'ಅರ್ಥಶಾಸ್ತ್ರ' ಈ ಶಬ್ದದ ಅರ್ಥವು ಹೆಚ್ಚು ವ್ಯಾಪಕವಿರುವುದು; ರಾಜ್ಯಶಾಸನ ಶಾಸ್ತ್ರವೂ ಅದರಲ್ಲಿ ಒಳಗೊಂಡಿರುವುದು. ಮನುಷ್ಯನಿಗೆ ಇಷ್ಟವಾದ, ತಾತ್ಕಾಲಿಕವಾಗಿ ಇಲ್ಲವೆ ಕಾಲಾಂತರದಿಂದ ಅವನಿಗೆ ಉಪಯುಕ್ತವಾದ ಯಾವುದೇ ವಸ್ತು 'ಅರ್ಥ' ಈ ಸದರಿನಲ್ಲಿ ಸೇರಬಲ್ಲದು.

ನಮ್ಮ ಧರ್ಮಗ್ರಂಥಗಳಲ್ಲಿ ನಾಲ್ಕು 'ಪುರುಷಾರ್ಥಗಳು', ಮನುಷ್ಯಮಾತ್ರನಿಗೆ ಇಷ್ಟವಾದ ವಸ್ತುಗಳು, ವಿವರಿಸಲಾಗಿವೆ. ಅವಾವೆಂದರೆ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಪ್ರತಿಯೊಬ್ಬ ಮನುಷ್ಯನೂ ಇವುಗಳಲ್ಲಿ ಒಂದನ್ನೊ ಎರಡನ್ನೊ ಮೂರನ್ನೊ ಅಥವಾ ಎಲ್ಲವನ್ನೊ ಪಡೆಯಲು ಯತ್ನಿಸುತ್ತಿರುತ್ತಾನೆ. ಅವುಗಳಿಗಾಗಿ ನಾನಾ ತರದ ಸಾಧನಗಳನ್ನು ಉಪಯೋಗಿಸುತ್ತಾನೆ. ಒಳಿತು ಕೆಡಕು ಎನ್ನದೆ, ಪಾಪಪುಣ್ಯದ ವಿಚಾರಮಾಡದೆ, ಪರರ ಹಿತಾಹಿತಗಳತ್ತ ಲಕ್ಷ್ಯಗೊಡದೆ ತನ್ನ ಇಷ್ಟವನ್ನು ಸಾಧಿಸಲು ಹೆಣಗುತ್ತಿರುತ್ತಾನೆ. ಆ ಸಂದರ್ಭದಲ್ಲಿ ಧರ್ಮಶಾಸ್ತ್ರಕಾರರು, ಧರ್ಮಾಚರಣೆಯಿಂಡಲೇ ಈ ನಾಲ್ಕೂ ಪುರುಷಾರ್ಥಗಳು ಸಾಧಿಸಬಲ್ಲವು; ಧರ್ಮಾಚರಣೆಯನ್ನು ಬಿಟ್ಟರೆ ಯಾವ ಪುರುಷಾರ್ಥವೂ ಕೈವಶ ಆಗಲಾರದು, ಎಂದು ಘಂಟಾಘೋಷವಾಗಿ ಹೇಳುತ್ತ ಬಂದಿರುವರು. ಇದು

ಸನಾತನ ಧರ್ಮದ ಪರಂಪರೆಯಿರುವುದು ; ವೇದ, ಉಪನಿಷತ್ತುಗಳು, ಪುರಾಣ ಗಳು, ಆಗಮಗಳು, ಧರ್ಮಶಾಸ್ತ್ರಗಳು ಇವೆಲ್ಲವೂ ಏಕರೂಪವಾಗಿ, ಧರ್ಮಾನು ಕೂಲ ಆಚರಣೆಯಿಂದಲೇ ಮನುಷ್ಯನು ಅಭ್ಯುದಯ ಹಾಗೂ ನಿಃಶ್ರೇಯಸ ಇವೆರಡನ್ನೂ ಸಾಧಿಸಬಲ್ಲನು, ಎಂದು ಸಾರಿವೆ.

ಗಾಂಧೀಜೀಯವರು ಈ ಪರಂಪರೆಯನ್ನೇ ಅನುಸರಿಸಿರುವರು, ಎಂದು ಹೇಳುವುದು ಯಥಾರ್ಥವಾಗುವುದು.

## ಧರ್ಮಕ್ಕೆ ಅವಿರೋಧವಾದ ಅರ್ಥ

ನಾಲ್ಕು ಪುರುಷಾರ್ಥಗಳಲ್ಲಿ ಧರ್ಮ ಮತ್ತು ಮೋಕ್ಷ ಇವೆರಡೂ ಧರ್ಮಕ್ಕೆ ಅನುಸರಿಸಿಯೇ ಇರಬಲ್ಲವೆಂಬುದನ್ನೂ ಬೇರೆ ಹೇಳಬೇಕಾಗಿಲ್ಲ ; ಯಾಕೆಂದರೆ ಧರ್ಮವು ಧರ್ಮದ ವಿರುದ್ಧ ಇರಲಾರದು ; ಅದೇ ರೀತಿ ಮೋಕ್ಷವು ಧರ್ಮಮಾರ್ಗ ದಿಂದಲೇ ಸಾಗುವಾಗ ಕೈಗೆ ಸಿಕ್ಕತಕ್ಕ ಪಕ್ವಫಲವಾದುದರಿಂದ, ಅಲ್ಲಿಯೂ ಧರ್ಮವಿರುದ್ಧವಾಗಿ ನಡೆಯಲು ಅವಕಾಶವಿಲ್ಲ. ಆದರೆ ' ಅರ್ಥ 'ವನ್ನು ಸಾಧಿಸು ವಾಗ, ' ಕಾಮ 'ವನ್ನು ಪೂರೈಸುವಾಗ ಮನುಷ್ಯನು ಧರ್ಮವನ್ನು ಬಿಟ್ಟು ಅಧರ್ಮ ವನ್ನು, ಪುಣ್ಯವನ್ನು ಬಿಟ್ಟು ಪಾಪವನ್ನು ಮಾಡುವ ಸಂಭವವು ಬಹಳ. ಅಥವಾ ಅರ್ಥ ಹಾಗೂ ಕಾಮಗಳನ್ನು ಸಾಧಿಸುವಾಗ ಮನುಷ್ಯನು ಸಾಮಾನ್ಯ ವಾಗಿ ಅಧರ್ಮವನ್ನು ಆಚರಿಸುವನು ಎಂದು ಹೇಳಬಹುದು. ಆದುದರಿಂದ ಆ ಸಂದರ್ಭಗಳಲ್ಲಿ ಧರ್ಮಕ್ಕೆ ಅವಿರೋಧವಾಗಿ ನಡೆಯುವ ಎಚ್ಚರಿಕೆ ಮನುಷ್ಯ ನಿಗೆ ಇದ್ದೇ ಇರಬೇಕು.

ಯಾವ ದೇಹಧಾರಿಯೂ ಅರ್ಥ ಹಾಗೂ ಕಾಮ ಇವುಗಳನ್ನು ಸಂಪೂರ್ಣ ವಾಗಿ ಬಿಟ್ಟುಬಿಡಲಾರ. ಯಾಕೆಂದರೆ ಅವು ದೇಹಧರ್ಮಗಳು. ವಿದೇಹ ಮುಕ್ತಿಯನ್ನು ಪಡೆದವನೇ ಅವುಗಳಾಚೆ ಹೋಗಬಲ್ಲನು. ಇತರರೆಲ್ಲರೂ ಅವುಗಳಿಗೆ ಒಳಗು. ದೇಹಕ್ಕೆ ಇರಲು ಸ್ಥಳ ಬೇಕು, ಜೀವಿಸಲು ಆಹಾರ ಬೇಕು. ಇವೆರಡೂ ಅರ್ಥ ಮತ್ತು ಕಾಮ ಇವುಗಳಿಲ್ಲದೆ ದೊರಕವು. ' ಬೇಕು ' ಎಂಬುದೇ ಕಾಮ, ಬೇಕಾದುದನ್ನು ಪಡೆಯುವುದೇ ಅರ್ಥ. ಒಬ್ಬ ಮನುಷ್ಯನು ಪೂರ್ಣ ಅತೀತಾವಸ್ಥೆಯನ್ನು ಹೊಂದಿ ನಿಷ್ಕಾಮನಾದರೂ ದೇಹವಿರುವವರೆಗೆ

ಜ್ಞಾತಾಜ್ಞಾತರೀತಿಯಿಂದ ಅವನು ಇರಲು ಸ್ಥಲವನ್ನು ದೊರಕಿಸಬೇಕು, ಜೀವಿಸಲು ಆಹಾರವನ್ನು ಪಡೆಯಬೇಕು. ಆದುದರಿಂದ ಭಗವಂತನು ಸಹ ಗೀತೆಯಲ್ಲಿ ವಿಭೂತಿಯೋಗದಲ್ಲಿ (ಹತ್ತನೇ ಅಧ್ಯಾಯ) ಭೂತಮಾತ್ರದಲ್ಲಿರುವ ಕಾಮಕ್ಕೆ ವಿಭೂತಿಯ ಪದವಿಯನ್ನು ಕೊಟ್ಟಿದ್ದಾನೆ. ಆದರೆ ಅದು 'ಧರ್ಮಾ-ವಿರುದ್ಧೋ' ಧರ್ಮಕ್ಕೆ ಅವಿರೋಧವಾದುದಿರಬೇಕು, ಎಂಬ ಎಚ್ಚರಿಕೆ ಕೊಟ್ಟಿದ್ದಾನೆ. ಇದೇ ಮಾತು ಅರ್ಥಕ್ಕಾದರೂ ಅನ್ವಯಿಸುವುದು, ಯಾಕೆಂದರೆ ಮೂರ್ತಿವೆತ್ತ, ರೂಪುಗೊಂಡ ಕಾಮವೇ ಅರ್ಥ, ಮನೋಗತ ಕಾಮವೇ ಮೈಗೊಂಡು ಅರ್ಥರೂಪವನ್ನು ಧರಿಸಿ ಕಂಗೊಳಿಸುವುದು.

ಇನ್ನು ಜೀವದಿಂದ, ಜೀವನದಿಂದ, ಜೀವನದ ಸ್ವಾಭಾವಿಕವ್ಯಾಪಾರಗಳಿಂದ ಅವಿಭಾಜ್ಯವಿದ್ದ ಕಾಮ ಮತ್ತು ಅರ್ಥ ಇವುಗಳನ್ನು, ಈ ಶಕ್ತಿಗಳನ್ನು, ಈ ವಸ್ತುಗಳನ್ನು ಧರ್ಮಾಚರಣಕ್ಕೆ ಅವಶ್ಯವಿದ್ದಮಟ್ಟಿಗೆ ಮಾತ್ರ ಹಾಗೂ ಮೋಕ್ಷಾನುಕೂಲವಾಗುವ ಹಾಗೆ ಮಾತ್ರ ಹೇಗೆ ಅಂಕೆಯಲ್ಲಿಟ್ಟುಕೊಳ್ಳಬೇಕು ಇದೇ ಗಾಂಧೀಜಿಯವರಿಗೆ ಎದುರಾದ ಸಮಸ್ಯೆಯಾಗಿತ್ತು.

## ಅನಾಸಕ್ತಿ – ಅಸ್ತೇಯ, ಅಪರಿಗ್ರಹ

ಅವರು ಈ ವಿಷಯದಲ್ಲಿ ಪುರಾತನವಾದರೂ ಎರಡು ಸನಾತನ ತತ್ತ್ವಗಳನ್ನು ಅನುಸರಿಸಿದರು. ಅರ್ಥಶಾಸ್ತ್ರದಲ್ಲಿ ಅವೇ ಅವರ ಧರ್ಮವೆನಿಸಿದವು : ಒಂದು ಅನಾಸಕ್ತಿ ಮತ್ತು ಇನ್ನೊಂದು ಅಸ್ತೇಯ–ಅಪರಿಗ್ರಹ. ಇವುಗಳಿಗೆ ಮೂಲಾಧಾರವಾದ ಮಂತ್ರವು ಈಶಾವಾಸ್ಯೋಪನಿಷತ್ತಿನಲ್ಲಿರುವುದು : **ಈಶಾ-ವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ತೇನ ತ್ಯಕ್ತೇನ ಭುಂಜೀಥಾಃ । ಮಾ ಗೃಧಃ ಕಸ್ಯ ಸ್ವಿತ್ ಧನಮ್ ॥** ಜಗತ್ತಿನಲ್ಲಿರುವುದೆಲ್ಲವೂ ಈಶನ ಆವಾಸಸ್ಥಾನವು. ಎಲ್ಲೆಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ಅವನೇ ತುಂಬಿಕೊಂಡಿದ್ದಾನೆ. ಜೀವನಕ್ಕೆ ಆವಶ್ಯಕವಾದುದನ್ನು ಸ್ವೀಕರಿಸುವಾಗ ತ್ಯಾಗಬುದ್ಧಿಯನ್ನಿಟ್ಟುಕೊಂಡು, ಅದು ಈಶಪ್ರಸಾದವೆಂಬ ಭಾವನೆಯಿಂದ ಕೈಕೊಳ್ಳಬೇಕು. ಪರರ ಧನವನ್ನು, ವಸ್ತುವನ್ನು ಎಂದೆಂದಿಗೂ ಇಚ್ಛಿಸಬಾರದು. ಇದೇ ಈ ಮೇಲಿನ ಶ್ಲೋಕದ ಸಾರ. ಇದೇ ರೀತಿ ಕಾಮದ

ವಿಷಯದಲ್ಲಿ ಅವರು ಅನಾಸಕ್ತಿಯ ಭಾವವನ್ನು ಸಾಧಿಸಿದರು. ಈ ಧರ್ಮ ಭೂಮಿಕೆಯಿಂದಲೆ ಅವರು ಅರ್ಥಶಾಸ್ತ್ರದತ್ತ ನೋಡುತಿದ್ದರು ಹಾಗೂ ಮನುಷ್ಯ ಮಾತ್ರರು ಕಾಮ ಮತ್ತು ಅರ್ಥ ಇವುಗಳತ್ತ ಇದೇ ಭಾವನೆಯಿಂದ ನೋಡಿ ಆಚರಿಸಬೇಕು ಎಂದು ಪ್ರತಿಪಾದಿಸುತಿದ್ದರು. ಕಾಲವಶಾತ್, ಪರಂಪರಾ ವಶಾತ್, ಪ್ರಯತ್ನವಶಾತ್ ತನ್ನೆಡೆಗೆ ಬಂದ ಆಸ್ತಿಪಾಸ್ತಿಗಳನ್ನೆಲ್ಲ ಮನುಷ್ಯನು, ತಾನು ಅದರ ಧರ್ಮದರ್ಶಿ ; ಮನುಷ್ಯಮಾತ್ರರೆಲ್ಲ ಅದರ ಲಾಭವನ್ನು ಪಡೆಯಲು ಬಾಧ್ಯರು, ಎಂಬ ಭಾವನೆಯಿಂದ ವರ್ತಿಸಬೇಕೆಂದು ಅವರು ಸಾರಿದರು. ಆಸ್ತಿ, ಉತ್ಪಾದನೆ ಮತ್ತು ವಿತರಣ, ಶ್ರಮ, ಶ್ರಮಜೀವಿಗಳು, ಯಂತ್ರ ಮತ್ತು ಅದರ ಉಪಯೋಗ, ವಸ್ತುಗಳ ಉಪಯೋಗ, ಸ್ವದೇಶಿ ತತ್ತ್ವ, ಇವೆಲ್ಲವುಗಳನ್ನು ಅವರು ಮೇಲೆ ಹೇಳಿದ ಉಚ್ಚಭೂಮಿಕೆಯಿಂದ ಮತ್ತು ಮಾನವಮಾತ್ರರ ಹಿತ, ಹಕ್ಕುಬಾಧ್ಯತೆಗಳು ಈ ದೃಷ್ಟಿಯಿಂದಲೇ ನೋಡುತ್ತಿದ್ದರು. ಎದುರಾದ ಸಮಸ್ಯೆಗಳ ಪರಿಹಾರವನ್ನು ಕೂಡ ಅವರು ಅದೇ ದೃಷ್ಟಿಯಿಂದ ಮಾಡಲು ಉಜ್ಜುಗಿಸುತಿದ್ದರು.

ಮಾನವನ ಧರ್ಮಜೀವನ, ಅವನ ಆತ್ಮಸ್ವಾತಂತ್ರ್ಯ, ಆತ್ಮವಿಕಾಸ, ಆತ್ಮೋದ್ಧಾರ, ಸ್ವಾಭಿಮಾನಪೂರ್ವಕಜೀವನ, ಜೀವನಕ್ಕೆ ಅವಶ್ಯವಿದ್ದ ಶ್ರಮ, ಸರ್ವೋದಯ ಸಮಾಜದ ನಿರ್ಮಾಣ ಇವುಗಳನ್ನು ಅವರು ತಮ್ಮ ಧ್ಯೇಯಗಳನ್ನಾಗಿ ಇಟ್ಟುಕೊಂಡಿದ್ದರೇ ಹೊರತು, ಹೆಚ್ಚು ಧನವನ್ನು, ಅನೇಕಾನೇಕ ವಸ್ತುಗಳನ್ನು ಹೇಗೆ ಉತ್ಪನ್ನಮಾಡಬೇಕು, ಅದನ್ನು ಹೇಗೆ ಗಳಿಸಬೇಕು, ಅದನ್ನು ಹೇಗೆ ಕೂಡಿಹಾಕಬೇಕು ಇತ್ಯಾದಿ ಮಾತುಗಳು ಅವರ ದೃಷ್ಟಿಯಿಂದ ಬಹಳ ಗೌಣವಾದವುಗಳು.

ಈ ಮೇಲೆ ಕಾಣಿಸಿದ ಗಾಂಧೀಜಿಯವರ ಮೂಲಗ್ರಾಹಿ ದೃಷ್ಟಿಯ ರಹಸ್ಯವನ್ನು ತಿಳಿದುಕೊಂಡರೆ ಅವರ ಅರ್ಥಶಾಸ್ತ್ರದ ಅನೇಕ ಒಗಟುಗಳು ಸಹಜವಾಗಿಬಿಡುವುವು. ಅವರು ಯಂತ್ರವಿರೋಧಿಗಳು, ಪುರಾತನವಾದಿಗಳು, ಅವರ ಅರ್ಥಶಾಸ್ತ್ರ ಈಗಿನ ಕಾಲಕ್ಕೆ ಸಲ್ಲದು ಎಂಬ ಮುಂತಾದ ಆಕ್ಷೇಪಗಳಿಗೆ ಅವರ ಮಾನವೀಯ ಅರ್ಥಶಾಸ್ತ್ರವು ಚೆನ್ನಾಗಿ ಉತ್ತರ ಕೊಡಬಲ್ಲದು. ಜಡವಾದ ಧನವು ಹೆಚ್ಚೋ, ಆ ಬಗ್ಗೆ ಅಪಾರವಾದ ಆಸೆ ಹೆಚ್ಚೋ, ಅಂಥ ಧನೋತ್ಪಾದನ

ಹಾಗೂ ವಿತರಣದಲ್ಲಿ ಆಗುವ ಮಾನವರ ದುರ್ದಶೆ ಹೆಚ್ಚೋ ಅಥವಾ ಮಾನವತೆ, ಮಾನವನ ಆಂತರಿಕವಿಕಾಸ, ಸಮಾಧಾನ, ಶಾಂತಿ, ಸಮದರ್ಶನ ಇವು ಹೆಚ್ಚೋ? ಈ ಪ್ರಶ್ನೆಗೆ ಅವರು ಕೊಟ್ಟ ಉತ್ತರವೇ ಅವರ ಅರ್ಥಶಾಸ್ತ್ರದ ತಳಹದಿ. ಅದನ್ನು ತಿಳಿದುಕೊಂಡು ಓದಿದರೆ ಅವರು ಈ ವಿಷಯವನ್ನು ಕುರಿತು ಬರೆದುದೆಲ್ಲ ತಿಳಿಯಾಗುವುದು.

ಜಯ ಹಿಂದ್ !

---

# ಪ್ರಕಾಶಕೀಯ

‘ ಅರ್ಥವಿಚಾರ ’—ನಮ್ಮ ಮಾಲೆಯ ಎಂಟನೆಯ ಗ್ರಂಥ. ಅರ್ಥ-ಜೀವನದ ಹಲವಾರು ಸಮಸ್ಯೆಗಳನ್ನು, ಮುಖಗಳನ್ನು ಕುರಿತು ಗಾಂಧೀಜೀ ಬರೆದ ಬರೆಹಗಳ ಸಾರಭೂತ ಸಂಕಲನ ಇದು. ಗಾಂಧೀ ದೃಷ್ಟಿಯ ಅರ್ಥ-ಶಾಸ್ತ್ರದ ತರ್ಕಬದ್ಧ ನಿರೂಪಣೆಯಾಗಿ ಈ ಗ್ರಂಥವನ್ನು ಸಿದ್ಧಪಡಿಸಲಾಗಿದೆ. ಇದರ ಕನ್ನಡ ಅನುವಾದ ನಮ್ಮ ಸಂಪಾದಕವರ್ಗದ ಸಹಾಯಕ ಸಂಪಾದಕರಾದ ಶ್ರೀ ಖಾದ್ರಿ ಶಾಮಣ್ಣನವರದು.

ಗ್ರಂಥದ ವಿಷಯವನ್ನು ಭಾಷಾಂತರ ಮಾಡಲು ಅಹಮದಾಬಾದಿನ ನವಜೀವನ ಟ್ರಸ್ಟ್‌ನವರು ಕೃಪೆಯಿಟ್ಟು ಅನುಮತಿ ನೀಡಿದಾರೆ. ಮುಖಚಿತ್ರವನ್ನು ಶ್ರೀ ಡಿ. ಜಿ. ಟೆಂಡುಲ್‌ಕರರ ‘ ಮಹಾತ್ಮಾ ’ ಗ್ರಂಥದಿಂದ ಆರಿಸಿಕೊಳ್ಳಲಾಗಿದೆ. ಪುಸ್ತಕವನ್ನು ಮೈಸೂರಿನ ಉಷಾ ಪ್ರೆಸ್ಸಿನವರೂ, ಮೇಲುಹೊದಿಕೆಯನ್ನು ವೆಸ್ಲಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್‌ನವರೂ ಅಂದವಾಗಿ ಮುದ್ರಿಸಿಕೊಟ್ಟಿದಾರೆ. ಇವರಿಗೆಲ್ಲ ಸಂಪಾದಕ ಮಂಡಲಿ ಕೃತಜ್ಞತೆಯನ್ನು ಅರ್ಪಿಸುತ್ತದೆ.

ಮೈಸೂರು
ನವೆಂಬರ್, ೧೯೫೯

ಪ್ರಧಾನ ಸಂಪಾದಕರು,
ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ

# ಪರಿವಿಡಿ

ಅಧ್ಯಾಯ – ೧

# ಸರ್ವೋದಯ*

## ಪ್ರವೇಶ

ಮಾನವಕುಲದ ಬಹುಜನರ ಸುಖಸಂವರ್ಧನೆಯೇ ಮನುಷ್ಯನ ಕರ್ತವ್ಯ ಸರ್ವಸ್ವ—ಎಂದು ಪಾಶ್ಚಾತ್ಯರ ಸಾಮಾನ್ಯ ಎಣಿಕೆ; ಸುಖವೆಂದರೆ ಕೇವಲ ಭೌತ ಸುಖ, ಆರ್ಥಿಕ ಸಮೃದ್ಧಿ—ಇಷ್ಟೆ. ಈ ಸುಖಸಾಧನೆಯಲ್ಲಿ ನೀತಿ ನಿಯಮಗಳನ್ನು ಮುರಿದರೂ ಅಷ್ಟೇನೂ ಪರಿವೆ ಇಲ್ಲ. ಬಹುಸಂಖ್ಯಾಕರ ಸುಖವನ್ನೇ ಅರಸುವುದರಿಂದ ಅಲ್ಪಸಂಖ್ಯಾಕರನ್ನು ಬಲಿಕೊಟ್ಟು ಅದನ್ನು ಪಡೆದರೆ ಹಾನಿಯಿದೆಯೆಂದು ಪಾಶ್ಚಾತ್ಯರು ಎಣಿಸುವುದಿಲ್ಲ. ಈ ವಿಚಾರ ಸರಣಿಯ ಪರಿಣಾಮ ಯೂರೋಪಿನ ಹಣೆಯ ಮೇಲೆ ಎದ್ದು ಕಾಣುತ್ತದೆ.

ನೀತಿನಿಯಮಗಳನ್ನು ಧಿಕ್ಕರಿಸಿ ಕೇವಲ ದೈಹಿಕ, ಆರ್ಥಿಕ ಕ್ಷೇಮವಷ್ಟನ್ನೆ ಹೀಗೆ ಅರಸುವುದು ದೈವೀ ನಿಯಮಕ್ಕೆ ವಿರುದ್ಧವೆಂದು ಪಾಶ್ಚಾತ್ಯರಲ್ಲಿ ಹಲವು ಬುದ್ಧಿವಂತರು ತೋರಿಸಿದಾರೆ. ಅಂಥವರಲ್ಲಿ ಒಬ್ಬ ಜಾನ್ ರಸ್ಕಿನ್; ನೀತಿ ನಿಯಮವನ್ನು ಪಾಲಿಸಿದರೆ ಮಾತ್ರವೇ ಮಾನವರು ಸುಖವಾಗಿದ್ದಾರು ಎಂದು ಆತ ' ಈ ಕಟ್ಟಕಡೆಯವನಿಗೂ '—ಎಂಬುದರಲ್ಲಿ ವಾದಿಸಿದ.

ಭಾರತದವರಾದ ನಾವು ಇಂದು ಬಹಳಮಟ್ಟಿಗೆ ಪಾಶ್ಚಾತ್ಯರನ್ನು ಅನುಕರಿಸತೊಡಗಿದೇವೆ. ಪಶ್ಚಿಮದವರ ಸದ್ಗುಣಗಳನ್ನು ಅನುಕರಿಸುವುದು ಆವಶ್ಯಕ, ಆದರೆ ಪಾಶ್ಚಾತ್ಯರ ಮಟ್ಟ ಎಷ್ಟೋ ವೇಳೆ ಕೆಟ್ಟದು, ಕೆಟ್ಟ ಸಂಗತಿಗಳನ್ನು ವರ್ಜಿಸಬೇಕೆಂದು ಎಲ್ಲರೂ ಒಪ್ಪುತ್ತಾರೆ.

ದಕ್ಷಿಣ ಆಫ್ರಿಕದ ಭಾರತೀಯರು ಸಂಕಟಕಾರಕ ಸ್ಥಿತಿಗೆ ಇಳಿದುಬಿಟ್ಟಿದಾರೆ. ಹಣ ಗಳಿಸಲೆಂದು ವಿದೇಶಕ್ಕೆ ಹೋಗುತ್ತೇವೆ, ಬೇಗ ಶ್ರೀಮಂತರಾಗುವ

[* ಗಾಂಧೀಜೀ ಬರೆದ ಜಾನ್ ರಸ್ಕಿನ್ ಮಹಾಶಯನ ' ಅನ್‌ಟು ದಿಸ್ ಲಾಸ್ಟ್ ' (ಈ ಕಟ್ಟಕಡೆಯವನಿಗೂ) ಎಂಬ ಪ್ರಬಂಧದ ತಾತ್ಪರ್ಯ.]

ಭರದಲ್ಲಿ ನೀತಿನಿಯಮಗಳನ್ನು ಅಲಕ್ಷಿಸುತ್ತೇವೆ, ಭಗವಂತ ನಮ್ಮ ಎಲ್ಲ ಕ್ರಿಯೆಗಳನ್ನೂ ಒರೆಹಚ್ಚಿ ನೋಡುವನೆಂಬುದನ್ನು ಮರೆಯುತ್ತೇವೆ. ಸ್ವಾರ್ಥ ನಮ್ಮ ಸಾಮರ್ಥ್ಯವನ್ನೆಲ್ಲ ಹೀರಿಬಿಡುತ್ತದೆ, ನಮ್ಮ ಸದಸದ್ವಿವೇಕವನ್ನು ಕುಂಠಿತಗೊಳಿಸುತ್ತದೆ. ತತ್ಫಲವಾಗಿ ವಿದೇಶಗಳಲ್ಲಿ ಇದ್ದು ಏನನ್ನೂ ಗಳಿಸದೆ ಬಹಳಷ್ಟು ಕಳೆದುಕೊಳ್ಳುತ್ತೇವೆ, ಕನಿಷ್ಠ ಪಕ್ಷ ಪೂರ್ಣ ಲಾಭವನ್ನಂತೂ ಪಡೆಯಲಾರದಾಗುತ್ತೇವೆ. ನೀತಿನಿಯಮ ಜಗತ್ತಿನ ಎಲ್ಲ ಧರ್ಮಗಳ ಅಗತ್ಯ ಅಂಗ. ಧರ್ಮದ ಹೊರತಾಗಿ ನಮ್ಮ ಸಾಮಾನ್ಯ ವ್ಯವಹಾರಜ್ಞಾನವೂ ನೀತಿ ನಿಯಮವನ್ನು ಪಾಲಿಸಬೇಕಾದ ಆವಶ್ಯಕತೆಯನ್ನು ನಿರ್ದೇಶಿಸುತ್ತದೆ. ರಸ್ಕಿನ್ ಮುಂದಿನ ಈ ಪುಟಗಳಲ್ಲಿ ತೋರಿಸುವಂತೆ ಅವುಗಳನ್ನು ಪಾಲಿಸಿದರೇ ನಾವು ಸುಖಿಗಳಾದೇವು.

ಮಾನವರಾಗಿ ನಮ್ಮ ಕರ್ತವ್ಯವೇನೆಂಬ ಅಂಶವನ್ನು ಸಾಕ್ರೆಟಿಸ್ ಪ್ಲೇಟೋವಿನ 'ಅಪಾಲಜಿ'ಯಲ್ಲಿ ಹೇಳುತ್ತಾನೆ. ಆತ ತನ್ನ ನುಡಿಯಷ್ಟೇ ಒಳ್ಳಿತಾಗಿ ನಡೆದ. ರಸ್ಕಿನ್ನನ 'ಈ ಕಟ್ಟಕಡೆಯವನಿಗೂ' (Unto This Last) ಎನ್ನುವುದು ಸಾಕ್ರೆಟೀಸನ ವಿಚಾರಗಳ ವಿಕಸನವೇ ಎಂದು ನನ್ನ ಭಾವನೆ; ಈ ವಿಚಾರಗಳನ್ನು ಕೃತಿಗಿಳಿಸಬೇಕೆಂದರೆ ಜೀವನದ ವಿವಿಧ ರಂಗಗಳಲ್ಲಿ ಜನ ಹೇಗೆ ನಡೆದುಕೊಳ್ಳಬೇಕೆಂಬುದನ್ನೇ ಹೇಳುತ್ತಾನೆ. ಮುಂದೆ ಬರುವುದು Unto This Lastನ ಅನುವಾದವಲ್ಲ, ಒಂದು ತಾತ್ಪರ್ಯ ರೂಪ. ಅನುವಾದ 'ಇಂಡಿಯನ್ ಒಪಿನಿಯನ್'ನ ಓದುಗರಿಗೆ ಅಷ್ಟು ಪ್ರಯೋಜನಕ್ಕೆ ಬಾರದು. ಶೀರ್ಷಿಕೆಯನ್ನೂ ಸಹ ಭಾಷಾಂತರಿಸಿಲ್ಲ, 'ಸರ್ವೋದಯ' (ಸರ್ವರ ಉದಯ) ಎಂದು ಭಾವಾಂತರಿಸಲಾಗಿದೆ—ಅದೇ ಈ ಪುಸ್ತಕ ಬರೆದಾಗ ರಸ್ಕಿನ್ನನ ಗುರಿ.

## ಸತ್ಯದ ಮೂಲ

ಮನುಷ್ಯ ಎಷ್ಟೋ ತಪ್ಪು ಮಾಡುತ್ತಾನೆ, ಆದರೆ ಮಾನವಜೀವನದ ಪರಸ್ಪರ ಸ್ನೇಹ-ಸಹಾನುಭೂತಿಯ ಭಾವನೆಗಳ ಪ್ರಭಾವವನ್ನು ಗಮನಿಸದೆ ಅವನನ್ನು ಕೇವಲ ಒಂದು ಯಂತ್ರವೆಂದು ತಿಳಿದು ವ್ಯವಹಾರದ ಕಟ್ಟಳೆಗಳನ್ನು ರಚಿಸುವುದಕ್ಕಿಂತ ದೊಡ್ಡ ತಪ್ಪು ಮತ್ತೊಂದಿಲ್ಲ. ಅಂಥ ತಪ್ಪು ನಾಚಿಕೆ

ಗೇಡಿನದು. ಇತರ ತಪ್ಪುಗಳಲ್ಲಿ ಮೇಲೆ ಮೇಲೆ ನೋಡಲು ಸತ್ಯದ ಭಾಸವಾದಂತೆ ಆಗುವಂತೆಯೇ ಲೌಕಿಕ ನಿಯಮಗಳ ವಿಷಯದಲ್ಲಿಯೂ ಆಗುತ್ತದೆ.

ಲೌಕಿಕ ನಿಯಮಗಳ ಕಟ್ಟಳೆಕಾರರು ಎನ್ನುತ್ತಾರೆ: ಪರಸ್ಪರ ಸ್ನೇಹ ಸಹಾನುಭೂತಿಗಳು ಆಕಸ್ಮಿಕ ಸಂಗತಿಗಳು, ಮನುಷ್ಯನ ಸಾಮಾನ್ಯ ಸ್ವಭಾವದ ಹಾದಿಯಲ್ಲಿ ಅಡ್ಡಿ ಒಡ್ಡುವಂಥವು; ಆದರೆ ಲೋಭ ಹಾಗೂ ಮುಂಬರಿವ ಬಯಕೆಗಳು ಸದಾ ಸ್ಥಿರವಾದ ಪ್ರವೃತ್ತಿಗಳು. ಆದುದರಿಂದ ಆಕಸ್ಮಿಕ ಸಂಗತಿಗಳಿಂದ ದೂರವಿರಬೇಕು, ಮಾನವ ಕೇವಲ ಧನಾರ್ಜನೆಯ ಯಂತ್ರವೆಂದು ತಿಳಿದು, ಯಾವ ಬಗೆಯ ಶ್ರಮ ಮತ್ತು ಕೊಡ-ತಕ್ಕೊಳ್ಳುವ ವ್ಯವಹಾರದಿಂದ ಅತ್ಯಂತ ಹೆಚ್ಚಿನ ಧನಾರ್ಜನೆ ಸಾಧ್ಯವೆಂಬುದನ್ನು ವಿಚಾರಮಾಡಬೇಕು. ಮೊದಲು ಇಂಥ ವಿಚಾರದ ಆಧಾರದ ಮೇಲೆ ವ್ಯವಹಾರದ ನೀತಿಯನ್ನು ನಿಶ್ಚಯಿಸಿ, ಬಳಿಕ ಸ್ನೇಹ-ಸಹಾನುಭೂತಿಗಳಿಂದ ಕೆಲಸಮಾಡಿ ಲೋಕ ವ್ಯವಹಾರ ನಡೆಸಲೊಲ್ಲರೇಕೆ ?

ಪರಸ್ಪರ ಸ್ನೇಹ-ಸಹಾನುಭೂತಿಯ ಶಕ್ತಿ ಲೇವಾದೇವಿಯ ನಿಯಮದಂಥದೇ ಆಗಿದ್ದರೆ ಇದು ಸರಿಯೆನ್ನಬಹುದಿತ್ತು. ಮನುಷ್ಯನ ಭಾವನೆ ಅವನ ಅಂತರಂಗದ ಬಲ, ಕೊಟ್ಟು ತೆಗೆದುಕೊಳ್ಳುವ ಕಟ್ಟಳೆ ಸಾಂಸಾರಿಕ ನಿಯಮ. ಎಂದರೆ ಎರಡೂ ಒಂದೇ ಬಗೆಯದಲ್ಲ, ಒಂದೇ ವರ್ಗದ್ದಲ್ಲ. ಒಂದು ವಸ್ತು ಒಂದು ದಿಕ್ಕಿನಲ್ಲಿ ಹೋಗುತ್ತಿರುವಾಗ ಅದರ ಮೇಲೆ ಒಂದು ಕಡೆಯಿಂದ ಸ್ಥಿರ ಶಕ್ತಿ, ಇನ್ನೊಂದು ಕಡೆಯಿಂದ ಆಕಸ್ಮಿಕ ಶಕ್ತಿ ತಗಲುತ್ತದೆಂದು ಭಾವಿಸಿದರೆ ಮೊದಲು ನಾವು ಸ್ಥಿರಶಕ್ತಿಯ ಬಲವನ್ನು ಅಂದಾಜು ಹಾಕುತ್ತೇವೆ, ಬಳಿಕ ಆಕಸ್ಮಿಕ ಶಕ್ತಿಯದನ್ನು. ಎರಡೂ ಶಕ್ತಿಗಳ ಬಲದ ಅಂದಾಜು ದೊರೆತಮೇಲೆ ಆ ವಸ್ತುವಿನ ವೇಗವನ್ನು ಅಳೆಯಬಲ್ಲೆವು. ಇವೆರಡೂ ಬಗೆಯ ಶಕ್ತಿಗಳು ಒಂದೇ ಬಗೆಯವಾದ ಕಾರಣ ಅವುಗಳ ಎಣಿಕೆ ಸಾಧ್ಯ; ಆದರೆ ಮಾನವ ವ್ಯವಹಾರದಲ್ಲಿ ಲೇವಾದೇವಿಯ ಸ್ಥಿರನಿಯಮದ ಶಕ್ತಿ ಹಾಗೂ ಪರಸ್ಪರ ಭಾವನಾರೂಪದ ಆತ್ಮಶಕ್ತಿ ಬೇರೆ ಬೇರೆ ಬಗೆಯ ಶಕ್ತಿಗಳು. ಭಾವನೆಯ ಪ್ರಭಾವ ಬೀಳುವುದೂ ಬೇರೆ ರೀತಿಯಲ್ಲಿಯೇ, ಅದರಿಂದ ಮನುಷ್ಯನ ರೂಪವೇ ಬದಲಾಗಿಬಿಡುತ್ತದೆ. ಆದುದರಿಂದ ವಸ್ತುವಿನ ವೇಗದ ಮೇಲೆ ಬೀಳುವ ಭಿನ್ನಭಿನ್ನ ಶಕ್ತಿಗಳ ಪ್ರಭಾವವನ್ನು ಸಾಧಾರಣ ಕೂಡಿ-ಕಳೆಯುವ ಲೆಕ್ಕದ

ಪ್ರಕಾರ ಎಣಿಕೆಹಾಕುವಂತೆ ಭಾವನೆಗಳ ಪ್ರಭಾವದ ಲೆಕ್ಕವನ್ನು ಹಾಕಲು ಸಾಧ್ಯವಿಲ್ಲ. ಮನುಷ್ಯನ ಭಾವನೆಗಳ ಪ್ರಭಾವದ ಪರೀಕ್ಷೆಯಲ್ಲಿ ಲೇವಾದೇವಿ, ಕ್ರಯ-ವಿಕ್ರಯ ಅಥವಾ ಬೇಡಿಕೆ-ಉತ್ಪಾದನೆಗಳ ನಿಯಮಗಳ ಜ್ಞಾನ ಕೆಲಸಕ್ಕೆ ಏನೂ ಬಾರದು.

ಲೌಕಿಕಶಾಸ್ತ್ರದ ನಿಯಮಗಳು ತಪ್ಪೆಂದೇನೂ ಹೇಳುವ ಕಾರಣವಿಲ್ಲ. ಮನುಷ್ಯನ ಶರೀರದಲ್ಲಿ ಕೇವಲ ಮಾಂಸ ಮಾತ್ರ ಇದೆ, ಅಸ್ಥಿಪಂಜರವಿಲ್ಲ— ಎಂದು ತಿಳಿಯುವ ವ್ಯಾಯಾಮ ಶಿಕ್ಷಕ ತನ್ನ ನಿಯಮಗಳನ್ನು ಹಾಗೆಯೇ ರಚಿಸಿದರೆ ಅವು ಸರಿಯಾದುವಾಗಿದ್ದರೂ ಅಸ್ಥಿಪಂಜರವುಳ್ಳ ಮನುಷ್ಯನಿಗೆ ಅನ್ವಯವಾಗಲಾರವು. ಅದೇ ರೀತಿ ಲೌಕಿಕ ಶಾಸ್ತ್ರದ ನಿಯಮಗಳು ಸರಿಯಾದುವಾಗಿದ್ದರೂ ಭಾವನೆಗಳಿಂದ ಬಂಧಿತನಾದ ಮನುಷ್ಯನಿಗೆ ಅವು ಅನ್ವಯವಾಗಲಾರವು. ಮನುಷ್ಯನ ಮಾಂಸವನ್ನು ಬೇರ್ಪಡಿಸಿ ಅದನ್ನು ಗುಂಡಾಗಿ ಚೆಂಡು ಮಾಡಬಹುದು, ಎಳೆದು ಹಗ್ಗವಾಗಿ ಹೊಸೆಯಬಹುದು, ಮತ್ತೆ ಅದರಲ್ಲಿ ಅಸ್ಥಿಪಂಜರ ತೂರಿಸಲು ಏನು ಕಷ್ಟವೆಂದು ಕೇಳಿದರೆ ಆತನನ್ನು ನಿಸ್ಸಂಶಯವಾಗಿ ಹುಚ್ಚನೆನ್ನುತ್ತೇವೆ; ಏಕೆಂದರೆ ಎಲುಬಿನ ಗೂಡಿನಿಂದ ಮಾಂಸಖಂಡವನ್ನು ಬೇರ್ಪಡಿಸಿ ವ್ಯಾಯಾಮದ ನಿಯಮಗಳನ್ನು ರಚಿಸಲು ಸಾಧ್ಯವಿಲ್ಲ. ಅದೇ ರೀತಿ ಮನುಷ್ಯನ ಭಾವನೆಯನ್ನು ಉಪೇಕ್ಷಿಸಿ ಲೌಕಿಕ ವ್ಯವಹಾರದ ನಿಯಮಗಳನ್ನು ರಚಿಸಿದರೆ ಅವು ವ್ಯರ್ಥ. ಹೀಗಿದ್ದೂ ಇಂದಿನ ವ್ಯವಹಾರದ ನಿಯಮಗಳನ್ನು ರಚಿಸುವವರು ಮೇಲೆ ಹೇಳಿದ ವ್ಯಾಯಾಮ ಶಿಕ್ಷಕನಂತೆಯೇ ಮಾಡುತ್ತಾರೆ. ಅವರ ಲೆಕ್ಕದಂತೆ ಮನುಷ್ಯ ಎಂದರೆ ಅವನ ಶರೀರ, ಕೇವಲ ಒಂದು ಯಂತ್ರ. ಈ ನಂಬಿಕೆಗೆ ಅನುಸಾರವೇ ಅವರ ನಿಯಮಗಳ ರಚನೆ. ಶರೀರದಲ್ಲಿ ಜೀವ ಇರುವುದೂ ಅವರಿಗೆ ಗೊತ್ತು, ಆದರೂ ಅದರ ವಿಚಾರ ಮಾಡರು. ಜೀವ-ಆತ್ಮಗಳುಳ್ಳ, ಅವೇ ಪ್ರಧಾನವಾದ ಮನುಷ್ಯನಿಗೆ ಈ ನಿಯಮಗಳು ಹೇಗೆ ಅನ್ವಯವಾದಾವು ?

ಅರ್ಥಶಾಸ್ತ್ರ ಶಾಸ್ತ್ರವೇ ಅಲ್ಲ. ಸಂಪು-ಮುಷ್ಕರಗಳು ನಡೆದಾಗ ಅದು ವ್ಯರ್ಥವೆಂಬುದನ್ನು ಪ್ರತ್ಯಕ್ಷವಾಗಿ ಕಾಣುತ್ತೇವೆ. ಆಗ ಒಡೆಯರು ಒಂದು ರೀತಿ ವಿಚಾರಮಾಡಿದರೆ ನೌಕರರು ಬೇರೆ ರೀತಿ ಯೋಚಿಸುತ್ತಾರೆ. ಆ ಸಂದರ್ಭಕ್ಕೆ ಕೊಡು-ತೆಗೆದುಕೊಳ್ಳುವ ಒಂದು ನಿಯಮವನ್ನೂ ಅನ್ವಯಿಸಲು

ಆಗುವುದಿಲ್ಲ. ನೌಕರರ ಮತ್ತು ಮಾಲೀಕರ ಸ್ವಾರ್ಥವೆರಡೂ ಒಂದೇ ಎಂದು ತೋರಿಸಲು ಜನ ಬಹಳ ಚಚ್ಚಿಕೊಂಡರೂ ಆ ಸಮಯದಲ್ಲಿ ಇದನ್ನು ಅರಿಯು ವುದೇ ಇಲ್ಲ. ನಿಜಾಂಶ : ಒಬ್ಬರೊಬ್ಬರ ಸಾಂಸಾರಿಕ ಸ್ವಾರ್ಥ—ಹಣದ್ದು— ಒಂದೇ ಅಲ್ಲದಿದ್ದರೂ ಪರಸ್ಪರ ವಿರೋಧಿಯಾಗಬೇಕಾದುದೇನೂ ಇಲ್ಲ. ಒಂದು ಮನೆಯಲ್ಲಿ ಅಲ್ಪಸ್ವಲ್ಪ ರೊಟ್ಟಿ ಇದೆ. ಮನೆಯಲ್ಲಿ ತಾಯಿ–ಮಕ್ಕಳು ಇದಾರೆ. ಎಲ್ಲರಿಗೂ ಹಸಿವು. ತಾಯಿಮಕ್ಕಳೆಲ್ಲರಿಗೂ ಪರಸ್ಪರ ವಿರೋಧೀ ಸ್ವಾರ್ಥ. ತಾಯಿ ತಿಂದುದಾದರೆ ಮಕ್ಕಳು ಹಸಿದು ಸಾಯಬೇಕು, ಮಕ್ಕಳು ತಿಂದುಬಿಟ್ಟರೆ ತಾಯಿಗೆ ಉಪವಾಸ. ಹೀಗಿದ್ದರೂ ತಾಯಿಮಕ್ಕಳಲ್ಲಿ ಯಾವ ವಿರೋಧವೂ ಇಲ್ಲ. ತಾಯಿ ಹೆಚ್ಚು ಬಲವುಳ್ಳವಳು, ಅಂತಲೇ ರೊಟ್ಟಿಯ ಚೂರುಗಳನ್ನು ತಾನೇ ತಿಂದುಹಾಕುವುದಿಲ್ಲ. ಇದೇ ಮಾತನ್ನೇ ಮನುಷ್ಯರ ಪರಸ್ಪರ ಸಂಬಂಧದಲ್ಲಿಯೂ ತಿಳಿಯಬೇಕು.

ಆದರೂ ಸ್ವಲ್ಪ ಕಾಲಕ್ಕೆ ಮಾತ್ರ ಮನುಷ್ಯ ಹಾಗೂ ಪಶುಗಳಲ್ಲಿ ಯಾವ ಅಂತರವೂ ಇಲ್ಲವೆಂದು ಭಾವಿಸೋಣ. ಪಶುಗಳಂತೆಯೇ ನಾವೂ ಸ್ವಾರ್ಥಕ್ಕಾಗಿ ಹೋರಾಡಲೇಬೇಕು. ಆಗಲೂ ಸಹ ಮಾಲಿಕ–ನೌಕರರ ನಡುವೆ ಸದಾ ಮತಭೇದ ಇರಬೇಕು ಅಥವಾ ಇರಬಾರದು ಎಂದು ನಿಯಮರೂಪವಾಗಿ ಹೇಳುವುದು ಸಾಧ್ಯವಿಲ್ಲ. ಪರಿಸ್ಥಿತಿಗೆ ತಕ್ಕಂತೆ ಈ ಭಾವನೆ ಬದಲಾಗುತ್ತಿರುತ್ತದೆ. ಕೆಲಸ ಚೆನ್ನಾಗಿ ಆಗಿ, ಪೂರಾ ಬೆಲೆಯೂ ಸಿಕ್ಕುವುದರಲ್ಲಿ ಇಬ್ಬರ ಸ್ವಾರ್ಥವೂ ಇರುತ್ತದೆ, ಆದರೆ ಲಾಭದ ಹಂಚಿಕೆಯ ದೃಷ್ಟಿಯಿಂದ ನೋಡಿದರೆ ಒಬ್ಬರ ಲಾಭ ಇನ್ನೊಬ್ಬರ ನಷ್ಟವಾಗಿಬಿಡುತ್ತದೆ. ನೌಕರನಿಗೆ ಕಡಿಮೆ ಕೂಲಿ (ವೇತನ) ಕೊಟ್ಟು ಅವನನ್ನು ಸೋಮಾರಿಯಾಗಿಯೂ ನಿರುತ್ಸಾಹಿಯಾಗಿಯೂ ಇಡು ವುದರಲ್ಲಿ ಮಾಲೀಕನ ಸ್ವಾರ್ಥವೂ ಸಾಧಿಸುವುದಿಲ್ಲ. ಅದೇ ರೀತಿ ಕಾರ್ಖಾನೆ ಚೆನ್ನಾಗಿ ನಡೆಯದಿದ್ದರೂ ಅಧಿಕ ವೇತನ ಬೇಡುವುದು ನೌಕರನ ಸ್ವಾರ್ಥ ಸಾಧಕವಲ್ಲ. ತನ್ನ ಯಂತ್ರದ ದುರಸ್ತಿಗೂ ದುಡ್ಡಿಲ್ಲದ ಮಾಲೀಕನನ್ನು ಹೆಚ್ಚು ವೇತನ ಕೇಳುವುದು ಸ್ಪಷ್ಟವಾಗಿ ಅನುಚಿತವಾದುದೇ.

**ಈ ಬಗೆಯಾಗಿ ಲೇವಾದೇವಿಯ ನಿಯಮದ ಆಧಾರದ ಮೇಲೆ ಯಾವುದೇ ಶಾಸ್ತ್ರದ ರಚನೆಯೂ ಸಾಧ್ಯವಿಲ್ಲ. ಹಣದ ಹೆಚ್ಚಳ–ಇಳುವರಿಯ ನಿಯಮ ದಂತೆ ಮನುಷ್ಯನ ವ್ಯವಹಾರ ನಡೆಯಬಾರದು, ಈಶ್ವರನಿಯಮವೇ ಹಾಗಿದೆ.**

ಮನುಷ್ಯವ್ಯವಹಾರದ ಆಧಾರ ನ್ಯಾಯದ ನಿಯಮವಾಗಿರಬೇಕು, ಆದುದರಿಂದ ಮನುಷ್ಯ ಸಮಯಸಾಧಿಸಿ ನೀತಿ–ಅನೀತಿ ಯಾವುದರಿಂದ ನಡೆದರೆ ಅದರಿಂದ ಕೆಲಸ ಸಾಧಿಸುವ ವಿಚಾರವನ್ನು ಬಿಟ್ಟೇ ಬಿಡಬೇಕು. ಇಂಥ ಬಗೆಯ ಕೆಲಸ ಮಾಡಿದರೆ ಅಂತಿಮವಾಗಿ ಏನು ಫಲ ಸಿಕ್ಕೀತು ಎಂದು ಯಾರೂ ಯಾವಾಗಲೂ ಹೇಳುವುದು ಸಾಧ್ಯವಿಲ್ಲ; ನ್ಯಾಯಸಂಗತವೇ ನ್ಯಾಯವಿರುದ್ಧವೇ ಎಂಬುದನ್ನು ಮಾತ್ರ ಸಾಮಾನ್ಯವಾಗಿ ಯಾವಾಗಲೂ ತಿಳಿಯಬಲ್ಲೆವು. ನೀತಿಪಥದಲ್ಲಿ ನಡೆಯುವುದರ ಫಲಿತ ಯಾವಾಗಲೂ ಒಳ್ಳೆಯದೇ ಆಗಿರಬೇಕೆಂದು ಹೇಳ ಬಹುದು. ಆ ಫಲ ಎಂಥದು, ಹೇಗೆ ಸಿಕ್ಕೀತು ಎಂದು ನಾವು ಹೇಳಲಾರೆವು.

ನೀತಿ–ನ್ಯಾಯದ ನಿಯಮದಲ್ಲಿ ಪರಸ್ಪರ ಸ್ನೇಹ–ಸಹಾನುಭೂತಿಯೂ ಸಮಾವೇಶವಾಗುತ್ತದೆ. ಇದೇ ಭಾವನೆಯನ್ನೇ ಒಡೆಯ–ಆಳಿನ ಸಂಬಂಧ ಅವಲಂಬಿಸಿದೆ. ಒಡೆಯ ಆಳುಗಳಿಂದ ಆದಷ್ಟು ಹೆಚ್ಚು ಕೆಲಸ ಪಡೆಯ ಬಯಸಿದನೆನ್ನಿ. ಉಸಿರಾಡಗೊಡುವುದಿಲ್ಲ, ಕಡಿಮೆ ಕೂಲಿ ಕೊಡುತ್ತಾನೆ. ಪಾರಿವಾಳದ ಗೂಡಿನಂಥ ಕೊಠಡಿಗಳಲ್ಲಿಡುತ್ತಾನೆ. ಹೇಗೋ ಶರೀರದಲ್ಲಿ ಪ್ರಾಣ ಇಟ್ಟುಕೊಂಡರೆ ಸಾಕು ಎಂಬ ರೀತಿಯಲ್ಲಿ ಅವರನ್ನು ಇಡುತ್ತಾನೆ. ಹೀಗೆ ಮಾಡಿ ಆತನೇನೂ ಅನ್ಯಾಯಮಾಡುವುದಿಲ್ಲವೆಂದು ಕೆಲವರೆನ್ನುತ್ತಾರೆ. ಆಳು ನಿರ್ದಿಷ್ಟ ಸಂಬಳಕ್ಕಾಗಿ ತನ್ನ ಸಮಯವನ್ನೆಲ್ಲ ಒಡೆಯನಿಗೆ ಕೊಟ್ಟು ಬಿಟ್ಟಿದಾನೆ, ಆತ ಅವನಿಂದ ಕೆಲಸ ತೆಗೆದುಕೊಳ್ಳುತ್ತಾನೆ. ಎಷ್ಟು ಕಠಿಣ ವಾಗಿ ಕೆಲಸ ತೆಗೆದುಕೊಳ್ಳಬೇಕೆಂಬುದನ್ನು ಇತರ ಒಡೆಯರನ್ನು ನೋಡಿ ಆತ ನಿಶ್ಚಯಿಸುತ್ತಾನೆ. ಹೆಚ್ಚು ವೇತನ ಸಿಗುತ್ತಿದ್ದರೆ ಬೇರೆ ನೌಕರಿಗೆ ಹೋಗಲು ಆಳು ಸ್ವತಂತ್ರ. ಇದನ್ನೇ ಲೇವಾದೇವಿಯ ನಿಯಮ ರಚಿಸುವ ಅರ್ಥಶಾಸ್ತ್ರ ಎನ್ನುವುದು. ಅತ್ಯಂತ ಕಡಿಮೆ ಬೆಲೆ ಕೊಟ್ಟು ಅಧಿಕಾಧಿಕ ಕೆಲಸ ತೆಗೆದು ಕೊಳ್ಳುವುದರಲ್ಲಿ ಒಡೆಯನಿಗೆ ಲಾಭವಾಗುತ್ತದೆ. ಕೊನೆಯಲ್ಲಿ ನೌಕರನಿಗೂ ಲಾಭವೇ.

ವಿಚಾರಮಾಡಿದರೆ ಈ ಮಾತು ಸರಿಯಲ್ಲವೆಂದು ಕಂಡೀತು. ಆಳು ಕೇವಲ ಯಂತ್ರವೋ ಉಪಕರಣವೋ ಆಗಿದ್ದು ಅವನನ್ನು ನಡೆಸಲು ವಿಶೇಷ ಬಗೆಯ ಶಕ್ತಿ ಬೇಕಿದ್ದುದಾದರೆ ಈ ಲೆಕ್ಕ ಸರಿ. ಆದರೆ ಇಲ್ಲಿ ನೌಕರನನ್ನು ನಡೆಸುವ ಶಕ್ತಿ ಅವನ ಆತ್ಮ. ಆತ್ಮದ ಬಲವಾದರೂ ಎಲ್ಲ ಅರ್ಥಶಾಸ್ತ್ರಗಳ

ನಿಯಮದ ವಿರುದ್ಧ ಸಂಪು ಹೂಡಿಬಿಡುತ್ತದೆ, ಅವನ್ನು ತಪ್ಪಾಗಿಸಿಬಿಡುತ್ತದೆ. ಮನುಷ್ಯರೂಪದ ಯಂತ್ರಕ್ಕೆ ಘನರೂಪದ ಕಲ್ಲಿದ್ದಲು ತುಂಬಿ ಅಧಿಕಾಧಿಕ ಕೆಲಸ ತೆಗೆದುಕೊಳ್ಳುವುದು ಅಸಾಧ್ಯ. ಅದರ ಸಹಾನುಭೂತಿ ಜಾಗ್ರತಗೊಳಿಸಿದಾಗಲೇ ಒಳ್ಳೆ ಕೆಲಸ ಮಾಡೀತು ಅದು. ಒಡೆಯ–ಆಳುಗಳ ನಡುವೆ ಹಣದ್ದಲ್ಲ, ಪ್ರೀತಿಯ ಬಂಧನ ಏರ್ಪಡಿಸಬೇಕು.

ಎಷ್ಟೋ ವೇಳೆ ಒಡೆಯ ಚತುರನೂ ವಿವೇಕಿಯೂ ಆಗಿದ್ದರೆ ಆಳು ಹೆಚ್ಚಿನ ಒತ್ತಾಯದ ದೆಸೆಯಿಂದ ಹೆಚ್ಚು ಕೆಲಸ ಮಾಡುತ್ತಾನೆ. ಒಡೆಯ ಆಲಸಿ, ನಿಶ್ಶಕ್ತನಾಗಿದ್ದರೆ ಮಾಡಬೇಕಾದಷ್ಟು ಕೆಲಸವನ್ನು ಆಳು ಮಾಡ. ಒಂದೇ ಬಗೆಯ ಇಬ್ಬರು ಒಡೆಯರನ್ನೂ ಒಂದೇ ಬಗೆಯ ಇಬ್ಬರು ಆಳುಗಳನ್ನೂ ತೆಗೆದುಕೊಂಡರೆ ಸಹಾನುಭೂತಿಪರ ಆಳು ಸಹಾನುಭೂತಿರಹಿತ ಒಡೆಯನ ಆಳಿಗಿಂತ ಹೆಚ್ಚಾಗಿ, ಚೆನ್ನಾಗಿ ಕೆಲಸ ಮಾಡುತ್ತಾನೆಂಬುದು ತಿಳಿಯುತ್ತದೆ.

ಸ್ನೇಹಕ್ಕೆ, ಕೃಪೆಗೆ ಎಷ್ಟೋ ಸಲ ವಿರುದ್ಧ ಪ್ರತೀಕಾರವೇ ಆಗುತ್ತದೆ, ಆದಕಾರಣ ಈ ನಿಯಮ ಸರಿಯಲ್ಲ ಎಂದು ಕೆಲವರು ಹೇಳಬಹುದು, ಹಾಗಾದರೆ ಆಳು ತಲೆಯ ಮೇಲೆ ಕುಳಿತುಕೊಂಡುಬಿಟ್ಟಾನು—ಎಂದು. ಈ ವಾದ ಸಮಂಜಸವಲ್ಲ. ಸ್ನೇಹಕ್ಕೆ ತಿರಸ್ಕಾರ ತೋರಿಸುವವನು ಬಲಾತ್ಕಾರ ಮಾಡಿದಾಗ ಒಡೆಯನನ್ನು ದ್ವೇಷಿಸತೊಡಗುತ್ತಾನೆ. ಉದಾರಬುದ್ಧಿಯ ಒಡೆಯನಿಗೆ ದ್ರೋಹವನ್ನೆಸಗುವವ ಅನ್ಯಾಯೀ ಒಡೆಯನಿಗೆ ಹಾನಿಯನ್ನೇ ಉಂಟುಮಾಡಿಯಾನು.

ಸಾರಾಂಶ : ಎಲ್ಲ ಸಂದರ್ಭದಲ್ಲಿಯೂ ಎಲ್ಲರೊಡನೆಯೂ ಪರೋಪಕಾರ ದೃಷ್ಟಿಯಿಂದಲೇ ವರ್ತಿಸುವುದರಿಂದ ಪರಿಣಾಮ ಒಳ್ಳೆಯದೇ ಆದೀತು. ಇಲ್ಲಿ ಸಹಾನುಭೂತಿಯನ್ನು ಒಂದು ಬಗೆಯ ಶಕ್ತಿಯೆಂತಲೇ ಭಾವಿಸಿ ವಿಚಾರ ಮಾಡುತ್ತಿದೇವೆ. ಸ್ನೇಹ ಉತ್ತಮ ವಸ್ತು, ಆದುದರಿಂದ ಸದಾ ಅದರ ಮೂಲಕವೇ ಕೆಲಸ ನಡೆಸಬೇಕು ಎಂಬುದು ತೀರಾ ಬೇರೆ ಸಂಗತಿ, ಅದನ್ನು ನಾವು ಇಲ್ಲಿ ವಿಚಾರಮಾಡುತ್ತಿಲ್ಲ. ಈ ತನಕ ನೋಡಿದ ಅರ್ಥಶಾಸ್ತ್ರದ ಸಾಧಾರಣ ನಿಯಮಗಳನ್ನು, ಸ್ನೇಹ ಹಾಗೂ ಸಹಾನುಭೂತಿಯ ಶಕ್ತಿ ನಾಶಗೊಳಿಸುತ್ತದೆಂಬುದನ್ನು ಮಾತ್ರವೇ ನಾವು ಇಲ್ಲಿ ತೋರಿಸತಕ್ಕದ್ದಿದೆ. ಇಷ್ಟೇ

ಅಲ್ಲ, ಇದು ಬೇರೊಂದು ಬಗೆಯ ಶಕ್ತಿಯೇ ಆಗಿರುವುದರಿಂದ ಅರ್ಥಶಾಸ್ತ್ರದ ಬೇರೆ ಬೇರೆ ನಿಯಮಗಳೊಂದಿಗೆ ಇವು ಸೇರಲಾರವು. ಆ ನಿಯಮಗಳನ್ನು ತೆಗೆದು ಬೇರೆ ಕಡೆ ಇಟ್ಟುಬಿಟ್ಟರೆ ಮಾತ್ರವೇ ನಿಂತೀತು. ಒಡೆಯ ತಕ್ಕಡಿ ಹಿಡಿದು ಪ್ರತಿಫಲದ ಆಸೆಯಿಂದಲೇ ಸ್ನೇಹ ತೋರಿಸಿದರೆ ಆತ ನಿರಾಶನಾಗುವುದೂ ಸಂಭವ. ಸ್ನೇಹಕ್ಕಾಗಿಯೇ ಸ್ನೇಹ ತೋರಿಸಬೇಕು. ಪ್ರತಿಫಲ ಬೇಡದೆಯೇ ತಾನೇ ಸಿಕ್ಕೀತು. ತನ್ನ ಜೀವವನ್ನೇ ಕೊಡುವವನು ಅದನ್ನು ಪಡೆಯುತ್ತಾನೆ, ಅದನ್ನು ರಕ್ಷಿಸಿಕೊಳ್ಳಬಯಸುವವನು ಕಳೆದುಕೊಳ್ಳುತ್ತಾನೆ—ಎನ್ನುತ್ತಾರಲ್ಲವೇ ?

ದಂಡು-ದಳವಾಯಿಗಳ ಉದಾಹರಣೆ ತೆಗೆದುಕೊಳ್ಳಿ. ಅರ್ಥಶಾಸ್ತ್ರದ ನಿಯಮಗಳನ್ನು ಅನುಸರಿಸಿ ತನ್ನ ಸಿಪಾಯಿಗಳಿಂದ ಕೆಲಸ ತೆಗೆದುಕೊಳ್ಳಬಯಸುವ ಸೇನಾನಿ ಅವರಿಂದ ನಿರ್ದಿಷ್ಟ ಕೆಲಸ ತೆಗೆದುಕೊಳ್ಳಲಾರ. ಇದಕ್ಕೆ ಎಷ್ಟೋ ದೃಷ್ಟಾಂತಗಳುಂಟು : ಸಿಪಾಯಿಗಳೊಡನೆ ಘನಿಷ್ಠ ಸಂಬಂಧವುಳ್ಳ, ಅವರೊಡನೆ ಸ್ನೇಹದಿಂದ ವ್ಯವಹರಿಸುವ, ಅವರ ಒಳಿತಿಂದ ಪ್ರಸನ್ನನಾಗುವ, ಅವರ ಸುಖದುಃಖಗಳಲ್ಲಿ ಭಾಗಿಯಾಗುವ, ಅವರನ್ನು ಕಾಯುವ, ಒಟ್ಟಿನಲ್ಲಿ ಅವರಲ್ಲಿ ಸಹಾನುಭೂತಿಯುಳ್ಳ ಸರದಾರ ಅವರಿಂದ ಎಂಥ ಕಠಿಣ ಕೆಲಸವನ್ನಾದರೂ ಮಾಡಿಸಬಲ್ಲ. ತಮ್ಮ ಸೇನಾನಾಯಕನಲ್ಲಿ ಪ್ರೀತಿಯಿಲ್ಲದ ಸೈನಿಕರಿಗೆ ಯುದ್ಧದ ಗೆಲುವು ಅಪರೂಪವೆಂಬುದನ್ನು ಇತಿಹಾಸದ ಉದಾಹರಣೆಗಳಲ್ಲಿ ನೋಡುತ್ತೇವೆ. ಹೀಗೆ ಸೇನೆ-ಸೇನಾನಿಗಳ ನಡುವೆ ಸ್ನೇಹ-ಸಹಾನುಭೂತಿಯ ಬಲವೇ ನಿಜವಾದ ಬಲ. ಲೂಟಿಕೋರರ ತಂಡದಲ್ಲಿಯೂ ಇದನ್ನು ಕಾಣುತ್ತೇವೆ. ಕಳ್ಳರ ತಂಡವೂ ತನ್ನ ಸರದಾರನಲ್ಲಿ ಪೂರ್ಣ ಪ್ರೇಮವಿಟ್ಟಿರುತ್ತದೆ; ಆದರೆ ಗಿರಣಿ ಕಾರಖಾನೆಗಳ ಒಡೆಯರು-ಕೂಲಿಗಾರರಲ್ಲಿ ಈ ಬಗೆಯ ಘನಿಷ್ಠತೆ ಕಾಣಿಸದು. ಇದರ ಕಾರಣ : ಈ ಕಾರಖಾನೆಗಳಲ್ಲಿ ಕೂಲಿಕಾರರ ವೇತನ ಲೇವಾದೇವಿಯ ಆಧಾರದ ಮೇಲೆ ಬೇಡಿಕೆ-ಪೂರೈಕೆಯ ನಿಯಮದಂತೆ ನಿಶ್ಚಿತವಾಗಿರುತ್ತದೆ, ಅಂತಲೇ ಒಡೆಯರು-ಕೂಲಿಕಾರರ ನಡುವೆ ಪ್ರೀತಿಯ ಬದಲು ಅಪ್ರೀತಿ ಇರುತ್ತದೆ, ಸಹಾನುಭೂತಿಗೆ ಬದಲು ವಿರೋಧ, ಪೈಪೋಟಿ ಕಂಡುಬರುತ್ತದೆ. ಈ ಪರಿಸ್ಥಿತಿಯಲ್ಲಿ ಎರಡು ಪ್ರಶ್ನೆಗಳನ್ನು ಕುರಿತು ನಾವು ವಿಚಾರಮಾಡಬೇಕು.

ಮೊದಲ ಪ್ರಶ್ನೆ : ಬೇಡಿಕೆ–ಪೂರೈಕೆಗಳನ್ನು ಲೆಕ್ಕಿಸದೆ ನೌಕರರ ಸಂಬಳವನ್ನು ಎಷ್ಟರಮಟ್ಟಿಗೆ ಸ್ಥಿರಗೊಳಿಸುವುದು ಸಾಧ್ಯ ?

ಎರಡನೆಯದು : ಹಿಂದಿನ ಕಾಲದ ಕುಟುಂಬಗಳಲ್ಲಿ ಒಡೆಯ–ಆಳುಗಳ ನಡುವೆ ಅಥವಾ ಸೇನಾಪತಿ–ಸಿಪಾಯಿಗಳ ನಡುವೆ ಇದ್ದ ಸ್ಥಿರ ಸಂಬಂಧದಂತೆ ಕಾರಖಾನೆಗಳಲ್ಲೂ ಎಂಥ ಪ್ರಸಂಗ ಬಂದರೂ ನೌಕರರ ಸಂಖ್ಯೆಯನ್ನು ಹೆಚ್ಚು ಕಡಿಮೆಗೊಳಿಸದೆ ಹೇಗೆ ಇಡಬಲ್ಲೆವು ?

ಮೊದಲ ಪ್ರಶ್ನೆಯನ್ನು ಚರ್ಚಿಸೋಣ. ಕಾರಖಾನೆಯ ಕೂಲಿಗಾರರ ವೇತನಕ್ಕೆ ಒಂದು ದರವನ್ನು ನಿಶ್ಚಿತಗೊಳಿಸುವ ಉಪಾಯವನ್ನು ಅರ್ಥಶಾಸ್ತ್ರಿಗಳು ಹುಡುಕರು, ಆಶ್ಚರ್ಯದ ಸಂಗತಿ. ನೋಡಿ, ಇಂಗ್ಲೆಂಡಿನ ಪ್ರಧಾನ ಮಂತ್ರಿ ಸ್ಥಾನವನ್ನು ಹರಾಜು ಹಾಕಿ ಯಾರಾದರೂ ಮಾರುತ್ತಾರೆಯೇ ? ಆ ಪದವಿಗೆ ಎಂಥವನೇ ಬರಲಿ ಅವನಿಗೆ ಅದೇ ಸಂಬಳ ಸಿಕ್ಕುತ್ತದೆ. ಅದೇ ರೀತಿ ಅತಿ ಕಡಿಮೆ ಸಂಬಳ ತೆಗೆದುಕೊಳ್ಳುವ ಮನುಷ್ಯನನ್ನು ನಾವು ಪಾದ್ರಿಯ ಪದವಿಗೇರಿಸುವುದಿಲ್ಲ. ಡಾಕ್ಟರು ವಕೀಲರ ವಿಷಯದಲ್ಲಿಯೂ ಇಂಥ ಸಂಬಂಧ ಇಟ್ಟುಕೊಳ್ಳೆವು. ಈ ರೀತಿ ಮೇಲಿನ ಉದಾಹರಣೆಗಳಲ್ಲಿ ಕರಾರುಕೂಲಿಯನ್ನು–ವೇತನವನ್ನು ಕೊಡುತ್ತೇವೆ. ಒಳ್ಳೆಯ, ಕೆಟ್ಟ ಕೂಲಿಗಾರನ ವೇತನ ಒಂದೇ ಇರಬೇಕೇ ಎಂದು ಯಾರಾದರೂ ಕೇಳಬಹುದು. ನಿಜವಾಗಿ ಹಾಗೆಯೇ ಇರಬೇಕು. ಇದರ ಫಲ ಏನು ಗೊತ್ತೆ ? ಎಲ್ಲ ವೈದ್ಯರಿಗೂ ವಕೀಲರಿಗೂ ಒಂದೇ ದರವಾದರೆ ನಾವು ಒಳ್ಳೆಯ ವೈದ್ಯರು ವಕೀಲರ ಬಳಿಗೇ ಹೋಗುತ್ತೇವೆ. ಹಾಗೆಯೇ ಎಲ್ಲ ಕೆಲಸಗಾರರ ಕೂಲಿಯೂ ಒಂದೇ ಆದರೆ ನಾವು ಒಳ್ಳೆಯ ಕಾಮಾಟಿ, ಬಡಗಿಯಿಂದಲೇ ಕೆಲಸಮಾಡಿಸುತ್ತೇವೆ. ಆತನನ್ನು ಕೆಲಸಕ್ಕೆ ಬಯಸುವುದೇ ಒಳ್ಳೆಯ ಕೆಲಸಗಾರನ ಕೆಲಸದ ಬಹುಮಾನ. ಆದಕಾರಣ ಸ್ವಾಭಾವಿಕವಾದ, ನಿಜವಾದ ವೇತನದ ಪ್ರಮಾಣ ನಿಗದಿಯಾಗಬೇಕು. ಅಡ್ಡಕಸಬುದಾರ ಮನುಷ್ಯ ಕಡಿಮೆ ಕೂಲಿ ತೆಗೆದುಕೊಂಡು ಮಾಲೀಕನಿಗೆ ಮೋಸಮಾಡಬಹುದು, ಕೊನೆಗೆ ಅದರ ಪರಿಣಾಮವೂ ಕೆಟ್ಟದೇ ಆಗುತ್ತದೆ.

ಈಗ ಎರಡನೆಯ ಪ್ರಶ್ನೆಯನ್ನು ಚರ್ಚಿಸೋಣ. ವ್ಯಾಪಾರದ ಗತಿ ಹೇಗೇ ಇರಲಿ ಕಾರಖಾನೆಯಲ್ಲಿ ಮೊದಲಿಗೆ ಇಟ್ಟುಕೊಂಡಷ್ಟೇ ಜನರನ್ನೇ ಸದಾ ಇಟ್ಟುಕೊಂಡಿರಬೇಕು. ಕೆಲಸಗಾರನಿಗೆ ಅನಿಶ್ಚಿತವಾಗಿ ಕೆಲಸ ಸಿಕ್ಕುವು

ದಾದರೆ ಆಗ ಅವರು ಹೆಚ್ಚು ಕೂಲಿ ಕೇಳಲೇಬೇಕಾಗುತ್ತದೆ. ಆದರೆ ಜೀವನ ಪರ್ಯಂತ ಅವರಿಗೆ ನೌಕರಿ ಇದ್ದೇ ಇದ್ದೀತೆಂದು ಹೇಗಾದರೂ ಮನವರಿಕೆ ಮಾಡಿಕೊಟ್ಟರೆ ಅವರು ತುಂಬ ಕಡಿಮೆ ಸಂಬಳಕ್ಕೇ ಕೆಲಸಮಾಡಿಯಾರು. ಹೀಗೆ ಸ್ಥಾಯಿಯಾಗಿ ಕೆಲಸದಲ್ಲಿಟ್ಟುಕೊಳ್ಳುವ ಒಡೆಯನಿಗೆ ಕೊನೆಯಲ್ಲಿ ಲಾಭವೇ ಆದೀತು, ಸ್ಥಾಯೀ ಕೆಲಸಮಾಡುವವರಿಗೂ ಲಾಭವೇ. ಅಂಥ ಕಾರಖಾನೆಗಳಲ್ಲಿ ಹೆಚ್ಚಿನ ಲಾಭ ಬಾರದು. ಭಾರಿಯಾದ ಹೊರೆಯನ್ನೂ ಅಂಥವು ಹೊರಲಾರವು. ಭಾರಿ ಪೈಪೋಟಿ ನಡೆಸಲಾರವು. ಸೈನಿಕ ಸೇನಾಪತಿಗಾಗಿ ಸಾಯಲು ಸಿದ್ಧ, ಸೈನಿಕತನ ಕೂಲಿ ಕೆಲಸಕ್ಕಿಂತ ಗೌರವಾನ್ವಿತ ಎಂದು ಎಣಿಸಲ್ಪಡುತ್ತದೆ. ನಿಜವಾಗಿಯೂ ಸೈನಿಕನ ಕೆಲಸ ಕೊಲ್ಲುವುದಲ್ಲ, ಇತರರನ್ನು ಕಾಪಾಡುತ್ತ ತಾನೇ ಕೊಲ್ಲಲ್ಪಡುವುದು. ಸೈನಿಕನಾಗುವವನು ತನ್ನ ಪ್ರಾಣವನ್ನು ರಾಜ್ಯಕ್ಕೆ ಒಪ್ಪಿಸಿಬಿಡುತ್ತಾನೆ. ವಕೀಲ, ವೈದ್ಯ, ಪಾದ್ರಿಗಳ ವಿಷಯದಲ್ಲಿಯೂ ಇದೇ ಮಾತನ್ನೇ ಒಪ್ಪುತ್ತೇವೆ, ಅಂತಲೇ ಅವರನ್ನು ಆದರ ಭಾವದಿಂದ ಕಾಣುತ್ತೇವೆ. ಪ್ರಾಣ ಹೋಗುವವರೆಗೂ ವಕೀಲ ನ್ಯಾಯವನ್ನೇ ಎಸಗಬೇಕು. ವೈದ್ಯ ಅನೇಕ ಸಂಕಟಗಳನ್ನು ಸಹಿಸಿಯೂ ರೋಗಿಯ ಉಪಚಾರ ಮಾಡಲೇಬೇಕು. ಧರ್ಮೋಪದೇಶಕನಾದ ಪಾದ್ರಿ ಏನೇ ಬರಲಿ ತನ್ನ ಸುತ್ತಣ ಸಮುದಾಯಕ್ಕೆ ಜ್ಞಾನ ನೀಡುತ್ತಲಿರಬೇಕು, ಸರಿಯಾದ ಹಾದಿ ತೋರುತ್ತಲಿರಬೇಕು.

ಮೇಲೆ ಹೇಳಿದ ವೃತ್ತಿಗಳಲ್ಲಿ ಹಾಗಾಗಬಹುದಾದರೆ ವ್ಯಾಪಾರದಲ್ಲೇಕೆ ಆಗಬಾರದು? ವ್ಯಾಪಾರದೊಡನೆ ಅನೀತಿಯ ಶಾಶ್ವತ ನಂಟನ್ನು ಒಪ್ಪಲು ಕಾರಣವಾದರೂ ಏನು? ವ್ಯಾಪಾರಿಯನ್ನು ಸದಾ ಸ್ವಾರ್ಥಿಯೆಂದೇ ತಿಳಿಯುವುದು ವಿಚಾರಮಾಡಿದರೆ ಹೊಳೆದೀತು. ಜನತೆಗೆ ವ್ಯಾಪಾರಿಯ ಕೆಲಸವೂ ಅತ್ಯಾವಶ್ಯಕವೇ; ನಮ್ಮ ಮನೆ ತುಂಬಿಕೊಳ್ಳುವುದಷ್ಟೇ ಅದರ ಉದ್ದೇಶ್ಯ ಎಂದು ನಾವು ತಿಳಿದುಕೊಂಡುಬಿಟ್ಟಿದೇವೆ. ವ್ಯಾಪಾರಿ ಒಂದೇ ಆಪೋಶನಕ್ಕೇ ದುಡ್ಡು ಸೇರಿಸಿಬಿಡುವಂತೆಯೇ ಶಾಸನಗಳನ್ನೂ ರಚಿಸುತ್ತಾನೆ. ಗಿರಾಕಿ ಅತಿ ಕಡಿಮೆ ಬೆಲೆಗಾಗಿ ಚೌಕಾಶಿ ಮಾಡಬೇಕು, ವ್ಯಾಪಾರಿ ಆದಷ್ಟು ಹೆಚ್ಚು ಕೇಳಬೇಕು, ಪಡೆಯಬೇಕು—ಇದೇ ರೂಢಿಯೂ ಹೌದು. ಜನ ತಾವೇ ಇಂಥ ಪದ್ಧತಿ ಹಾಕಿಬಿಟ್ಟಿದಾರೆ, ಈಗ ಅವರ ಅಪ್ರಾಮಾಣಿಕತೆಯಿಂದಾಗಿ ಕೀಳುದೃಷ್ಟಿ

ಯಿಂದ ನೋಡುತ್ತಾರೆ. ಈ ಪದ್ಧತಿಯನ್ನು ಬದಲಾಯಿಸುವುದು ಅಗತ್ಯ. ವ್ಯಾಪಾರಿ ತನ್ನ ಸ್ವಾರ್ಥವನ್ನಷ್ಟೇ ಸಾಧಿಸಬೇಕು, ಧನವನ್ನೇ ಗಳಿಸಿ ರಾಶಿ ಹಾಕಬೇಕೆಂಬ ನಿಯಮವೇನೂ ಇಲ್ಲ. ಇಂಥದನ್ನು ವ್ಯಾಪಾರವೆನ್ನದೆ ಕಳ್ಳತನ ಎನ್ನಬೇಕಾದೀತು. ಸಿಪಾಯಿ ರಾಜ್ಯದ ಸುಖಕ್ಕಾಗಿ ಜೀವ ಕೊಡುವಂತೆಯೇ ವ್ಯಾಪಾರಿಯೂ ಜನತೆಯ ಸುಖಕ್ಕಾಗಿ ಧನ ಕಳೆದುಕೊಳ್ಳಬೇಕು, ಪ್ರಾಣ ವನ್ನೂ ನೀಗಬೇಕು. ಎಲ್ಲ ರಾಜ್ಯಗಳಲ್ಲಿಯೂ—

ಸಿಪಾಯಿವೃತ್ತಿ ಜನತೆಯ ರಕ್ಷಣೆ;

ಧರ್ಮೋಪದೇಶಕನದು ಶಿಕ್ಷಣದಾನ;

ವೈದ್ಯನ ವೃತ್ತಿ ಆರೋಗ್ಯರಕ್ಷಣೆ;

ವಕೀಲನದು ನ್ಯಾಯಪ್ರಚಾರ;

ಹೀಗೆಯೇ ವ್ಯಾಪಾರಿಯ ವೃತ್ತಿ ಆವಶ್ಯಕ ವಸ್ತುಸಂಗ್ರಹ.

ಇವರೆಲ್ಲರೂ ಸಮಯ ಬಂದಾಗ ತಮ್ಮ ಜೀವವನ್ನೂ ತೆರಬೇಕು. ಎಂದರೆ: ಹಿಂದಡಿಯಿಡದೆ ನಿಂತಲ್ಲೇ ನಿಂತು ಸಾವನ್ನು ಅಪ್ಪುವುದು ಸಿಪಾಯಿಯ ಲಕ್ಷಣ.

ಪ್ಲೇಗು ಬಂದಾಗ ಓಡಿಹೋಗದೆ ತಾನೇ ಪ್ಲೇಗಿಗೆ ತುತ್ತಾದರೂ ವೈದ್ಯ ಅಲ್ಲೇ ಇದ್ದು ರೋಗಿಗಳ ಚಿಕಿತ್ಸೆ ಮಾಡುತ್ತಿರಬೇಕು.

ಸತ್ಯದ ಶಿಕ್ಷಣ ಕೊಡುವಾಗ ಜನ ಹೊಡೆದುಹಾಕಿದರೂ ಕೊನೆಯುಸಿರು ಆರುವವರೆಗೂ ಸುಳ್ಳಿನ ಬದಲು ಸತ್ಯದ ಶಿಕ್ಷಣವನ್ನು ಧರ್ಮೋಪದೇಶಕ ಕೊಡುತ್ತಲೇ ಇರಬೇಕು.

ನ್ಯಾಯಕ್ಕಾಗಿ ಸಾಯಬೇಕಾಗಿ ಬಂದರೂ ನ್ಯಾಯವೇ ನೆಲೆಗೊಳ್ಳಲೆಂದು ವಕೀಲ ಯತ್ನಿಸಬೇಕು.

ಹೀಗೆ ಮೇಲಿನ ವೃತ್ತಿಗಳವರಿಗೆ ಬಲಿದಾನದ ಸಂದರ್ಭ ಯಾವುದು ಎಂಬುದನ್ನು ವ್ಯಾಪಾರಿಗಳೂ ಇತರರೂ ವಿಚಾರಿಸಬೇಕು. ಸಮಯ ಬಂದಾಗ ಸಾಯಲು ಸಿದ್ಧವಿಲ್ಲದವನು ಬದುಕೆಂಬುದನ್ನೇ ಅರಿಯ. ಜನತೆಗೆ ಬೇಕಾದ

ವಸ್ತುಗಳನ್ನು ಸಂಗ್ರಹಿಸುವುದು ವ್ಯಾಪಾರಿಗಳ ಕೆಲಸವೆಂಬುದನ್ನು ನೋಡಿದೆವು. ಧರ್ಮೋಪದೇಶಕನ ಕೆಲಸ ಸಂಬಳ ತಿನ್ನುವುದಾಗಿರದೆ ಉಪದೇಶ ಕೊಡುವುದಾಗಿರುವಂತೆಯೇ ವ್ಯಾಪಾರಿಯ ಕೆಲಸ ಲಾಭಗಾರಿಕೆಯಲ್ಲ, ವಸ್ತುಸಂಗ್ರಹ. ಧರ್ಮೋಪದೇಶಕನಿಗೆ ಅನ್ನ, ವ್ಯಾಪಾರಿಗೆ ಲಾಭ ಸಿಕ್ಕೇ ಸಿಕ್ಕುತ್ತದೆ. ಆದರೆ ಸಂಬಳ, ಲಾಭಗಳ ಮೇಲೆ ದೃಷ್ಟಿ ಇಡುವುದು ಇಬ್ಬರ ಕೆಲಸವೂ ಅಲ್ಲ. ಸಂಬಳ–ಲಾಭ ಸಿಗಲಿ ಸಿಗದಿರಲಿ ತಮ್ಮ ಕೆಲಸ ಮಾಡುತ್ತಲಿರುವುದೇ ಅವರ ಕರ್ತವ್ಯ. ಈ ವಿಚಾರ ಸರಿಯೆಂದಾದರೆ ವ್ಯಾಪಾರಿಗೆ ಉತ್ತಮ ದರ್ಜೆ ಸಿಗಬೇಕು, ಏಕೆಂದರೆ ಉತ್ತಮ ವಸ್ತುಗಳನ್ನು ಅವನು ತಯಾರಿಸಬೇಕು, ಜನತೆಗೆ ಅದರಿಂದ ಲಾಭವಾಗುವ ರೀತಿಯಲ್ಲಿ ಸಂಗ್ರಹಿಸಿ, ಅವರಿಗೆ ಮುಟ್ಟಿಸಬೇಕು. ಈ ಕೆಲಸದಲ್ಲಿ ಅವನ ಅಧೀನವಾಗಿರುವ ನೂರಾರು, ಸಾವಿರಾರು ಜನರ ರಕ್ಷಣೆ, ಬೇನೆ ಬಿದ್ದರೆ ಅವರ ಔಷಧೋಪಚಾರವನ್ನೂ ಆತ ಮಾಡಬೇಕಾದೀತು. ಇದನ್ನೆಲ್ಲ ಮಾಡಲು ತಾಳ್ಮೆ, ಬಹು ಸ್ನೇಹ–ಸಹಾನುಭೂತಿ, ಬಹಳ ಚಾತುರ್ಯ ಬೇಕು.

ಬೇರೆ ಬೇರೆ ಕೆಲಸಮಾಡುತ್ತ ಇತರರಂತೆಯೇ ವ್ಯಾಪಾರಿಯೂ ಸಹ ಜೀವ ತೆರುವ ಸಂದರ್ಭ ಬಂದಾಗ ತಾನೂ ಪ್ರಾಣಾರ್ಪಣ ಮಾಡಬೇಕು. ಅಂಥ ವ್ಯಾಪಾರಿಗೆ ಎಂಥದೇ ಸಂಕಟ ಒದಗಲಿ, ತಾನು ಭಿಕಾರಿಯೇ ಆಗಿಬಿಡಲಿ ಕೆಟ್ಟ ವಸ್ತು ಮಾರಲಾರ, ಜನರನ್ನು ಮೋಸಗೊಳಿಸಲಾರ. ತನ್ನೊಡನೆ ದುಡಿವವರೊಂದಿಗೆ ಅತ್ಯಂತ ಸ್ನೇಹದ ವ್ಯವಹಾರ ನಡೆಸಿಯಾನು. ದೊಡ್ಡ ಕಾರಖಾನೆಗಳಲ್ಲಿ, ಕಾರ್ಯಾಗಾರಗಳಲ್ಲಿ ಕೆಲಸಮಾಡುವ ಎಷ್ಟೋ ಮಂದಿ ನವ ಯುವಕರು ಬಹುವೇಳೆ ಮನೆ–ಮಠ ಬಿಟ್ಟು ದೂರ ಹೋಗಬೇಕಾಗುತ್ತದೆ. ಅಲ್ಲಿ ಒಡೆಯನೇ ಅಂಥವರಿಗೆಲ್ಲ ತಂದೆತಾಯಾಗಬೇಕು. ಈ ವಿಷಯದಲ್ಲಿ ಒಡೆಯ ನಿರ್ಲಕ್ಷ್ಯ ಮಾಡಿಬಿಟ್ಟರೆ ಪಾಪ ಆ ತರುಣರು ತಬ್ಬಲಿಗಳಂತಾಗಿ ಬಿಟ್ಟಾರು. ಆದುದರಿಂದ ವ್ಯಾಪಾರಿ, ಧಣಿ ಹೆಜ್ಜೆಹೆಜ್ಜೆಗೂ ತಮ್ಮನ್ನು ಕೇಳಿಕೊಳ್ಳಬೇಕು: " ನನ್ನ ಮಕ್ಕಳನ್ನು ನೋಡಿಕೊಳ್ಳುವಂತೆಯೇ ನೌಕರರೊಂದಿಗೆ ನಡೆದುಕೊಳ್ಳುತ್ತೇನೆಯೇ ? "

**ಹಡಗಿನ ಕಪ್ತಾನನ ಕೈಕೆಳಗಿರುವ ಕೂಲಿಗಾರರಲ್ಲಿ ಎಂದಾದರೊಮ್ಮೆ ಆತನ ಮಗನೂ ಇದ್ದಾನು. ಎಲ್ಲ ಕೂಲಿಗಾರರನ್ನೂ ತನ್ನ ಮಗನಂತೆಯೇ**

ನೋಡಿಕೊಳ್ಳುವುದು ಕಪ್ತಾನನ ಕರ್ತವ್ಯ. ಅದೇ ರೀತಿ ವ್ಯಾಪಾರಿಯ ಬಳಿ ಇರುವ ಅನೇಕ ನೌಕರರಲ್ಲಿ ಅವನ ಮಗನೂ ಇದ್ದರೆ ಕೆಲಸದ ವಿಷಯದಲ್ಲಿ ತನ್ನ ಮಗನೊಡನೆ ವ್ಯವಹರಿಸುವಂತೆಯೇ ಇತರ ನೌಕರರೊಡನೆಯೂ ವ್ಯವಹರಿಸಬೇಕಾದೀತು. ಇದೇ ನಿಜವಾದ ಅರ್ಥಶಾಸ್ತ್ರ. ಹಡಗು ಅಪಾಯಕ್ಕೆ ಸಿಲುಕಿದಾಗ ಎಲ್ಲರೂ ಇಳಿದಮೇಲೆ ತಾನು ಇಳಿಯಬೇಕಾದುದು ಕಪ್ತಾನನ ಕರ್ತವ್ಯವಿದ್ದಂತೆ ಬರಗಾಲವೇ ಮುಂತಾದ ಸಂಕಟ ಸನ್ನಿವೇಶಗಳಲ್ಲಿ ತನ್ನ ಜನರನ್ನು ಮೊದಲು ರಕ್ಷಿಸುವುದು ವ್ಯಾಪಾರಿಯ ಕರ್ತವ್ಯ. ಈ ಬಗೆಯ ವಿಚಾರ ಸಾಧ್ಯವೇ ಎಂದು ಹಲವರಿಗೆ ವಿಚಿತ್ರವೆನಿಸಬಹುದು, ಹಾಗೆನಿಸುವುದೇ ಈ ಯುಗದ ವಿಶೇಷ ನವೀನತೆ; ಈಗ ತೋರಿಸಿದ್ದೇ ನಿಜವಾದ ನೀತಿ ಎಂಬದನ್ನು ವಿಚಾರಮಾಡಿದರೆ ಕಂಡೀತು. ಮೇಲೇರಬಯಸುವ ಸಮಾಜದಲ್ಲಿ ಬೇರಾವ ನೀತಿಯೂ ನಡೆಯಲಾರದು. ಅರ್ಥಶಾಸ್ತ್ರದ ನಿಯಮಗಳನ್ನು ಅನುಸರಿಸಿದೆಯೆಂದು ಇಂಗ್ಲಿಷ್ ಜನಾಂಗ ಇಂದಿನ ತನಕ ನಿಂತಿಲ್ಲ; ಕೆಲವರೇ ಆದರೂ ಈ ನಿಯಮಗಳನ್ನು ಮುರಿದು ಮೇಲೆ ಹೇಳಿದ ನಿಯಮಗಳನ್ನು ಅನುಸರಿಸಿದಾರೆ, ಅದರಿಂದ. ಅಂತಲೇ ಈ ನೀತಿ ಇದುವರೆಗೆ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಈ ನೀತಿನಿಯಮಗಳನ್ನು ಮುರಿಯುವುದರಿಂದ ಎಂಥ ಹಾನಿ ತಟ್ಟುತ್ತದೆ, ಹೇಗೆ ಸಮಾಜ ಹಿಮ್ಮೆಟ್ಟಬೇಕಾಗುತ್ತದೆಂಬುದನ್ನು ಮುಂದೆ ವಿಚಾರಮಾಡೋಣ.

ಸತ್ಯದ ಮೂಲವನ್ನು ಕುರಿತು ಮೊದಲೇ ಹೇಳಿದೆವು. ಅದಕ್ಕೆ ಯಾವನೇ ಅರ್ಥಶಾಸ್ತ್ರಿ ಹೀಗೆ ಉತ್ತರ ಹೇಳಬಹುದು: "ಪರಸ್ಪರ ಸ್ನೇಹ-ಸಹಾನುಭೂತಿಯಿಂದ ಸ್ವಲ್ಪ ಲಾಭವುಂಟು, ಆದರೆ ಅರ್ಥಶಾಸ್ತ್ರಿ ಆ ಲಾಭವನ್ನು ಲೆಕ್ಕ ಹಾಕಲಾರ. ಅವನು ವಿವೇಚಿಸುವ ಶಾಸ್ತ್ರ ವಸ್ತುಗಳ ಒಡೆಯ ಉಳಿಯುವುದೆಂತು?—ಎಂಬುದನ್ನು ಮಾತ್ರ ವಿಚಾರಮಾಡುತ್ತದೆ. ಈ ಶಾಸ್ತ್ರ ತಪ್ಪಲ್ಲ, ಅನುಭವದಿಂದ ಇದರ ಸಿದ್ಧಾಂತ ಪ್ರಭಾವಕಾರಿಯೆಂದು ತೋರಿಬಂದಿದೆ. ಈ ಶಾಸ್ತ್ರದ ಪ್ರಕಾರ ನಡೆಯುವವರು ನಿಶ್ಚಯವಾಗಿ ಧನಿಕರಾಗಿಯೇ ಆಗುತ್ತಾರೆ, ಹಾಗೆ ನಡೆಯದವರು ಕಂಗಾಲರಾಗಿಬಿಡುತ್ತಾರೆ. ಯೂರೋಪಿನ ಸಮಸ್ತ ಧನಿಕರು ಇದೇ ರೀತಿ ನಡೆದು ಹಣ ಹುಟ್ಟಿಸಿದರು. ಇದರ ವಿರುದ್ಧ ವಾದ ಹೂಡುವುದು ವ್ಯರ್ಥ. ಹಣ ಬರುವುದು ಹೇಗೆ, ಹೋಗುವುದು ಹೇಗೆ ಎಂಬುದನ್ನು ಅನುಭವಿ ಮನುಷ್ಯ ಪ್ರತಿಯೊಬ್ಬನೂ ಬಲ್ಲ."

ಈ ಉತ್ತರ ಸರಿಯಲ್ಲ. ವ್ಯಾಪಾರಿ ರೂಪಾಯಿ ಗಳಿಸುತ್ತಾನೆ; ಆದರೆ ನಿಜವಾಗಿಯೂ ತಾನು ಏನು ಗಳಿಸಿದೆ, ಅದರಿಂದ ರಾಷ್ಟ್ರದ ಮೇಲ್ಮೆ ಆಯಿತೇ ಇಲ್ಲವೇ ಎಂಬುದನ್ನು ಆತ ತಿಳಿಯ. 'ಧನಿಕ' ಎಂಬ ಶಬ್ದದ ಅರ್ಥವನ್ನೂ ಅವರು ಬಹುಸಾರಿ ಅರಿಯರು. ಧನಿಕರಿದ್ದೆಡೆ ದರಿದ್ರರೂ ಇರುವರೆಂಬುದನ್ನು ಅವರು ತಿಳಿಯಲಾರರು. ಯಾವುದೋ ನಿರ್ದಿಷ್ಟ ನಿಯಮದಂತೆ ನಡೆದರೆ ಎಲ್ಲರೂ ಧನಿಕರಾಗಿಬಿಡಬಹುದೆಂದು ಅವರು ಎಷ್ಟೋ ಸಲ ತಪ್ಪಾಗಿ ತಿಳಿಯುತ್ತಾರೆ. ಇದು ಜೋಡು ಕಪಿಲೆ ಇರುವ ಬಾವಿಯಂತೆ. ಒಂದು ಬರಿದಾದರೇ ಮತ್ತೊಂದು ತುಂಬುವುದು. ನಿಮ್ಮಲ್ಲಿರುವ ಒಂದು ರೂಪಾಯಿಯ ಅಧಿಕಾರ ಅಷ್ಟೂ ಇಲ್ಲದವನ ಮೇಲೆಯೇ ನಡೆಯುವುದು. ನಿಮ್ಮೆದುರಿನವನಿಗೆ, ಹತ್ತಿರದವನಿಗೆ ಅದರ ಅಗತ್ಯ ಇಲ್ಲವಾದರೆ ಆ ರೂಪಾಯಿ ವ್ಯರ್ಥ. ನಿಮ್ಮ ನೆರೆಯವನಿಗೆ ಹಣದ ಕೊರತೆ ಎಷ್ಟೆಂಬುದರ ಮೇಲೆ ನಿಮ್ಮ ರೂಪಾಯಿಯ ಶಕ್ತಿ ಅವಲಂಬಿಸಿದೆ. ಬಡತನವಿರುವೆಡೆಯೇ ಸಿರಿತನ ನಡೆದೀತು. ಒಬ್ಬ ಧನಿಕ ಆಗಬೇಕಾದರೆ ತನ್ನ ನೆರೆಯವರನ್ನು ಬಡವರನ್ನಾಗಿಡಬೇಕೆಂದೇ ಅರ್ಥ.

ಸೂಕ್ತ ಸಮಯದಲ್ಲಿ, ಸೂಕ್ತ ಸ್ಥಳದಲ್ಲಿ ಆವಶ್ಯಕವಾದ, ಸುಖದಾಯಕ ವಸ್ತುಗಳನ್ನು ಉತ್ಪಾದಿಸುವುದು, ಅವನ್ನು ರಕ್ಷಿಸಿಡುವುದು, ಅವುಗಳ ವಿನಿಮಯ ಮಾಡಿಕೊಡುವುದೇ ಸಾರ್ವಜನಿಕ ಅರ್ಥಶಾಸ್ತ್ರದ ಅರ್ಥ. ಸೂಕ್ತ ಸಮಯದಲ್ಲಿ ಪೈರು ಕೊಯ್ಯುವ ರೈತ, ಚೆನ್ನಾಗಿ ಕೆಲಸಮಾಡುವ ಗಾರೆಕೆಲಸದವ, ಒಳ್ಳೆ ಮರಗೆಲಸ ಮಾಡುವ ಬಡಗಿ, ಅಡಿಗೆಮನೆಯನ್ನು ಚೊಕ್ಕವಾಗಿಡುವ ಸ್ತ್ರೀ—ಇವರೆಲ್ಲರನ್ನೂ ನಿಜವಾದ ಅರ್ಥಶಾಸ್ತ್ರಿಗಳೆಂದೇ ತಿಳಿಯಬೇಕು. ಇವರೆಲ್ಲ ಇಡೀ ರಾಷ್ಟ್ರದ ಸಂಪತ್ತು ಹೆಚ್ಚಿಸುವವರು. ಇದಕ್ಕೆ ವಿರುದ್ಧವಾದುದನ್ನು ಸಾರ್ವಜನಿಕ ಶಾಸ್ತ್ರವೆನ್ನಲಾಗುವುದಿಲ್ಲ. ಅದರಲ್ಲಿ ಕೇವಲ ಒಬ್ಬ ವಸ್ತು ಸಂಗ್ರಹ ಮಾಡುತ್ತಾನೆ, ಇತರರಿಗೆ ಇಲ್ಲದಂತೆ ಮಾಡುತ್ತಾನೆ, ತಾನು ಮಾತ್ರ ಉಪಭೋಗಿಸುತ್ತಾನೆ. ಅಂಥವನು ತನ್ನ ಹೊಲ ಮನೆ ದನಕರುಗಳಿಗೆ ಎಷ್ಟು ಬೆಲೆ ಸಿಕ್ಕೀತೋ ತಾನು ಅಷ್ಟು ಹಣಗಾರನೆಂದು ಭಾವಿಸಿಕೊಳ್ಳುತ್ತಾನೆ. ಆ ಹಣಕ್ಕೆ ಎಷ್ಟು ಹೊಲ, ದನಕರುಗಳು ಸಿಗುವುವೋ ಅಷ್ಟೇ ಅದರ ಬೆಲೆ ಎಂದು ಅವನರಿಯ. ಜತೆಗೇ ಅಂಥವರು ವಸ್ತುಗಳನ್ನೂ ರೂಪಾಯಿಗಳನ್ನೂ ಕೂಡಿಡುತ್ತಾರೆ. ಅಷ್ಟು ಹಣಕ್ಕೆ ದನ ಆಳುಗಳು ಸಿಗಬಹುದೆಂಬುದನ್ನೂ

ಅವರು ಲೆಕ್ಕಹಾಕುತ್ತಾರೆ. ಒಬ್ಬನ ಬಳಿ ಬೆಳ್ಳಿಬಂಗಾರ, ಕಾಳುಕಡಿ ಇವೆ. ಅಂಥವನಿಗೆ ನೌಕರರು ಬೇಕು, ಆದರೆ ಆತನ ನೆರೆಯವರಲ್ಲಿ ಯಾರಿಗಾದರೂ ಬೆಳ್ಳಿಬಂಗಾರದ ಅಥವಾ ಕಾಳುಕಡಿಯ ಅಗತ್ಯ ಇರದಿದ್ದರೆ ಅಂಥವರಿಗೆ ಆಳುಗಳು ಸಿಗುವುದು ಕಠಿಣವಾದೀತು. ಅಂಥವನು ತನ್ನ ರೊಟ್ಟಿಯನ್ನು ತಾನೇ ಸುಟ್ಟುಕೊಳ್ಳಬೇಕಾದೀತು, ತನ್ನ ಬಟ್ಟೆ ತಾನೇ ಹೊಲಿದುಕೊಳ್ಳಬೇಕಾದೀತು, ತನ್ನ ಹೊಲ ತಾನೇ ಉಳಬೇಕಾದೀತು. ಅಂಥ ಪ್ರಸಂಗದಲ್ಲಿ ಆತನ ಬಂಗಾರದ ಬೆಲೆ ಹೊಲದ ಪುರುಳೆ ಕಡ್ಡಿಗಿಂತ ಹೆಚ್ಚಲ್ಲ. ಆತನ ಹಿಟ್ಟು ಹಳಸೀತು, ನೆರೆಯವನಿಗಿಂತ ಹೆಚ್ಚು ತಿನ್ನಲಾರನಲ್ಲ ಅವನು. ಇದರಿಂದಾಗಿ ಅವನು ಎಲ್ಲರಂತೆ ತನ್ನ ರಟ್ಟೆ ಮುರಿದು ಬದುಕಬೇಕಾದೀತು. ಆಗ ಬಹಳ ಮಂದಿ ಬೆಳ್ಳಿಬಂಗಾರ ಕೂಡಿಡಲು ಇಷ್ಟಪಡರು. ಹಣ ಗಳಿಸುವುದೆಂದರೆ ಇತರರ ಮೇಲೆ ಅಧಿಕಾರ ಸಂಪಾದನೆಯೆಂಬುದು ಆಳವಾಗಿ ವಿಚಾರಮಾಡಿದರೆ ಅರಿವಾದೀತು—ಅಂದರೆ ತನ್ನ ಆರಾಮುಕ್ಕಾಗಿ ನೌಕರರು, ವ್ಯಾಪಾರ ಅಥವಾ ಕಸಬುದಾರರ ಶ್ರಮದ ಮೇಲೆ ಅಧಿಕಾರ ಪಡೆಯುವುದು ಎಂದೇ. ನೆರೆಯವರ ಬಡತನ ಹೆಚ್ಚು ಕಡಿಮೆ ಇದ್ದಷ್ಟೂ ಈ ಅಧಿಕಾರದ ಪ್ರಮಾಣವಿದ್ದೀತು. ಒಬ್ಬ ಬಡಗಿಯಿಂದ ಕೆಲಸ ಮಾಡಿಸಿಕೊಳ್ಳಬೇಕಾದವನು ಒಬ್ಬನೇ ಇದ್ದರೆ ಆ ಬಡಗಿ ಸಿಕ್ಕಷ್ಟು ಕೂಲಿಗೇ ಕೆಲಸ ಮಾಡಿಯಾನು. ಕೆಲಸ ಮಾಡಿಸಿಕೊಳ್ಳ ಬೇಕಾದವರು ನಾಲ್ಕಾರು ಮಂದಿ ಇದ್ದರೆ ಕೂಲಿ ಹೆಚ್ಚು ಸಿಕ್ಕುವಲ್ಲಿ ಆತ ಕೆಲಸ ಮಾಡಿಯಾನು. ಆದಷ್ಟು ಹೆಚ್ಚು ಜನರನ್ನು ತನಗಿಂತ ಹೆಚ್ಚು ಬಡತನಲ್ಲಿಡುವುದೇ ಧನಿಕನಾಗುವುದರ ಅರ್ಥ ಎಂಬುದೇ ಸಾರಾಂಶ. ಜನರನ್ನು ಈ ರೀತಿ ಸಂಕಟದಲ್ಲಿ ಇಡುವುದರಿಂದಲೇ ರಾಷ್ಟ್ರಕ್ಕೆ ಲಾಭವಾಗುತ್ತದೆಂದು ಅರ್ಥಶಾಸ್ತ್ರಿಗಳು ಹೇಳುತ್ತಾರೆ. ಎಲ್ಲರೂ ಸಮಾನರಾಗುವುದಂತೂ ಸಾಧ್ಯವಿಲ್ಲ, ಆದರೆ ಅನುಚಿತ ರೀತಿಯಲ್ಲಿ ಜನರಲ್ಲಿ ಬಡತನ ಉಂಟುಮಾಡಿದರೆ ಜನ ದುಃಖಿಗಳಾಗುತ್ತಾರೆ, ಅವರಿಗೆ ಅಪಕಾರವೇ ಆದೀತು. ಬಡತನ–ಸಿರಿತನ ಸ್ವಾಭಾವಿಕವಾದುದಾದರೆ ರಾಷ್ಟ್ರ ಸುಖಿಯೇ.

೨

## ಸಂಪತ್ತಿನ ವಾಹಕಗಳು

ಒಂದು ರಾಷ್ಟ್ರದ ಹಣಕಾಸಿನ ಸಂಚಲನ ಶರೀರದಲ್ಲಿನ ರಕ್ತಪರಿಚಲನೆ ಯಂತೆ. ರಕ್ತ ವೇಗವಾಗಿ ಹರಿಯುವುದು ಆರೋಗ್ಯದ, ವ್ಯಾಯಾಮದ ಲಕ್ಷಣವಾಗಬಹುದು, ನಾಚಿಕೆ ಅಥವಾ ಜ್ವರದ ಲಕ್ಷಣವೂ ಆಗಬಹುದು. ಮೈಮೇಲಿನ ಕೆಂಪು ಬಣ್ಣ ಸ್ವಾಸ್ಥ್ಯದ ಲಕ್ಷಣ. ಒಮ್ಮೊಮ್ಮೆ ರಕ್ತಪಿತ್ತದ ಚಿಹ್ನೆಯೂ ಆಗಬಹುದು. ಮೈಯಲ್ಲಿ ರಕ್ತ ಒಂದೇ ಕಡೆ ಗೆಡ್ಡೆಕಟ್ಟಿದರೆ ಹಾನಿ ಖಂಡಿತ. ಹಾಗೆಯೇ ಹಣವೂ ಒಂದೇ ಕಡೆ ರಾಶಿಯಾದರೆ ಆ ರಾಷ್ಟ್ರಕ್ಕೆ ಹಾನಿ ತಪ್ಪಿದ್ದಲ್ಲ.

ಒಂದು ಹಡಗು ಕಡಲಿನಲ್ಲಿ ಎಲ್ಲೋ ಚೂರುಚೂರಾಗಿ ಒಡೆಯಿತು. ಅದರಲ್ಲಿದ್ದ ಇಬ್ಬರು ನಾವಿಕರು ನಿರ್ಜನ ತೀರಪ್ರದೇಶದಲ್ಲಿ ಬಂದು ಬಿದ್ದರು. ಅಲ್ಲಿ ತಾವೇ ದುಡಿದು ಉಣ್ಣಬೇಕಾದ ಪ್ರಸಂಗ. ಇಬ್ಬರೂ ಆರೋಗ್ಯವಂತ ರಾಗಿದ್ದು ಒಟ್ಟಿಗೆ ದುಡಿದರೆ ಒಳ್ಳೆ ಮನೆ ಕಟ್ಟಬಹುದು, ಚೆನ್ನಾಗಿ ಹೊಲ ಹಸನುಮಾಡಿ ಬೆಳೆಯಬಹುದು, ನಾಳೆಗಾಗಿ ಸ್ವಲ್ಪ ಕಾದಿರಿಸಲೂಬಹುದು. ಇದು ನಿಜವಾದ ಸಂಪತ್ತು, ಇಬ್ಬರೂ ಚೆನ್ನಾಗಿ ದುಡಿದರೆ ಅದರಲ್ಲಿ ಇಬ್ಬರಿಗೂ ಸಮಪಾಲು. ತಮ್ಮ ದುಡಿತದ ಫಲ ಹಂಚಿಕೊಳ್ಳುವ ಅಧಿಕಾರವಿದೆಯೆನ್ನುವುದು ಶಾಸ್ತ್ರನಿಯಮ. ಕೆಲದಿವಸಗಳ ಬಳಿಕ ಒಬ್ಬ ಅಸಂತುಷ್ಟನಾದನೆನ್ನಿ. ಹೊಲ ಹಂಚಿಕೊಂಡರು. ಬೇರೆ ಬೇರೆ ದುಡಿಯತೊಡಗಿದರು. ಒಳ್ಳೆ ಆಯತ ವೇಳೆಯಲ್ಲಿ ಒಬ್ಬ ಬೇನೆ ಬಿದ್ದ. ಸ್ವಾಭಾವಿಕವಾಗಿ ಇನ್ನೊಬ್ಬನನ್ನು ಸಹಾಯಕ್ಕೆ ಕರೆದ. 'ನಿನ್ನ ಕೆಲಸವನ್ನೇನೋ ಮಾಡುತ್ತೇನೆ, ಆದರೆ ಅಗತ್ಯ ಬಿದ್ದಾಗ ನೀನೂ ನನ್ನ ಕೆಲಸ ಮಾಡಬೇಕಾದೀತು. ನಿನ್ನ ಹೊಲದಲ್ಲಿ ನಾನು ಎಷ್ಟು ಘಂಟೆ ಕೆಲಸಮಾಡುತ್ತೇನೋ ಅಷ್ಟು ಘಂಟೆ ಕಾಲ ಅಗತ್ಯ ಬಿದ್ದಾಗ ನೀನೂ ನನ್ನ ಹೊಲದಲ್ಲಿ ದುಡಿಯಬೇಕಾದೀತು'—ಎನ್ನುತ್ತಾನೆ ಆತ. ಬೇನೆ ಬಹು ದಿನ ಎಳೆಯಿತೆಂದರೆ ಪ್ರತಿಸಲವೂ ಆ ಮನುಷ್ಯ ಈ ಕರಾರು ಮಾಡಿಕೊಳ್ಳಲೇ ಬೇಕಾಗುತ್ತದೆ. ಬೇನೆ ಬಿದ್ದವನು ಗುಣಗೊಂಡಮೇಲೆ ಇಬ್ಬರ ಸ್ಥಿತಿಯೂ ಹೇಗಿರುತ್ತದೆ? ಇಬ್ಬರೂ ಮೊದಲಿಗಿಂತ ಬಡವರು, ಹಾಸಿಗೆ ಹಿಡಿದಿದ್ದಷ್ಟು

ದಿನವೂ ರೋಗಿ ದುಡಿಯಲಾಗಲಿಲ್ಲ. ಇನ್ನೊಬ್ಬ ಒಳ್ಳೆ ದುಡಿಮೆಗಾರನೆಂದಾದರೂ ಬೇನೆ ಬಿದ್ದವನ ಹೊಲದಲ್ಲಿ ದುಡಿದಷ್ಟು ಹೊತ್ತು ತನ್ನ ಹೊಲಕ್ಕೆ ಅವನು ಕೊಡುವುದಾಗಲಿಲ್ಲ. ಇಬ್ಬರೂ ಕೂಡಿ ದುಡಿದಿದ್ದರೆ ಹುಟ್ಟುತ್ತಿದ್ದಷ್ಟು ಸಂಪತ್ತಂತೂ ಹುಟ್ಟಲಿಲ್ಲ.

ಅಷ್ಟೇ ಅಲ್ಲ, ಇಬ್ಬರ ಸಂಬಂಧವೂ ಬದಲಾಯಿತು. ರೋಗಿ ಇನ್ನೊಬ್ಬನ ಸಾಲಗಾರನಾದ. ಈಗ ಅವನು ದುಡಿದ ಮೇಲೂ ಕೂಲಿ ಮಾಡಿಯೇ ತನ್ನ ಕಾಳು ಪಡೆಯಬಲ್ಲ. ಇವನು ಬರೆದುಕೊಟ್ಟ ಕರಾರುಪತ್ರದ ಲಾಭವನ್ನು ಆ ಮನುಷ್ಯ ಪಡೆಯಬಯಸಿದ ಎನ್ನಿ. ಹಾಗೆ ಮಾಡಿದ್ದಾದರೆ ಆತ ಪೂರಾ ವಿಶ್ರಾಂತಿ ಪಡೆಯಬಲ್ಲ, ಆಲಸಿಯಾಗಬಲ್ಲ. ಬೇಕಿದ್ದರೆ ಬೇನೆಯಿಂದ ಎದ್ದವನಿಂದ ಮತ್ತೂ ಒಂದು ಕರಾರು ಬರೆಸಿಕೊಳ್ಳಬಹುದು. ಅದನ್ನು ಕಾನೂನಿಗೆ ವಿರುದ್ಧವೆಂದು ಯಾರೂ ಹೇಳರು. ಅಲ್ಲಿ ಯಾವನಾದರೂ ಪರದೇಶಿ ಬಂದರೆ ಒಬ್ಬ ಧನಿಕನಾದುದನ್ನು, ಇನ್ನೊಬ್ಬ ಬೇನೆ ಬಿದ್ದುದನ್ನು ನೋಡಬಹುದು. ಒಬ್ಬ ಸುಖಭೋಗದಲ್ಲಿದಾನೆ, ಆಲಸ್ಯದಲ್ಲಿ ಕಾಲ ನೂಕುತ್ತಾನೆ, ಇನ್ನೊಬ್ಬ ಕೂಲಿ ಮಾಡಿಯೂ ಕಷ್ಟದಿಂದ ಕಾಲಕಳೆಯುತ್ತಿದಾನೆ. ಇನ್ನೊಬ್ಬರಿಂದ ಕೆಲಸ ಮಾಡಿಸಿಕೊಳ್ಳುವುದರಿಂದ ವಾಸ್ತವಿಕವಾಗಿ ಸಂಪತ್ತು ಕಡಿಮೆ ಆಗಿಬಿಡುತ್ತದೆ, ಇದನ್ನು ಈ ಉದಾಹರಣೆಯಿಂದ ಓದುಗರು ಕಾಣಬಹುದು.

ಈಗ ಮತ್ತೊಂದು ಉದಾಹರಣೆ ತೆಗೆದುಕೊಳ್ಳೋಣ. ಮೂರು ಮಂದಿ ಕೂಡಿ ಒಂದು ರಾಜ್ಯ ಸ್ಥಾಪಿಸಿದರು. ಮೂವರೂ ಬೇರೆ ಬೇರೆ ಇರಲು ತೊಡಗಿದರು. ಎಲ್ಲರಿಗೂ ಉಪಯುಕ್ತವಾಗುವಂಥ ಪೈರುಗಳನ್ನು ಒಬ್ಬೊಬ್ಬರೂ ಬೆಳೆದರು. ಇವರಲ್ಲಿ ಒಬ್ಬ ಉಳಿದವರ ಕಾಲ ಉಳಿಸಲೆಂದು ಒಬ್ಬನ ಸಾಮಾನನ್ನು ಇನ್ನೊಬ್ಬನ ಬಳಿಗೆ ಒಯ್ದು ಕೊಡುವ ಹೊಣೆ ಹೊತ್ತುಕೊಂಡ. ಆ ಕೆಲಸಕ್ಕಾಗಿ ಕಾಳು ಪಡೆಯುತ್ತಿದ್ದ. ಈತ ಸರಿಯಾಗಿ ಸಾಮಾನು ತಂದು ಒಯ್ಯುವಂತಿದ್ದರೆ ಎಲ್ಲರಿಗೂ ಲಾಭವೇ. ಆದರೆ ಆತ ಸಾಮಾನನ್ನೇ ಕದ್ದನೆಂದು ತಿಳಿಯಿರಿ. ಬಳಿಕ ಸಂಕಟದ ಸನ್ನಿವೇಶ ಒದಗಿದಾಗ ಕದ್ದ ಅದೇ ಸಾಮಾನನ್ನು ಕಾಳುಕಡಿಯನ್ನು ಬಹು ತುಟ್ಟಿ ಧಾರಣೆಗೆ ತನ್ನ ಕೈಯಿಂದ ಮಾರುತ್ತಾನೆ. ಹೀಗೆ ಮಾಡುತ್ತ ಮಾಡುತ್ತ ಉಳಿದಿಬ್ಬರು ರೈತರನ್ನೂ ಭಿಕಾರಿಗಳನ್ನಾಗಿ ಮಾಡುತ್ತಾನೆ, ಕೊನೆಗೆ ತನ್ನ ಕೂಲಿಗಾರರನ್ನಾಗಿ ಮಾಡಿಕೊಂಡುಬಿಡುತ್ತಾನೆ.

ಮೇಲಿನ ನಿದರ್ಶನದಲ್ಲಿ ಅನ್ಯಾಯ ಸ್ಪಷ್ಟ, ಇಂದಿನ ವ್ಯಾಪಾರಿಗಳ ಸ್ಥಿತಿಯಾದರೂ ಇದೇ. ಈ ಕಳ್ಳತನದ ಬಳಿಕ ಮೂರೂ ಮಂದಿಯ ಐಶ್ವರ್ಯವನ್ನು ಒಟ್ಟುಗೂಡಿಸಿದರೆ ಅದು ಕಡಿಮೆ ಬೀಳುವುದೆಂಬುದನ್ನು ನಾವು ಕಾಣುವುದು. ಇಬ್ಬರ ರೈತರೂ ಕಡಿಮೆ ಕೆಲಸಮಾಡುವರು. ಅಗತ್ಯದ ವಸ್ತುಗಳು ಸಿಗದೆಹೋದುದರಿಂದ ತಮ್ಮ ಪರಿಶ್ರಮದ ಪೂರ್ಣಫಲವನ್ನು ಅವರು ಪಡೆಯರು. ಜತೆಗೆ ಆ ಕಳ್ಳದಳ್ಳಾಳಿಯ ಕೈಗೆ ಸಂದ ಕಳವು ಸಾಮಾನಿನ ಪೂರ್ಣ, ಒಳ್ಳೆಯ ಉಪಯೋಗವೂ ಆಗದು.

ಇದೇ ರೀತಿ ಬೀಜಗಣಿತದ ಸ್ಪಷ್ಟ ಲೆಕ್ಕಹಾಕಿ ಯಾವುದೇ ವಿಶಿಷ್ಟ ರಾಷ್ಟ್ರದ ಸಂಪತ್ತಿನ ಪರೀಕ್ಷೆಯನ್ನೂ ನಡೆಸಬಹುದು. ಸಂಪತ್ತನ್ನು ಗಳಿಸುವ ಸಾಧನಗಳ ಮೇಲಿಂದ ಧನಿಕ ರಾಷ್ಟ್ರವೇ ಅಲ್ಲವೇ ಎಂಬುದನ್ನು ತಿಳಿಯಬಹುದು. ಒಂದು ರಾಷ್ಟ್ರದ ಬಳಿ ಇಂತಿಷ್ಟು ಹಣವಿದೆ, ಆದಕಾರಣ ಅದು ಇಷ್ಟು ಧನಿಕ ದೇಶ ಎಂದು ಹೇಳುವಂತಿಲ್ಲ. ಯಾವನೇ ಒಬ್ಬನ ಬಳಿ ಧನ ಇರುವುದು ಅವನ ಕ್ರಿಯಾಶೀಲತೆ, ಚಾತುರ್ಯ ಹಾಗೂ ಉನ್ನತಿಶೀಲತೆಗಳ ಲಕ್ಷಣವಾಗಬಲ್ಲದೋ ಹಾಗೆಯೇ ಅದು ಹಾನಿಕಾರಕ ಭೋಗವಿಲಾಸ, ಅತ್ಯಾಚಾರ ಹಾಗೂ ಮೋಸಗಾರಿಕೆಗಳಿಗೂ ಸೂಚಕ. ನೀತಿಯೊಂದೇ ಈ ಬಗೆಯ ಲೆಕ್ಕಹಾಕುವುದನ್ನು ನಮಗೆ ಕಲಿಸುತ್ತದೆ. ಒಂದು ಬಗೆಯ ಹಣ ಒಂದಕ್ಕೆ ಹತ್ತರಷ್ಟಾಗುತ್ತದೆ. ಇನ್ನೊಂದು ಬಗೆಯದು ಒಬ್ಬ ಮನುಷ್ಯನ ಕೈಗೆ ಬಂದ ಕೂಡಲೆ ಹತ್ತರಷ್ಟು ಹಣವನ್ನು ನಾಶಮಾಡುವಂಥ ಹಣ.

ಸಾರಾಂಶ : ನೀತಿ ಅನೀತಿಯ ವಿಚಾರಮಾಡದೆ ಧನಸಂಗ್ರಹದ ನಿಯಮದ ರಚನೆ ಮನುಷ್ಯನ ಜಂಬ ತೋರಿಸುವ ಸಂಗತಿ. ಅತ್ಯಂತ ಅಗ್ಗವಾಗಿ ಕೊಂಡು ತೀರಾ ತುಟ್ಟಿಯಾಗಿ ಮಾರುವ ನಿಯಮಕ್ಕೆ ಸಮನಾದ ಲಜ್ಜಾಸ್ಪದ ಸಂಗತಿ ಮತ್ತೊಂದಿಲ್ಲ. ಅತಿ ಅಗ್ಗವಾಗಿ ಕೊಳ್ಳುವುದೇನೋ ಸರಿ, ಆದರೆ ಆ ಧಾರಣೆ ಇಳಿದದ್ದಾದರೂ ಹೇಗೆ? ಬೆಂಕಿ ಬಿದ್ದುದರಿಂದ ಸುಟ್ಟ ಕಟ್ಟಿಗೆಯಿಂದಾದ ಇದ್ದಲು ಅಗ್ಗವೇ ಇದ್ದೀತು. ಭೂಕಂಪದಿಂದ ಕುಸಿದು ಬಿದ್ದ ಮನೆಗಳ ಇಟ್ಟಿಗೆ ಅಗ್ಗವೇ; ಬೆಂಕಿ, ಭೂಕಂಪದ ಅನಾಹುತಗಳು ಜನರ ಲಾಭಕ್ಕೆಂದೇ ಎಂದು ಯಾರೂ ಹೇಳರು. ಹೀಗೆಯೇ ತೀರಾ ತುಟ್ಟಿಯಾಗಿ ಮಾರುವುದೂ ಸರಿಯೇ, ಆದರೆ ತುಟ್ಟಿ ಆದುದಾದರೂ ಹೇಗೆ? ಇಂದು ನಿಮ್ಮ

ರೊಟ್ಟಿಗೆ ಒಳ್ಳೆಯ ಬೆಲೆ ಸಿಕ್ಕಿತು. ಇನ್ನೇನು ಸಾಯುವುದರಲ್ಲಿದ್ದ ಮನುಷ್ಯನ ಕೊನೆಯ ಕಾಸುಗಳನ್ನು ಪಡೆದು ಆ ಧಾರಣೆ ಉಂಟುಮಾಡಿದಿರಾ ? ಅಥವಾ ನೀವು ಆ ರೊಟ್ಟಿಗಳನ್ನೂ ನಾಳೆ ನಿಮ್ಮ ಸರ್ವಸ್ವವನ್ನೂ ನುಂಗಿಹಾಕಿಬಿಡುವ ಸಾಹುಕಾರನಿಗೆ ಕೊಟ್ಟುಬಿಟ್ಟಿರಾ ? ಇಲ್ಲವೆ ನಿಮ್ಮ ಬ್ಯಾಂಕನ್ನು ನಾಳೆ ಕೊಳ್ಳೆ ಹೊಡೆಯುವ ಸಿಪಾಯಿಗೆ ಕೊಟ್ಟಿರೋ ? ಇವುಗಳಲ್ಲಿ ಒಂದಕ್ಕೂ ನೀವು ಈಗ ಉತ್ತರ ಕೊಡದಿರುವುದು ಸಾಧ್ಯ, ಏಕೆಂದರೆ ನಿಮಗೆ ಇದಾವುದರ ಅರಿವೂ ಇರದು. ನೀವು ನಿಮ್ಮ ರೊಟ್ಟಿಯನ್ನು ಉಚಿತವಾದ ಬೆಲೆಗೆ ನೀತಿಪೂರ್ವಕವಾಗಿ ಮಾರಿರುವಿರೋ ಇಲ್ಲವೋ ಎಂಬುದನ್ನು ಹೇಳಬಲ್ಲಿರಿ. ಯೋಗ್ಯನ್ಯಾಯದ ಚಿಂತೆ ಇಡುವುದು ಅಗತ್ಯ. ನಿಮ್ಮ ಕೃತಿಯಿಂದ ಬೇರಾರಿಗೂ ದುಃಖವಾಗ ಬಾರದೆಂದು ತಿಳಿದು ಅದರಂತೆ ನಡೆಯುವುದು ನಿಮ್ಮ ಕರ್ತವ್ಯ.

ಹಣ ಕೊಟ್ಟರೆ ಎಷ್ಟು ದುಡಿಮೆ ಸಿಗುತ್ತದೆಯೆಂಬುದನ್ನೇ ಅದರ ಬೆಲೆ ಅವಲಂಬಿಸಿದೆ. ದುಡಿಮೆ ಪುಕ್ಕಟೆಯಾಗಿ ಸಿಗುತ್ತಿದ್ದರೆ ಹಣದ ಅಗತ್ಯವೇ ಬೀಳುತ್ತಿರಲಿಲ್ಲ. ಹಣವಿಲ್ಲದೆಯೇ ಜನರ ಪರಿಶ್ರಮ ಸಿಕ್ಕೀತು, ಅಂಥ ಉದಾಹರಣೆಗಳೂ ಇವೆ, ಅವನ್ನು ನಾವು ಮೊದಲೇ ವಿಮರ್ಶಿಸಿದೇವೆ, ಧನಬಲಕ್ಕಿಂತ ನೀತಿಬಲವೇ ಹೆಚ್ಚು ಕಾರ್ಯಕಾರಿ ಎಂಬುದನ್ನು ನೋಡಿದೇವೆ. ಧನ ಕೆಲಸ ಮಾಡದ ಕಡೆ ಸದ್ಗುಣ ಕೆಲಸಮಾಡುವುದನ್ನೂ ನೋಡಿಬಿಟ್ಟದೇವೆ. ಇಂಗ್ಲೆಂಡಿನ ಅನೇಕ ಸ್ಥಳಗಳಲ್ಲಿ ಜನ ಹಣದ ಮೋಹಕ್ಕೆ ಬಲಿ ಬೀಳರು.

ಹಣವೆಂದರೆ ಜನರಿಂದ ಕೆಲಸ ಮಾಡಿಸುವ ಶಕ್ತಿ ಎಂದು ನಾವು ಭಾವಿಸಿದರೆ ಅಂಥವರು ಎಷ್ಟೆಷ್ಟು ಚತುರರೋ ಅಷ್ಟೇ ಪ್ರಮಾಣದಲ್ಲಿ ಸಂಪತ್ತು ಬೆಳೆದೀತು. ಹೀಗೆ ವಿಚಾರ ಮಾಡಿದರೆ ನಿಜವಾದ ಸಂಪತ್ತು ಬೆಳ್ಳಿಬಂಗಾರ ಅಲ್ಲ, ಮನುಷ್ಯನೇ ಎಂಬುದು ಅರಿವಾದೀತು. ಭೂಮಿಯ ಬಸಿರು ಬಗೆದು ಧನ ಹುಡುಕಬೇಕಿಲ್ಲ, ಮನುಷ್ಯನ ಹೃದಯದಲ್ಲಿ ಅದನ್ನು ಶೋಧಿಸಬೇಕು. ಇದು ಸರಿಯೆಂದಾದರೆ ಜನರ ತನುಮನಗಳನ್ನು ಸ್ವಸ್ಥವಾಗಿ ಇಡುವುದೇ ಅರ್ಥಶಾಸ್ತ್ರದ ನಿಜವಾದ ನಿಯಮ. ಆಗ ಇಂಗ್ಲೆಂಡು ಗೋಲ್ಕೊಂಡದ ವಜ್ರ ವೈಡೂರ್ಯಗಳಿಂದ ತನ್ನ ಗುಲಾಮರನ್ನು ಅಲಂಕರಿಸಿ ತನ್ನ ವೈಭವಪ್ರದರ್ಶನ ಮಾಡುವ ಬದಲು ಯೂನಾನಿ ಸುಪ್ರಸಿದ್ಧ ಪುರುಷನೊಬ್ಬ ಹೇಳಿದಂತೆ ತನ್ನ ನೀತಿವಂತ ಮಹಾಪುರುಷರ ಕಡೆ ತೋರಿಸಿ " ಇವರೇ ನನ್ನ ಐಶ್ವರ್ಯ " ಎಂದು ಹೇಳುವ ಕಾಲವೂ ಬಂದೀತು.

೩

## ಸಮದರ್ಶಿ ನ್ಯಾಯ

ಕ್ರಿಸ್ತನ ಮುನ್ನ ಹಲವು ಶತಮಾನಗಳ ಹಿಂದೆ ಒಬ್ಬ ಯಹೂದೀ ವ್ಯಾಪಾರಿ ಆಗಿಹೋದ: ಸಾಲೊಮನ್. ಹಣ, ಕೀರ್ತಿ ಎರಡನ್ನೂ ತುಂಬ ಗಳಿಸಿದ್ದ. ಆತನ ಮಾತುಗಳು ಯೂರೋಪಿನಲ್ಲಿ ಇಂದಿಗೂ ಪ್ರಚಾರದಲ್ಲಿವೆ. ವೆನಿಸ್ ನಗರದ ಜನಕ್ಕೆ ಅವನಲ್ಲಿ ಎಷ್ಟು ಆದರವಿತ್ತೆಂದರೆ, ಅವರು ಆತನ ವಿಗ್ರಹವನ್ನೂ ಸ್ಥಾಪಿಸಿದರು. ಆತನ ಮಾತುಗಳನ್ನು ಇಂದು ನೆನೆಸುವುದೇನೋ ದಿಟ, ಆದರೆ ಅದರಂತೆ ನಡೆಯುವವರು ಬಹಳ ವಿರಳ. ಆತ ಹೇಳಿದಾನೆ: “ ಸುಳ್ಳು ಹೇಳಿ ಹಣ ಗಳಿಸುವವರು ಗರ್ವಿಗಳು, ಅದು ಆತನ ಸಾವಿನ ಸಂಕೇತ.” ಇನ್ನೊಂದೆಡೆ ಆತ ನುಡಿದ: “ ಅನ್ಯಾಯದಿಂದ ಗಳಿಸಿದ ಹಣದಿಂದ ಪ್ರಯೋಜನವಿಲ್ಲ, ಸತ್ಯವಾದರೋ ಸಾವಿನಿಂದ ನಮ್ಮನ್ನು ಕಾಯುತ್ತದೆ.” ಈ ಎರಡೂ ಮಾತುಗಳಿಂದ ಸಾಲೊಮನ್ ಅನ್ಯಾಯಾರ್ಜಿತ ಹಣದ ಫಲ ಮೃತ್ಯುವೆಂದು ತೋರಿಸಿದಾನೆ. ಇಂದಿನ ದಿನಗಳಲ್ಲಿ ಎಷ್ಟೊಂದು ಅಸತ್ಯ ಆಡಲಾಗುತ್ತಿದೆ, ಎಷ್ಟೊಂದು ಅನ್ಯಾಯ ಎಸಗಲಾಗುತ್ತಿದೆಯೆಂದರೆ ಸಾಧಾರಣವಾಗಿ ನಾವು ಅದನ್ನು ಸುಳ್ಳು, ಅನ್ಯಾಯ ಎಂದು ಹೇಳಲೂ ಬರುವಂತಿಲ್ಲ. ಸುಳ್ಳು ಜಾಹಿರಾತು ಕೊಡುವುದು, ತಮ್ಮ ಸರಕುಗಳ ಬಗ್ಗೆ ಜನಕ್ಕೆ ತಪ್ಪು ಕಲ್ಪನೆ ಕೊಡುವ ಲೇಬಲ್ (ಪಟ್ಟಿ) ಹಚ್ಚುವುದು ಮುಂತಾದುವುಗಳಂತೆ.

ಬಳಿಕ ಆ ಬುದ್ಧಿವಂತ ಹೇಳುತ್ತಾನೆ: “ ಹಣ ಗಳಿಸಲೆಂದು ಬಡವರಿಗೆ ಕಷ್ಟ ಕೊಡುವವ ಕಡೆಗೆ ಮನೆಮನೆಗೂ ಬಿಕ್ಕೆ ಬೇಡಿಯಾನು.” ಮತ್ತೂ ಹೇಳುತ್ತಾನೆ: “ ಬಡವರು ಬಡವರಾಗಿದಾರೆಂದು ಅವರನ್ನು ಸತಾಯಿಸಬೇಡ. ವ್ಯಾಪಾರದಲ್ಲಿ ದುಃಖಿತರನ್ನು ಪೀಡಿಸಬೇಡ. ಬಡವರನ್ನು ಪೀಡಿಸುವವನನ್ನು ದೇವರು ಪೀಡಿಸಿಯಾನು.” ಆದರೆ ಇಂದು ವ್ಯಾಪಾರದಲ್ಲಿ ಸತ್ತುಬಿದ್ದ ಮನುಷ್ಯನಿಗೇ ಲತ್ತೆ ಕೊಡುತ್ತೇವೆ. ಸಂಕಟದಲ್ಲಿ ಸಿಲುಕಿದವನ ಸಂಕಟದ ದುರ್ಲಾಭ ಪಡೆಯಲು ಸಿದ್ಧವಾಗಿಬಿಡುತ್ತೇವೆ. ಡಕಾಯಿತ, ಸ್ಥಿತಿವಂತನ ಮನೆಗೆ ಡಕಾಯಿತಿ ಹಾಕುತ್ತಾನೆ; ಆದರೆ ವ್ಯಾಪಾರದಲ್ಲಾದರೋ ಬಡವರನ್ನೇ ಲೂಟಿಮಾಡಲಾಗುತ್ತದೆ.

ಮತ್ತೆ ಸಾಲೊಮನ್ ಹೇಳುತ್ತಾನೆ: "ಬಡವರು ಬಲ್ಲಿದರಿಬ್ಬರೂ ಸಮಾನರು. ದೇವರೇ ಅವರನ್ನು ಹುಟ್ಟಿಸಿದವ. ದೇವರೇ ಅವರಿಗೆ ಜ್ಞಾನ ನೀಡುತ್ತಾನೆ." ಬಲ್ಲಿದನಿಗೆ ಬಡವನಿಲ್ಲದೆ, ಬಡವನಿಗೆ ಬಲ್ಲಿದನಿಲ್ಲದೆ ಸಾಗದು. ಒಬ್ಬನಿಗೆ ಇನ್ನೊಬ್ಬನ ಅಗತ್ಯ ಯಾವಾಗಲೂ ಇದ್ದೇ ಇರುತ್ತದೆ, ಆದುದರಿಂದ ಒಬ್ಬರು ಇನ್ನೊಬ್ಬರಿಗಿಂತ ಕೀಳು ಎಂದು ಹೇಳುವಂತೆಯೇ ಇಲ್ಲ. ಆದರೆ ಇಬ್ಬರೂ ತಮ್ಮ ಸಮಾನತೆಯನ್ನು ಮರೆತುಬಿಡುತ್ತಾರೆ. ದೇವರೇ ತಮಗೆ ಜ್ಞಾನ ನೀಡುವವನು ಎಂದು ಪ್ರಜ್ಞೆ ತಪ್ಪಿದಾಗ ವಿಪರೀತವಾದ ಪರಿಣಾಮವೇ ಆಗುತ್ತದೆ.

ಧನ ನದಿಯಂತೆ. ನದಿ ಸದಾ ಸಮುದ್ರದತ್ತ, ಎಂದರೆ ಹಳ್ಳಕ್ಕೆ ಹರಿಯುತ್ತಿರುತ್ತದೆ. ಹಾಗೆಯೇ ಧನವೂ ಆವಶ್ಯಕತೆಯಿರುವ ಕಡೆ ಹರಿಯುತ್ತಿರಬೇಕು. ಆದರೆ ನದಿಯ ವೇಗದಲ್ಲಿ, ಗಮನದಲ್ಲಿ ಪರಿವರ್ತನೆ ಮಾಡಬಹುದಾದಂತೆಯೇ ಧನದ ಗಮನದಲ್ಲಿಯೂ ಪರಿವರ್ತನೆ ಸಾಧ್ಯ. ಎಷ್ಟೋ ನದಿಗಳು ಅತ್ತ ಇತ್ತ ಹರಿಯತೊಡಗುತ್ತವೆ, ಆಗ ಅಕ್ಕಪಕ್ಕದಲ್ಲಿ ಬಹಳಷ್ಟು ನೀರು ನಿಂತುಬಿಡುತ್ತದೆ, ಅದರಿಂದ ವಿಷವಾತಾವರಣ ಉಂಟಾಗಿಬಿಡುತ್ತದೆ. ಇವೇ ನದಿಗಳಿಗೆ ಒಡ್ಡು ಕಟ್ಟಿ ಅಗತ್ಯವಿರುವೆಡೆ ಅದರ ನೀರು ಒಯ್ಯುವುದಾದರೆ ಭೂಮಿಯ ಬೆಳೆಯನ್ನು, ಸುತ್ತಮುತ್ತಲ ವಾತಾವರಣವನ್ನು ಉತ್ತಮಗೊಳಿಸಬಹುದು. ಇದೇ ರೀತಿ ಧನವನ್ನು ಇಷ್ಟ ಬಂದಂತೆ ಬಳಸಿದರೆ ಕೆಡಕು ಹೆಚ್ಚುತ್ತದೆ, ಬಡತನ ಬೆಳೆಯುತ್ತದೆ. ಒಟ್ಟಿನಲ್ಲಿ ಆ ಧನ ವಿಷಸಮಾನವಾಗಿಬಿಡುತ್ತದೆ, ಆದರೆ ಅದೇ ಹಣದ ದಿಕ್ಕನ್ನು ನಿಶ್ಚಯಗೊಳಿಸಿದರೆ, ಅದನ್ನು ನಿಯಮಪೂರ್ವಕವಾಗಿ ವ್ಯವಹಾರಕ್ಕೆ ತಂದರೆ ಅಣೆಕಟ್ಟು ಕಟ್ಟಿದ ನದಿಯಂತೆ ಸುಖಪ್ರದವಾದೀತು.

ಹಣದ ಗಮನವನ್ನು (ಪ್ರವಾಹವನ್ನು) ನಿಯಂತ್ರಿಸುವ ನಿಯಮಗಳನ್ನು ಅರ್ಥಶಾಸ್ತ್ರಜ್ಞರು ಪೂರಾ ಮರೆತುಬಿಡುತ್ತಾರೆ. ಕೇವಲ ಧನ ಗಳಿಸುವ ಶಾಸ್ತ್ರ ಮಾತ್ರ ಅವರದು ; ಧನವನ್ನು ಎಷ್ಟೋ ಬಗೆಯಿಂದ ಗಳಿಸಬಹುದು. ಯೂರೋಪಿನಲ್ಲಿ ಧನಿಕನಾದವನಿಗೆ ವಿಷಪ್ರಾಶನ ಮಾಡಿ ಅವನ ಧನದಿಂದ ಸ್ವಯಂ ಧನಿಕರಾಗುವ ಕಾಲವೂ ಒಂದಿತ್ತು. ಇಂದಾದರೋ ಬಡವರು ತಿನ್ನುವ ಪದಾರ್ಥಗಳಿಗೆ ವ್ಯಾಪಾರಿಗಳು ಏನೇನೋ ಬೆರೆಸಿಬಿಡುತ್ತಾರೆ. ಹಾಲಿಗೆ

ಬಿಳಿಗಾರ, ಹಿಟ್ಟಿನಲ್ಲಿ ಆಲೂಗೆಡ್ಡೆ, ಕಾಫಿಗೆ ಚಿಕೋರೀ, ಬೆಣ್ಣೆಯಲ್ಲಿ ಕೊಬ್ಬು ಹೀಗೆ. ಇದೂ ವಿಷ ಕೊಟ್ಟು ಧನವಂತರಾದಂತೆಯೇ. ಇದನ್ನು ಧನಿಕರಾಗುವ ಕಲೆ ಅಥವಾ ವಿಜ್ಞಾನ ಎನ್ನಬಹುವೇ ?

ಬರೀ ಲೂಟಿಮಾಡಿಯೇ ಹಣ ಗಳಿಸಬೇಕೆಂದು ಅರ್ಥಶಾಸ್ತ್ರಿಗಳು ಹೇಳುತ್ತಾರೆಂದು ತಿಳಿಯಬಾರದು. ಕಾನೂನುಸಂಗತವಾಗಿ, ನ್ಯಾಯಯುಕ್ತವಾದ ಮಾರ್ಗಗಳಿಂದ ಧನಿಕರಾಗುವ ಶಾಸ್ತ್ರ ಅವರದು ಎಂದೆನ್ನಬಹುದು. ಆದರೆ ಈ ಕಾಲದಲ್ಲಿ ಎಷ್ಟೋ ಸಂಗತಿಗಳು ಕಾನೂನುಸಮ್ಮತವಿದ್ದರೂ ನ್ಯಾಯಬುದ್ಧಿಗೆ ವಿರುದ್ಧವಾದುವೇ ಆಗಿರುತ್ತವೆ. ಆದುದರಿಂದ ನ್ಯಾಯವಾಗಿ ಹಣ ಗಳಿಸುವುದೇ ಸರಿಯಾದ ದಾರಿ. ನ್ಯಾಯವಾಗಿಯೇ ಧನಸಾರ್ಜನೆ ಮಾಡುವುದು ಸರಿಯೆಂದು ಆದರೆ ನ್ಯಾಯಾನ್ಯಾಯವಿವೇಕ ಹುಟ್ಟಿಸುವುದೇ ಮನುಷ್ಯನ ಮೊದಲ ಕೆಲಸ ಆಗಬೇಕು. ಕೇವಲ ಕೊಟ್ಟು ತೆಗೆದುಕೊಳ್ಳುವ ವೃತ್ತಿನಿಯಮಗಳಿಂದ ವ್ಯಾಪಾರ ನಡೆಸಿದರೆ ಸಾಲದು. ಮೀನು, ತೋಳ, ಇಲಿಗಳೂ ಹೀಗೆ ಮಾಡುತ್ತವೆ. ದೊಡ್ಡ ಮೀನು ಸಣ್ಣ ಮೀನನ್ನು ನುಂಗಿಬಿಡುತ್ತದೆ ; ಇಲಿ ಸಣ್ಣ ಜೀವಜಂತುಗಳನ್ನು ತಿನ್ನುತ್ತದೆ, ತೋಳಗಳಂತೂ ಮನುಷ್ಯನನ್ನು ತಿನ್ನಲೂ ತಯಾರು. ಅವಕ್ಕೆ ಇದೇ ನಿಯಮ, ಬೇರೆ ತಿಳಿವಳಿಕೆಯೇ ಇಲ್ಲ. ಆದರೆ ದೇವರು ಮನುಷ್ಯನಿಗೆ ತಿಳಿವಳಿಕೆ ಕೊಟ್ಟಿದಾನೆ, ನ್ಯಾಯಬುದ್ಧಿ ಇತ್ತಿದಾನೆ. ಅದರ ಮೂಲಕ ಪರರನ್ನು ತಿಂದು, ಅವರನ್ನು ವಂಚಿಸಿ, ತಿರುಕರನ್ನಾಗಿಸಿ ತಾವು ಧನಿಕರಾಗುವುದು ಸಲ್ಲದು.

ಇಂಥ ಸ್ಥಿತಿಯಲ್ಲಿ ಶ್ರಮಿಕರಿಗೆ ಪ್ರತಿಫಲ ಕೊಡಲು ಯಾವುದು ನ್ಯಾಯ ಸೂತ್ರ ?

ಶ್ರಮಿಕ ನಮಗಾಗಿ ಎಷ್ಟು ಶ್ರಮವಹಿಸಿರುವನೋ ಅಷ್ಟು ಶ್ರಮವನ್ನು ನಾವು ಅವನಿಗೆ ಆವಶ್ಯಕವಿರುವಾಗ ನಿರ್ವಹಿಸುವುದು ಯೋಗ್ಯವಾದ ಪ್ರತಿಫಲ ಎಂದು ಮೊದಲೇ ನಾವು ಹೇಳಿದೇವೆ. ಅವನಿಗೆ ಕಡಿಮೆ ಶ್ರಮಪಡಬೇಕಾಗಿ ಬಂದರೆ ಅವನಿಗೆ ಕಡಿಮೆ ಪ್ರತಿಫಲ, ಹೆಚ್ಚು ಶ್ರಮವಿದ್ದರೆ ಹೆಚ್ಚು ಪ್ರತಿಫಲ.

ಒಬ್ಬನಿಗೆ ಒಬ್ಬ ಕೆಲಸಗಾರ ಬೇಕು ; ಆದರೆ ಇಬ್ಬರು ಕೆಲಸಕ್ಕೆ ಬರುತ್ತಾರೆ. ಕಡಿಮೆ ಕೂಲಿ ಕೇಳಿದವನಿಂದ ಕೆಲಸ ಮಾಡಿಸಿಕೊಂಡರೆ ಅವನಿಗೆ

ಕಡಿಮೆ ಕೂಲಿ ಸಿಗುವುದು. ಜನರಿಗೆ ಹೆಚ್ಚು ಕೆಲಸಗಾರರು ಬೇಕಿದ್ದು ಒಬ್ಬನೇ ಕೆಲಸಗಾರನಿದ್ದರೆ ಕೇಳಿದಷ್ಟು ಕೂಲಿ ಕೊಡಬೇಕಾದಿತು, ಸಿಗಬೇಕಾದುದಕ್ಕಿಂತ ಬಹುಶಃ ಹೆಚ್ಚೇ ಸಿಕ್ಕೀತು. ಇವೆರಡೂ ಅತಿಗಳ ನಡುವಿನದೇ ಉಚಿತವಾದ ವೇತನಪ್ರಮಾಣವಾದೀತು.

ನನಗೆ ಒಬ್ಬ ಸ್ವಲ್ಪ ಹಣ ಸಾಲ ಕೊಟ್ಟ. ಸ್ವಲ್ಪ ಅವಧಿಯ ಬಳಿಕ ಸಾಲವನ್ನು ಮುಟ್ಟಿಸುವುದಾದರೆ ನಾನು ಆತನಿಗೆ ಬಡ್ಡಿ ಕೊಡಬೇಕಾದೀತು. ಅದೇ ರೀತಿ ಇಂದು ನನಗಾಗಿ ಯಾರಾದರೂ ಕೆಲಸಮಾಡಿದರೆ ನಾನು ಆತನಿಗೆ ಪ್ರತಿಯಾಗಿ ಆತ ಮಾಡಿದಷ್ಟೇ ಶ್ರಮವನ್ನಲ್ಲದೆ ಬಡ್ಡಿಯ ರೂಪದಲ್ಲಿ ಸ್ವಲ್ಪ ಹೆಚ್ಚಿನ ಶ್ರಮವನ್ನೂ ಮಾಡಬೇಕಾದೀತು. ನನಗಾಗಿ ಒಬ್ಬ ಒಂದು ಘಂಟೆ ದುಡಿದರೆ ನಾನು ಪ್ರತಿಯಾಗಿ ಒಂದು ಘಂಟೆ ಐದು ನಿಮಿಷ ಅಥವಾ ಸ್ವಲ್ಪ ಹೆಚ್ಚು ಪರಿಶ್ರಮ ಮಾಡುವ ವಚನ ಕೊಡಬೇಕಾಗಬಹುದು. ಪ್ರತಿಯೊಬ್ಬ ದುಡಿಮೆಗಾರನಿಗೂ ಇದೇ ಮಾತು ಅನ್ವಯವಾದೀತು.

ನನ್ನ ಬಳಿಗೆ ಇಬ್ಬರು ಕೆಲಸಗಾರರು ಬಂದರು. ಅವರಲ್ಲಿ ಕಡಿಮೆ ಕೂಲಿ ಬೇಡಿದವನನ್ನು ನಾನು ಕೆಲಸಕ್ಕೆ ತೆಗೆದುಕೊಂಡರೆ ಅವನು ಅರೆಹೊಟ್ಟೆ ಉಂಡು ಬದುಕಬೇಕಾದೀತು, ಕೆಲಸ ಸಿಗದವನು ಪೂರಾ ಉಪವಾಸ ಸಾಯ ಬೇಕಾದೀತು. ನಾನು ಕೆಲಸಕ್ಕೆ ತೆಗೆದುಕೊಂಡವನಿಗೆ ಪೂರಾ ಕೂಲಿ ಕೊಟ್ಟರೂ ಮತ್ತೊಬ್ಬ ಕೆಲಸವಿಲ್ಲದೆಯೇ ಇರಬೇಕಾಗುವುದು, ಆದರೆ ಕೆಲಸ ಕೊಡಲ್ಪಟ್ಟವನು ಹಸಿವಿನಿಂದ ಬಳಲುವುದಿಲ್ಲ, ನಾನು ನನ್ನ ಹಣದ ಯೋಗ್ಯ ಉಪಯೋಗ ಮಾಡಿದೆನೆಂದು ತಿಳಿಯಲ್ಪಡುವುದು. ಕೆಲಸಗಾರರಿಗೆ ಕಡಿಮೆ ಕೂಲಿ ಕೊಟ್ಟಾಗಲೇ ಜನ ಹಸಿವಿನಿಂದ ಸಾಯುವ ಪರಿಸ್ಥಿತಿ ನಿಜಕ್ಕೂ ಬರುವುದು. ನಾನು ಸರಿಯಾದ ಕೂಲಿ ಕೊಟ್ಟರೆ ನನ್ನ ಬಳಿ ವ್ಯರ್ಥವಾಗಿ ಹಣ ಸಂಗ್ರಹವಾಗದು, ಭೋಗವಿಲಾಸಕ್ಕಾಗಿ ನಾನು ಹಣ ವೆಚ್ಚಮಾಡೆ, ನನ್ನಿಂದ ಬಡತನ ಬೆಳೆಯದು. ಯೋಗ್ಯ ಬೆಲೆ ನಾನು ಯಾರಿಗೆ ಕೊಡುವೆನೋ ಅವನೂ ಇತರರಿಗೆ ಯೋಗ್ಯ ಬೆಲೆ ಕೊಟ್ಟಾನು. ಹೀಗೆ ನ್ಯಾಯದ ಸ್ರೋತ ಬತ್ತುವ ಬದಲು ಮುಂದೆ ಮುಂದೆ ಹರಿದಂತೆಲ್ಲ ಅದರ ವೇಗ ಹೆಚ್ಚುವುದು, **ಇಂಥ ನ್ಯಾಯಬುದ್ಧಿ ಉಳ್ಳ ರಾಷ್ಟ್ರ ಸುಖಿಯಾದೀತು, ಯೋಗ್ಯ ರೀತಿಯಲ್ಲಿ ಅರಳಿ ಅಭಿವೃದ್ಧಿಯಾಗುತ್ತದೆ.**

ಈ ವಿಚಾರದ ಪ್ರಕಾರ ಅರ್ಥಶಾಸ್ತ್ರಜ್ಞರು ಸುಳ್ಳರಾಗುತ್ತಾರೆ. ಪೈಪೋಟಿ ಹೆಚ್ಚಿದಂತೆಲ್ಲ ರಾಷ್ಟ್ರ ಸಮೃದ್ಧವಾಗುತ್ತದೆ ಎನ್ನುತ್ತಾರೆ ಅವರು. ಇದು ಭ್ರಾಂತಿ. ಪ್ರತಿಸ್ಪರ್ಧೆಯ ಉದ್ದೇಶ್ಯವೇ ಕೂಲಿಯ (ವೇತನದ) ಪ್ರಮಾಣಕ್ಕೆ ಕತ್ತರಿ ಹಾಕುವುದು.

ಇದರಿಂದಾಗಿ ಧನಿಕ ಹೆಚ್ಚು ಧನಸಂಗ್ರಹ ಮಾಡುತ್ತಾನೆ, ಬಡವ ಮತ್ತಷ್ಟು ಬಡವನಾಗುತ್ತಾನೆ. ಇಂಥ ಪೈಪೋಟಿಯಿಂದ ಕಡೆಗೆ ರಾಷ್ಟ್ರದ ವಿನಾಶವೇ ಸಂಭವ. ಪ್ರತಿಯೊಬ್ಬ ಮನುಷ್ಯನಿಗೂ ಅವನವನ ಯೋಗ್ಯತೆಯಂತೆ ಪಾರಿಶ್ರಮಿಕ (ವೇತನ) ಸಿಗಲಿ ಎಂಬುದೇ ನಿಯಮವಾಗಬೇಕು. ಇದರಲ್ಲಿಯೂ ಸ್ಪರ್ಧೆ ಉಂಟಾದೀತು, ಆದರೆ ಈ ಸ್ಪರ್ಧೆಯ ಫಲವಾಗಿ ಜನ ಸುಖಿಗಳಾದಾರು, ಚತುರರಾದಾರು; ಏಕೆಂದರೆ ಕೆಲಸ ಪಡೆಯಲು ತಮ್ಮ ಧಾರಣೆ ಇಳಿಸಿಕೊಳ್ಳುವ ಅಗತ್ಯ ಬೀಳದು, ಕಾರ್ಯಕುಶಲತೆ ಹೆಚ್ಚಿಸಿಕೊಳ್ಳಬೇಕಾದೀತು. ಅಂತಲೇ ಜನರಿಗೆ ಸರಕಾರಿ ನೌಕರಿ ಪಡೆಯಲು ಆಸಕ್ತಿ ಹೆಚ್ಚು. ಅಲ್ಲಿ ದರ್ಜೆಯ ಪ್ರಕಾರ ಸಂಬಳಸಾರಿಗೆ, ಕೇವಲ ಕುಶಲತೆಯಲ್ಲಿ ಮಾತ್ರ ಪೈಪೋಟಿ. ನೌಕರಿಗೆ ಅರ್ಜಿ ಕೊಡುವವನು ಸಂಬಳದ ಮಾತೇ ಎತ್ತುವುದಿಲ್ಲ, ಇತರರಿಗಿಂತ ತನ್ನ ಕುಶಲತೆ ಹೆಚ್ಚು ಎಂಬುದನ್ನೇ ತೋರಿಸಲು ಯತ್ನಿಸುತ್ತಾನೆ. ಸೈನ್ಯ, ನೌಕಾದಳಗಳ ನೌಕರಿಯಲ್ಲಿಯೂ ಇವೇ ನಿಯಮಗಳನ್ನು ಪಾಲಿಸಲಾಗುತ್ತದೆ. ಆದುದರಿಂದಲೇ ಅಂಥ ಕ್ಷೇತ್ರಗಳಲ್ಲಿ ಗೊಂದಲ, ಅನೀತಿ ಕಡಿಮೆ ಕಂಡುಬರುತ್ತದೆ. ವ್ಯಾಪಾರಿಗಳಲ್ಲೇ ಹೀನವಾದ ಪೈಪೋಟಿ ಕಂಡುಬರುತ್ತದೆ. ಅಂತಲೇ ಮೋಸ, ದಗಾ, ಕಳ್ಳತನ, ಕೃತ್ರಿಮ ಮುಂತಾದ ಅನೀತಿ ಹೆಚ್ಚಿವೆ. ತಯಾರಾಗುವ ಪದಾರ್ಥವೂ ಹುಳುಕು, ಹಳಸು. ವ್ಯಾಪಾರಿ ತಾನೇ ನುಂಗಬೇಕೆನ್ನುತ್ತಾನೆ. ಕೆಲಸಗಾರ ತಾನೇ ಲಪಟಾಯಿಸಬೇಕೆನ್ನುತ್ತಾನೆ. ಗಿರಾಕಿ ತಾನೂ ನಡುವೆ ಗಿಟ್ಟಿಸಿಕೊಳ್ಳಬೇಕೆನ್ನುತ್ತಾನೆ. ಹೀಗಾಗಿ ವ್ಯವಹಾರ ಕೆಟ್ಟು, ಜನರಲ್ಲಿ ಗೊಂದಲವೆದ್ದು ಬಡತನದ ಬವಣೆ ಹೆಚ್ಚುತ್ತದೆ, ಸಂಪು ಹೆಚ್ಚುತ್ತವೆ, ಸಾಹುಕಾರರು ವಂಚಕರಾಗುತ್ತಾರೆ, ಗಿರಾಕಿಗಳು ಸತ್ಯ ಪಾಲಿಸದಾಗುತ್ತಾರೆ. ಒಂದು ಅನ್ಯಾಯದಿಂದ ಇತರ ಅನೇಕ ಅನ್ಯಾಯ ಹುಟ್ಟುತ್ತವೆ. ಕೊನೆಗೆ ಸಾಹುಕಾರ, ವ್ಯಾಪಾರಿ, ಗಿರಾಕಿ ಎಲ್ಲರೂ ದುಃಖ ಪಡುತ್ತಾರೆ, ನಷ್ಟಕ್ಕೊಳಗಾಗುತ್ತಾರೆ. **ಇಂಥ ಪದ್ಧತಿಗಳಿರುವ ರಾಷ್ಟ್ರಕ್ಕೆ ದುಃಖವೇ ಗತಿ, ಅದರ ಸಂಪತ್ತೂ ವಿಷಸಮಾನ.**

ಆದಕಾರಣವೇ ಜ್ಞಾನಿಗಳು ಹೇಳಿದ್ದಾರೆ: "ದುಡ್ಡೇ ದೇವರಾದ ಕಡೆ ನಿಜವಾದ ದೇವರಿಗೆ ಬೆಲೆಯೇ ಇಲ್ಲ."

ಇಂಗ್ಲಿಷರು ಬಾಯಲ್ಲಿ ಮಾತ್ರ ಹೇಳುತ್ತಾರೆ: ದುಡ್ಡೇ ಬೇರೆ, ದೇವರೇ ಬೇರೆ—ಎರಡರಲ್ಲೂ ಪರಸ್ಪರ ಹಗೆ. ಬಡವರ ಮನೆಯಲ್ಲೇ ದೇವರ ವಾಸ— ಎಂದು. ಆದರೆ ವ್ಯವಹಾರದಲ್ಲಿ ಮಾತ್ರ ಹಣಕ್ಕೆ ಸರ್ವೋನ್ನತ ಪದವಿ ಕೊಡುತ್ತಾರೆ. ತಮ್ಮಲ್ಲಿರುವ ಧನಿಕರ ಲೆಕ್ಕಹಾಕಿ ತಾವು ಸುಖಿಗಳು ಎಂದು ತಿಳಿಯುತ್ತಾರೆ. ಅರ್ಥಶಾಸ್ತ್ರಜ್ಞರು ಬೇರೆ ಬೇರೆ ಹಣ ಗಳಿಸುವ ನಿಯಮ ರಚಿಸುತ್ತಾರೆ, ಜನ ಅವನ್ನು ಅನುಸರಿಸಿ ಬೇಗ ಧನವಂತರಾಗಲೆಂದು. ಆದರೆ ನಿಜವಾದ ಶಾಸ್ತ್ರ ನ್ಯಾಯಬುದ್ಧಿಯದು. ನೀತಿಪಾಲನೆ ಮಾಡುವುದು ಹೇಗೆ, ಎಂಥ ಸ್ಥಿತಿಯಲ್ಲೂ ನೀತಿ ಬಿಡದಿರುವುದು ಹೇಗೆ—ಎಂಬ ಶಾಸ್ತ್ರವನ್ನು ಜನರಿಗೆ ಕಲಿಸುವ ದೇಶ ಸುಖಿಯಾಗಿರುತ್ತದೆ. ಉಳಿದುದೆಲ್ಲ ವ್ಯರ್ಥಪ್ರಯಾಸ. "ವಿನಾಶಕಾಲೇ ವಿಪರೀತಬುದ್ಧಿಃ"ಗೆ ಸಮಾನ. ಹೇಗಾದರೂ ಆಗಲಿ ಹಣ ಗಳಿಸಿಕೊಳ್ಳುವ ಶಿಕ್ಷಣ ಕೊಡುವುದು ಜನರಿಗೆ ವಿಪರೀತ ಬುದ್ಧಿ ಹೇಳಿಕೊಟ್ಟಂತೆ.

೪

## ಸತ್ಯ ಯಾವುದು ?

ಅರ್ಥಶಾಸ್ತ್ರಜ್ಞರ ಸಾಧಾರಣ ನಿಯಮಗಳು ಸರಿಯಲ್ಲವೆಂಬುದನ್ನು ಹಿಂದಿನ ಮೂರು ಪ್ರಕರಣಗಳಲ್ಲಿ ನೋಡಿದೇವೆ. ಆ ನಿಯಮಗಳಂತೆ ನಡೆದರೆ ವ್ಯಕ್ತಿಗೂ ಸಮಾಜಕ್ಕೂ ದುಃಖವೇ, ಬಡವ ಹೆಚ್ಚು ಬಡವನಾಗುತ್ತಾನೆ, ಬಲ್ಲಿದನ ಬಳಿ ಹೆಚ್ಚು ಹಣ ಸಂಗ್ರಹವಾಗುತ್ತದೆ, ಆದರೂ ಇಬ್ಬರಲ್ಲಿ ಯಾರೂ ಸುಖಿಗಳಲ್ಲ.

ಅರ್ಥಶಾಸ್ತ್ರಜ್ಞರು ಮನುಷ್ಯನ ನಡತೆಯ ಗೋಜಿಗೇ ಹೋಗುವುದಿಲ್ಲ. ಕೇವಲ ಹೆಚ್ಚಿನ ಹಣಸಂಗ್ರಹವೇ ಉನ್ನತಿಯ ಗುರುತು, ಅದೇ ಜನರ ಸುಖದ ಆಧಾರ ಎಂದು ತಿಳಿಯುತ್ತಾರೆ. ಕಲಾಕೌಶಲಗಳನ್ನು ಬೆಳೆಸಿಕೊಂಡು ಎಷ್ಟೆಷ್ಟು ಹೆಚ್ಚು ಹಣ ಗಳಿಸಿದರೆ ಅಷ್ಟಷ್ಟು ಒಳಿತು ಎನ್ನುತ್ತಾರೆ. ಇಂಥ

ವಿಚಾರದ ಪ್ರಚಾರದಿಂದ ಇಂಗ್ಲೆಂಡ್ ಮತ್ತು ಇತರ ದೇಶಗಳಲ್ಲಿ ಕಾರ್ಖಾನೆಗಳು ಹೆಚ್ಚಿಬಿಟ್ಟಿವೆ. ಬಹಳಷ್ಟು ಮಂದಿ ಪಟ್ಟಣಗಳಲ್ಲಿ ಸೇರಿಬಿಟ್ಟಿದಾರೆ. ಹೊಲ ಮನೆ ಬಿಟ್ಟು ಬಂದುಬಿಟ್ಟಿದಾರೆ. ಬಯಲಿನ ಸುಂದರ, ಸ್ವಚ್ಛ ಗಾಳಿ ಸೇವಿಸುವುದನ್ನು ಬಿಟ್ಟು ಕಾರ್ಖಾನೆಯ ದುರ್ವಾಯುವನ್ನು ಹಗಲಿರುಳೂ ಸೇವಿಸುವುದರಲ್ಲೇ ಸುಖ ಕಾಣುತ್ತಿದಾರೆ. ಫಲಿತ : ಜನ ದುರ್ಬಲರಾಗುತ್ತಾ ಇದಾರೆ, ಲೋಭ ಹೆಚ್ಚಾಗುತ್ತಿದೆ, ಅನೀತಿ ಹಬ್ಬುತ್ತಿದೆ. ಅನೀತಿಯನ್ನು ದೂರಗೊಳಿಸುವ ಮಾತನಾಡಿದರೆ ಬುದ್ಧಿವಂತರೆನ್ನಿಸಿಕೊಳ್ಳುವವರು ಹೇಳುತ್ತಾರೆ : ಅನೀತಿ ದೂರವಾಗದು. ಅಜ್ಞಾನಿಗಳಿಗೆ ಇದ್ದಕ್ಕಿದ್ದಂತೆ ಜ್ಞಾನ ಪ್ರಾಪ್ತವಾಗದು. ಆದಕಾರಣ ಹೇಗೆ ನಡೆಯುತ್ತಿದೆಯೋ ಹಾಗೆಯೇ ಸಾಗಲಿ—ಎಂದು. ಈ ವಾದ ಹೂಡುವಾಗ ಬಡವರ ಅನೀತಿಗೆ ಧನಿಕರೇ ಕಾರಣರು ಎಂಬುದನ್ನು ಅವರು ಮರೆಯುತ್ತಾರೆ. ಅವರ ಭೋಗವಿಲಾಸದ ಸಾಮಗ್ರಿಗಳನ್ನು ಹೊಂದಿಸಲು ಬಡವರು ಹಗಲಿರುಳೂ ದುಡಿಯುತ್ತಾರೆ. ಏನಾದರೂ ಕಲಿಯಲು, ಏನಾದರೂ ಒಳ್ಳೆ ಕೆಲಸಮಾಡಲು ಅರೆಗಳಿಗೆಯೂ ಸಿಗದು ಅವರಿಗೆ. ಧನಿಕರನ್ನು ನೋಡಿ ತಾವೂ ಧನಿಕರಾಗಬೇಕೆಂದು ಹಂಬಲಿಸುತ್ತಾರೆ. ಧನಿಕರಾಗದೆ ಹೋದಾಗ ಖಿನ್ನರಾಗುತ್ತಾರೆ, ಸಿಟ್ಟಿಗೇಳುತ್ತಾರೆ. ಬಳಿಕ ವಿವೇಕ ಕಳೆದುಕೊಂಡು ಒಳ್ಳೆ ಹಾದಿಯಲ್ಲಿ ಹಣ ಸಿಗದಿದ್ದುದನ್ನು ಕಂಡು ಮೋಸ-ವಂಚನೆಗಳಿಂದ ಹಣ ಗಳಿಸುವ ವ್ಯರ್ಥಪ್ರಯಾಸ ಮಾಡುತ್ತಾರೆ. ಈ ರೀತಿ ಧನ-ದುಡಿಮೆ ಎರಡೂ ಹಾಳಾಗುತ್ತವೆ, ಇಲ್ಲವೆ ಮೋಸ-ವಂಚನೆ ಹಬ್ಬಲು ಉಪಯೋಗವಾಗುತ್ತವೆ.

ಯಾವುದಾದರೂ ಉಪಯೋಗದ ವಸ್ತು ಉತ್ಪತ್ತಿಯಾಗುವಂಥ ಶ್ರಮವೇ ನಿಜವಾದ ಶ್ರಮ. ಮಾನವಕುಲದ ಭರಣ-ಪೋಷಣಕ್ಕೆ ಅಗತ್ಯವಾದುದೇ ಉಪಯೋಗಕರವಾದುದು. ಹೊಟ್ಟೆ ತುಂಬ ಅನ್ನ, ಮೈಮುಚ್ಚ ಬಟ್ಟೆ ದೊರೆತು, ಬದುಕಿರುವಷ್ಟು ದಿನವೂ ನೀತಿಮಾರ್ಗದಲ್ಲಿ ಸ್ಥಿರವಾಗಿದ್ದು ಸತ್ಕಾರ್ಯ ಮಾಡುವಂತೆ ಮಾಡುವುದೇ ಭರಣ-ಪೋಷಣ. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಭಾರಿ ಭಾರಿ ಯೋಜನೆಗಳು ವ್ಯರ್ಥ. ಗಿರಣಿ-ಕಾರ್ಖಾನೆಗಳನ್ನು ತೆರೆದು ಹಣವಂತರಾಗುವ ಹಾದಿ ಹಿಡಿಯುವುದು ಪಾಪಕರ್ಮ ಎಂದು ಅರಿವಾದೀತು. ಹಣ ಹುಟ್ಟಿಸುವವರು ಬಹುಮಂದಿ ಸಿಕ್ಕಾರು, ಆದರೆ ಆ

ಹಣವನ್ನು ಕ್ರಮಪ್ರಕಾರ ಉಪಯೋಗಿಸುವವರು ವಿರಳ. ಜನ ಹಾಳಾಗಿ ಉಂಟಾಗುವ ಹಣ ನಿರರ್ಥಕ. ಇಂದು ಕೋಟೀಶ್ವರರಾಗಿರುವವರು ದೊಡ್ಡ ದೊಡ್ಡ ಅನೀತಿಯುತ ಸಂಗ್ರಾಮಗಳ ಕಾರಣದಿಂದ ಕೋಟೀಶ್ವರರಾದವರು. ಇಂದಿನ ಯುಗದ ಬಹುಭಾಗ ಯುದ್ಧಗಳ ಮೂಲ ಕಾರಣ ಲೋಭವೇ.

ಇತರರನ್ನು ಸುಧಾರಿಸುವುದು, ಅವರಿಗೆ ತಿಳಿವು ನೀಡುವುದು ಅಸಂಭವ, ಆದುದರಿಂದ ಹೇಗಿರುವುದು ಸರಿಯೋ ಹಾಗೆಯೇ ಇದ್ದು ಹಣ ಗಳಿಸಬೇಕು ಎಂದು ಜನ ಹೇಳುತ್ತಾರೆ. ಹಾಗೆ ಹೇಳುವವರು ಸ್ವತಃ ತಾವೇ ನೀತಿಪಾಲನೆ ಮಾಡರು, ಏಕೆಂದರೆ ನೀತಿಪಾಲನೆ ಮಾಡುವ, ಲೋಭಕ್ಕೆ ಬಲಿಬೀಳದ ಮನುಷ್ಯ ತನ್ನ ಮನಸ್ಸನ್ನು ಸ್ಥಿರವಾಗಿಟ್ಟುಕೊಳ್ಳುತ್ತಾನೆ, ಸನ್ಮಾರ್ಗದಿಂದ ಪರಾವೃತ್ತನಾಗುವುದಿಲ್ಲ, ತನ್ನ ಕೆಲಸದಿಂದಲೇ ಇತರರ ಮೇಲೆ ಪ್ರಭಾವ ಬೀರುತ್ತಾನೆ. ಸಮಾಜದ ಅಂಗಭೂತವಾಗಿರುವವರು ಸ್ವತಃ ನೀತಿನಿಯಮಗಳ ಪಾಲನೆ ಮಾಡದವರೆಗೆ ಸಮಾಜ ಹೇಗೆ ನೀತಿವಂತವಾದೀತು? ನಾವು ಇಷ್ಟ ಬಂದಂತೆ ನಡೆಯುವುದು, ನೆರೆಯವರ ಅನೀತಿಯ ಛಿದ್ರಾನ್ವೇಷಣ ಮಾಡುವುದಾದರೆ ಒಳ್ಳೆಯ ಪರಿಣಾಮ ಹೇಗೆ ಸಂಭವ?

ಹೀಗೆ ವಿಚಾರಮಾಡಿದರೆ ಹಣ ಕೇವಲ ಸಾಧನ ಮಾತ್ರ, ಅದರಿಂದ ಸುಖ–ದುಃಖ ಎರಡೂ ಸಾಧ್ಯ—ಎಂದು ತಿಳಿದೀತು. ಒಳ್ಳೆಯ ಮನುಷ್ಯನ ಕೈಲಿದ್ದರೆ ಅದರಿಂದ ಬೇಸಾಯ ನಡೆದೀತು, ಅನ್ನ ಉತ್ಪತ್ತಿ ಆದೀತು, ರಾಷ್ಟ್ರ ಸುಖಿಯಾದೀತು. ಕೆಟ್ಟವನ ಕೈಗೆ ಬಿದ್ದರೆ ಅದರಿಂದ ಮದ್ದು ಗುಂಡು ಉತ್ಪತ್ತಿಯಾದೀತು, ಜನರ ಸರ್ವನಾಶವಾದೀತು. ಮದ್ದುಗುಂಡು ತಯಾರಿಸುವ ರಾಷ್ಟ್ರ, ಅದು ಪ್ರಯೋಗಿಸಲ್ಪಡುವ ರಾಷ್ಟ್ರ—ಎರಡಕ್ಕೂ ಹಾನಿ, ದುಃಖ.

ಹೀಗೆ ನಿಜವಾದ ಮನುಷ್ಯನೇ ಧನ ಎಂಬುದು ತೋರುತ್ತದೆ. ನೀತಿ ಇರುವ ರಾಷ್ಟ್ರವೇ ಧನಸಂಪನ್ನ ದೇಶ. ಇಂದಿನದು ಭೋಗವಿಲಾಸದ ಯುಗ ಅಲ್ಲ. ಪ್ರತಿ ಮನುಷ್ಯನೂ ಸಾಧ್ಯವಿದ್ದಷ್ಟು ಶ್ರಮ-ದುಡಿಮೆ ಎಸಗಬೇಕು. ಒಬ್ಬ ಆಲಸಿಯಾಗಿದ್ದರೆ ಇನ್ನೊಬ್ಬ ದುಪ್ಪಟ್ಟು ದುಡಿಯಬೇಕಾಗುತ್ತದೆಂಬುದನ್ನು ಹಿಂದಿನ ಉದಾಹರಣೆಗಳಲ್ಲಿ ನೋಡಿದೆವು. ಇಂಗ್ಲೆಂಡಿನಲ್ಲಿ ಈಗ ಹರಡಿರುವ ನಿರುದ್ಯೋಗಕ್ಕೆ ಇದೇ ಕಾರಣ. ಹಣವಂತರಾಗಿರುವ ಎಷ್ಟೋ ಜನ ಯಾವ

ಉಪಯುಕ್ತ ಕೆಲಸವನ್ನೂ ಮಾಡುವುದಿಲ್ಲ, ಅವರಿಗಾಗಿ ಇತರರು ದುಡಿಯ ಬೇಕಾಗುತ್ತದೆ. ಈ ದುಡಿಮೆ ಉಪಯುಕ್ತವಲ್ಲದ ಕಾರಣ ದುಡಿಮೆಗಾರರಿಗೆ ಇದರಿಂದ ಯಾವ ಲಾಭವೂ ಇರದು. ಅದರಿಂದಾಗಿ ರಾಷ್ಟ್ರದ ಬಂಡವಾಳವೂ ಕರಗುತ್ತದೆ. ಮೇಲೆ ನೋಡಲು ಜನರಿಗೆ ಕೆಲಸ ಸಿಕ್ಕಿತೆಂದು ಭಾಸವಾದರೂ ಒಳಹೊಕ್ಕು ಪರೀಕ್ಷಿಸಿದರೆ ಅನೇಕರು ನಿರುದ್ಯೋಗಿಗಳಾಗಿ ಕುಳಿತಿರಬೇಕಾದುದು ಅರಿವಾಗುತ್ತದೆ. ಬಳಿಕ ಈರ್ಷೆ ಹುಟ್ಟುತ್ತದೆ, ಅಸಂತೋಷದ ಕಾರ್ಣಗಳು ಉತ್ಪನ್ನವಾಗುತ್ತವೆ. ಕೊನೆಗೆ ಒಡೆಯ-ಬಡವ, ಮಾಲಿಕ-ಮಜೂರ ಇಬ್ಬರೂ ತಮ್ಮ ಮೇರೆ-ಮರ್ಯಾದೆ ಮೀರುತ್ತಾರೆ. ಬೆಕ್ಕು-ಇಲಿಗಳ ನಡುವೆ ಕಚ್ಚಾಟ ಸದಾ ಇರುವಂತೆಯೇ ಬಡವ, ಒಡೆಯ-ಆಳುಗಳ ನಡುವೆ ಹಗೆ ಉಂಟಾಗಿ ಬಿಡುತ್ತದೆ, ಮನುಷ್ಯ ಮನುಷ್ಯನಾಗಿರದೆ ಪಶುವಿನ ಸ್ಥಿತಿಗೆ ಇಳಿದುಬಿಡುತ್ತಾನೆ.

೫

## ಸಾರಾಂಶ

ಮಹಾನುಭಾವ ರಸ್ಕಿನ್ನನ ಬರೆಹದ ಸಾರಾಂಶ ಇದು. ಅನೇಕರಿಗೆ ನಿಸ್ಸಾರವೆನಿಸಬಹುದು. ಆದರೂ ಇದನ್ನು ಒಮ್ಮೆ ಓದಿದವರು ಮತ್ತೂ ಒಮ್ಮೆ ಇದನ್ನು ಓದಲೆಂದು ಸೂಚಿಸುತ್ತೇನೆ. 'ಇಂಡಿಯನ್ ಒಪಿನಿಯನ್'* ಪತ್ರಿಕೆಯ ಎಲ್ಲ ಓದುಗರೂ ಇವುಗಳನ್ನು ಕುರಿತು ವಿಚಾರಮಾಡಿ ಅದರಂತೆ ನಡೆಯಲೆಂದು ಅಪೇಕ್ಷಿಸುವುದು ಬಹಳ ದೊಡ್ಡ ಅಭಿಲಾಷೆಯಾದೀತು. ಆದರೆ ಹಲವೇ ಓದುಗರಾದರೂ ಇದನ್ನು ಅಧ್ಯಯನ ಮಾಡಿ ಅದರ ಸಾರ ಗ್ರಹಿಸಿದರೆ ನಮ್ಮ ಪರಿಶ್ರಮ ಸಫಲವಾದಂತೆಯೇ. ಒಂದು ಪಕ್ಷ ಹಾಗಾಗದೆ ಇದ್ದರೂ ರಸ್ಕಿನ್ ತನ್ನ ಅಂತಿಮ ಪರಿಚ್ಛೇದದಲ್ಲಿ ತಿಳಿಸಿದಂತೆ ನನ್ನ ಕರ್ತವ್ಯ ಎಸಗಿದ್ದಾಯಿತೆಂದು ತಿಳಿಯುತ್ತೇನೆ, ಅದರಲ್ಲೇ ಅದರ ಫಲವೂ ಸೇರಿಬಿಟ್ಟಿರುತ್ತದೆ. ಆದುದರಿಂದ ಸದಾ ಸಂತೋಷ ತಳೆಯುವುದೇ ಉಚಿತ.

---

* ಗಾಂಧೀಜೀ ದಕ್ಷಿಣ ಆಫ್ರಿಕದಲ್ಲಿದ್ದಾಗ ಡರ್ಬನ್ನಿನಿಂದ ಹೊರಡಿಸುತ್ತಿದ್ದ ವಾರ ಪತ್ರಿಕೆ—ಈಗಲೂ ಪ್ರಕಟವಾಗುತ್ತಿದೆ.

ರಸ್ಕಿನ್ ತನ್ನ ಇಂಗ್ಲಿಷ್ ಬಾಂಧವರಿಗೆ ಬರೆದ ಮಾತು ಅವರಿಗೆ ಒಂದು ಪಾಲು ಅನ್ವಯವಾಗುವುದಾದರೆ ಭಾರತೀಯರಿಗೆ ಸಾವಿರ ಪಾಲು ಅನ್ವಯ ವಾಗುತ್ತದೆ. ಹಿಂದೂಸ್ತಾನದಲ್ಲಿ ಹೊಸ ವಿಚಾರ ಹಬ್ಬುತ್ತಿದೆ. ಇಂದಿನ ಪಾಶ್ಚಾತ್ಯ ಶಿಕ್ಷಣ ಪಡೆದ ತರುಣರಿಗೆ ಸ್ಫೂರ್ತಿ ಬಂದಿದೆ, ಇದು ಸರಿಯೇ. ಸ್ಫೂರ್ತಿಯ ಸದುಪಯೋಗವಾದರೆ ಒಳಿತು, ದುರುಪಯೋಗವಾದರೆ ಕೆಡುಕು ಉಂಟಾದೀತು. ಒಂದೆಡೆಯಿಂದ ಸ್ವರಾಜ್ಯಗಳಿಸಬೇಕೆಂಬ ಕೂಗು, ಮತ್ತೊಂದೆಡೆ ಯಿಂದ ಪರದೇಶಗಳಂತೆ ನಾವೂ ಕಾರ್ಖಾನೆಗಳನ್ನು ತೆರೆದು ವೇಗವಾಗಿ ಧನ ಸಂಗ್ರಹಮಾಡಬೇಕೆಂಬ ಕೂಗು ಎದ್ದಿದೆ.

ಸ್ವರಾಜ್ಯ ಎಂದರೆ ಏನು ? ನಮಗೆ ಅಷ್ಟಾಗಿ ತಿಳಿದಿರದು. ನೆಟಾಲಿನಲ್ಲಿ ಸ್ವರಾಜ್ಯವಿದೆ. ಅಂಥದನ್ನೇ ನಾವೂ ತರಬಯಸುವುದಾದರೆ ಅಂಥ ಸ್ವರಾಜ್ಯ ನರಕದ ರಾಜ್ಯ ಎನ್ನುತ್ತೇನೆ. ನೆಟಾಲಿನವರು ಕಾಫಿರರನ್ನು ತುಳಿಯುತ್ತಾರೆ, ಭಾರತೀಯರ ಪ್ರಾಣಹರಣ ಮಾಡುತ್ತಾರೆ. ಸ್ವಾರ್ಥದಿಂದ ಕುರುಡಾಗಿ ಸ್ವಾರ್ಥ ರಾಜ್ಯ ನಡೆಸುತ್ತಿದಾರೆ. ಕಾಫಿರರೂ ಭಾರತೀಯರೂ ನೆಟಾಲಿನಿಂದ ಹೊರಟುಹೋದರೆ ತಮ್ಮತಮ್ಮೊಳಗೆ ಕಡಿದಾಡಿಯಾರು.

ಹಾಗಾದರೆ ಟ್ರಾನ್ಸ್‌ವಾಲಿನಂಥ ಸ್ವರಾಜ್ಯ ಪಡೆಯೋಣವೇ ? ಜನರಲ್ ಸ್ಮಟ್ಸ್ ಅಲ್ಲಿನ ನಾಯಕರಲ್ಲಿ ಒಬ್ಬರು. ಅವರು ಬರೆಹದಲ್ಲಿ, ಮಾತಿನಲ್ಲಿ ಕೊಟ್ಟ ವಚನವನ್ನು ಪಾಲಿಸುವುದಿಲ್ಲ. ಹೇಳುವುದೊಂದು ಮಾಡುವುದೊಂದು. ಇಂಗ್ಲಿಷರೂ ಅವರಿಂದ ಬೇಸರಗೊಂಡಿದಾರೆ. ಕಾಸು ಉಳಿಸುವ ನೆಪದಿಂದ ಇಂಗ್ಲಿಷ್ ಸೈನಿಕರ ತುತ್ತು ಕಸಿದು ಡಚ್ಚರನ್ನು ನೇಮಿಸಿದಾನೆ. ಇದರಿಂದ ಡಚ್ಚರಿಗೂ ಕೊನೆಗೆ ಸುಖವಿರದು. ಸ್ವಾರ್ಥ ದೃಷ್ಟಿಯ ಜನ ಪರಕೀಯ ಜನರನ್ನು ಲೂಟಿ ಮಾಡಿದಮೇಲೆ ತಮ್ಮವರನ್ನೂ ಸಹಜವಾಗಿ ಸೂರೆಗೊಳ್ಳಲು ಸಿದ್ಧರಾದಾರು.

ಜಗತ್ತಿನ ಎಲ್ಲೆಡೆ ದೃಷ್ಟಿ ಹರಿಸಿದರೆ ಸ್ವರಾಜ್ಯವೆಂದು ಕರೆಸಿಕೊಳ್ಳುವ ರಾಜ್ಯ ಯಾವುದೂ ಜನರ ಉನ್ನತಿ–ಸುಖಗಳಿಗೆ ಸಾಲದೆಂಬುದು ತೋರಿ ಬರುತ್ತದೆ. ಒಂದು ನೇರಾದ ದೃಷ್ಟಾಂತದಿಂದ ಇದನ್ನು ಸುಲಭವಾಗಿ ಮನಗಾಣಬಹುದು. ದರೋಡೆಗಾರರ ಗುಂಪಿನಲ್ಲಿ ಸ್ವರಾಜ್ಯವೇ ನೆಲೆ

ಗೊಂಡರೂ ಫಲವೇನು? ಎಲ್ಲರಿಗೂ ಗೊತ್ತು. ಸ್ವತಃ ದರೋಡೆಕಾರನಲ್ಲದವನ ರಾಜ್ಯ ಅವರ ಮೇಲೆ ನಡೆಯುವಂತಾದರೆ ಮಾತ್ರ ಕೊನೆಗೆ ಅವರಿಗೆ ಸುಖ. ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್— ಇವೆಲ್ಲ ದೊಡ್ಡ ದೊಡ್ಡ ರಾಜ್ಯಗಳು. ಅವು ನಿಜಕ್ಕೂ ಸುಖೀರಾಜ್ಯಗಳೆಂದು ತಿಳಿಯಲು ಯಾವುದೇ ಆಧಾರವೂ ಇಲ್ಲ.

ತನ್ನ ಮೇಲೆ ತಾನೇ ಅಂಕೆ ಇಟ್ಟುಕೊಳ್ಳಲು ಸಾಧ್ಯವಾಗುವುದೇ ಸ್ವರಾಜ್ಯದ ನಿಜವಾದ ಅರ್ಥ. ಸ್ವತಃ ನೀತಿವಂತನಾದ, ಪರರನ್ನು ವಂಚಿಸದ ಮನುಷ್ಯ ಮಾತ್ರ ಈ ಕೆಲಸ ಮಾಡಬಲ್ಲ. ಆತ ತಂದೆತಾಯಿ, ಹೆಂಡತಿ ಮಕ್ಕಳು, ಆಳುಕಾಳು, ನೆರೆಹೊರೆಯವರೆಲ್ಲರ ಬಗ್ಗೆ ತನ್ನ ಕರ್ತವ್ಯ ನಿರ್ವಹಿಸ ಬೇಕು. ಅಂಥ ಮನುಷ್ಯ ಯಾವ ದೇಶದಲ್ಲೇ ಇರಲಿ ಸ್ವರಾಜ್ಯವನ್ನು ಅನುಭವಿಸುತ್ತಾನೆ. ಅಂಥವರ ಸಂಖ್ಯೆ ಹೆಚ್ಚಿರುವ ರಾಷ್ಟ್ರಕ್ಕೆ ಸ್ವರಾಜ್ಯ ಸಿಕ್ಕಿದೆಯೆಂದು ತಿಳಿಯಬೇಕು.

ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದ ಮೇಲೆ ಶಾಸನ ನಡೆಸುವುದು ಸಾಧಾರಣವಾಗಿ ಕೆಟ್ಟದ್ದು ಎಂದು ಭಾವನೆ. ನಮ್ಮ ಮೇಲೆ ಇಂಗ್ಲಿಷರು ಕಾರ್ಯ ನಡೆಸುವುದು ತಿರುವುಮುರುವು ಸಂಗತಿ. ಒಂದು ವೇಳೆ ಬ್ರಿಟಿಷರು ಭಾರತವನ್ನು ಬಿಟ್ಟು ಹೊರಟುಹೋದರೆಂದರೆ ಭಾರತೀಯರು ಏನೋ ಭಾರಿ ಕೆಲಸ ಮಾಡಿದರೆಂದು ತಿಳಿಯತಕ್ಕದ್ದಲ್ಲ. ಅವರು ನಮ್ಮ ಮೇಲೆ ರಾಜ್ಯ ನಡೆಸುವುದಕ್ಕೆ ನಾವೇ ಕಾರಣ. ನಮ್ಮ ಒಡಕು, ಅನೀತಿ, ಅಜ್ಞಾನ ಇವೇ ಕಾರಣ. ಈ ಮೂರನ್ನೂ ನಾವು ನಿವಾರಿಸಿಬಿಟ್ಟರೆ ನಾವು ಕಿರುಬೆರಳನ್ನೂ ಎತ್ತಬೇಕಾಗಿಲ್ಲ, ಇಂಗ್ಲಿಷರು ಮಾತಾಡದೆ ಭಾರತದಿಂದ ಹೊರಟುಹೋದಾರು. ಅಷ್ಟೇ ಅಲ್ಲ, ನಾವೂ ನಿಜವಾದ ಸ್ವರಾಜ್ಯ ಅನುಭವಿಸಿಯೇವು.

ಬಾಂಬು ಇತ್ಯಾದಿಗಳಿಂದ ಅನೇಕರು ಸಂತುಷ್ಟರಾದಂತೆ ಕಾಣುತ್ತದೆ. ಇದು ಕೇವಲ ಅಜ್ಞಾನದ, ತಿಳಿಗೇಡಿತನದ ಕುರುಹು. ಇಂಗ್ಲಿಷರನ್ನೆಲ್ಲ ಸದೆಬಡಿಯುವುದು ಸಾಧ್ಯವಾದರೆ ಅವರನ್ನು ಸದೆಬಡಿದವರೇ ಭಾರತದ ಒಡೆಯ ರಾದಾರು. ಅಂದರೆ ಭಾರತ ಗುಲಾಮವಾಗಿಯೇ ಉಳಿದೀತು. ಇಂಗ್ಲಿಷರನ್ನು ನಾಶಗೊಳಿಸಿದ ಬಾಂಬು ಅವರು ಹೊರಟುಹೋದ ಮೇಲೆ ಭಾರತೀಯರ ಮೇಲೆ ಎರಗೀತು. ಫ್ರಾನ್ಸಿನ ಗಣರಾಜ್ಯದ ಅಧ್ಯಕ್ಷನನ್ನು ಕೊಂದವ ಫ್ರೆಂಚನೇ

ಆಗಿದ್ದ. ಅಮೆರಿಕದ ಅಧ್ಯಕ್ಷ ಕ್ಲೀವ್‌ಲ್ಯಾಂಡ್‌ನನ್ನು ಕೊಂದವ ಅಮೆರಿಕನನೇ. ಆದುದರಿಂದ ದುಡುಕಿ ಪಾಶ್ಚಾತ್ಯರ ಅಂಧಾನುಕರಣವನ್ನು ಎಂದೂ ಮಾಡದೆ ಇರುವುದು ನಮಗೆ ಯೋಗ್ಯ.

ಪಾಪಕರ್ಮದಿಂದ, ಇಂಗ್ಲಿಷರನ್ನು ಸದೆಬಡಿದು ನಿಜವಾದ ಸ್ವರಾಜ್ಯ ಸಿಗದಂತೆಯೇ ಭಾರತದಲ್ಲಿ ಕಾರ್ಖಾನೆಗಳನ್ನು ತೆರೆಯುವುದರಿಂದಲೇ ಸ್ವರಾಜ್ಯ ಸಿಗದು. ಬೆಳ್ಳಿಬಂಗಾರದ ಗುಡ್ಡೆ ಹಾಕಿದರೆ ರಾಜ್ಯ ಸಿಗದೆಂಬುದನ್ನು ರಸ್ಕಿನ್ ಪೂರಾ ರುಜುವಾತುಪಡಿಸಿ ತೋರಿಸಿದಾರೆ. ಪಶ್ಚಿಮ ದೇಶಗಳಲ್ಲಿ ಸುಧಾರಣೆ ಬಂದು ಇನ್ನೂ ನೂರು ವರ್ಷ ಮಾತ್ರವಾಗಿದೆಯೆಂದು ನೆನಪಿರಲಿ. ನಿಜ ಹೇಳುವುದಾದರೆ ಐವತ್ತೇ ವರ್ಷ. ಇಷ್ಟೇ ಅವಧಿಯಲ್ಲಿ ಪಶ್ಚಿಮ ದೇಶಗಳಲ್ಲಿ ವರ್ಣಸಾಂಕರ್ಯವಾದಂತೆ ತೋರಿಬರುತ್ತಿದೆ. ಯೂರೋಪಿನಂಥ ದುಃಸ್ಥಿತಿ ಭಾರತಕ್ಕೆ ಎಂದೂ ಬರದಿರಲೆಂದೇ ನಮ್ಮ ಪ್ರಾರ್ಥನೆ. ಯೂರೋಪಿನ ರಾಷ್ಟ್ರಗಳು ಒಂದು ಇನ್ನೊಂದಕ್ಕೆ ಘಾತುಕವಾಗಿವೆ. ಕೇವಲ ತಮ್ಮ ತಮ್ಮ ಸಿದ್ಧತೆಯಲ್ಲಿ ತೊಡಗಿರುವುದರಿಂದ ಮಾತ್ರ ಎಲ್ಲ ಶಾಂತವಾಗಿವೆ. ಒಂದಲ್ಲ ಒಂದು ಬಾರಿ ಭಾರಿ ಬೆಂಕಿ ಹೊತ್ತಿತೆಂದರೆ ಯೂರೋಪಿನಲ್ಲಿ ನರಕವೇ ಕಂಡೀತು. ಯೂರೋಪಿನ ಎಲ್ಲ ರಾಜ್ಯಗಳೂ ಕಪ್ಪು ಮನುಷ್ಯರನ್ನು ತಮ್ಮ ಭಕ್ಷ್ಯವೆಂದು ತಿಳಿದಿವೆ. ಧನಲೋಭವೊಂದೇ ಇರುವೆಡೆ ಬೇರೆ ಸ್ಥಿತಿ ಹೇಗೆ ತಾನೆ ಸಾಧ್ಯ? ಯಾವುದಾದರೂ ದೇಶ ಕಂಡರೆ ಸಾಕು ಕಾಗೆಹದ್ದುಗಳಂತೆ ಈ ರಾಷ್ಟ್ರಗಳು ಅದರ ಮೇಲೆ ಎರಗುತ್ತವೆ. ಇವೆಲ್ಲ ಅವುಗಳ ಕಾರ್ಖಾನೆಗಳ ಕಾರಣಗಳಿಂದಲೇ. ಹಾಗೆ ತಿಳಿಯಲು ನಮ್ಮ ಬಳಿ ಕಾರಣಗಳಿವೆ.

ಭಾರತಕ್ಕೆ ಸ್ವರಾಜ್ಯ ಸಿಗಲೆಂಬುದೇ ಸಮಸ್ತ ಭಾರತೀಯರ ಕೂಗು. ಇದು ಉಚಿತವೇ. ಆದರೆ ಸ್ವರಾಜ್ಯ ನಮಗೆ ನೀತಿಮಾರ್ಗದಿಂದ ಸಿಗಬೇಕು. ಅದು ನಾಮಮಾತ್ರದ ಸ್ವರಾಜ್ಯವಾಗಿರದೆ ವಾಸ್ತವಿಕ ಸ್ವರಾಜ್ಯವಾಗಿರಬೇಕು. ಅಂಥ ಸ್ವರಾಜ್ಯ ವಿನಾಶಕಾರೀ ಮಾರ್ಗಗಳಿಂದ ಸಿಗದು. ಉದ್ಯೋಗ ಬೇಕು, ಆದರೆ ಅದು ಸರಿಯಾದ ದಾರಿಯಲ್ಲಿ ಸಿಗಬೇಕು. ಭಾರತೀಯರು ಬಂಗಾರದಂಥ ಜನರಾಗಿದ್ದರು. ಎಂದೇ ಒಮ್ಮೆ ಭಾರತಭೂಮಿ ಸ್ವರ್ಣಭೂಮಿ ಎನಿಸಿಕೊಂಡಿತ್ತು. ಭೂಮಿಯಾದರೋ ಅದೇ. ಜನ ಮಾತ್ರ ಬದಲಾಗಿದಾರೆ. ಅಂತಲೇ ಈ ಭೂಮಿ ಹಾಳಾಗಿಹೋಗಿದೆ. ಇದನ್ನು ಪುನಃ ಸ್ವರ್ಣಭೂಮಿ

ಮಾಡಲು ನಮ್ಮ ಸದ್ಗುಣಗಳ ಮೂಲಕ ನಾವು ಸುವರ್ಣರೂಪಿಗಳಾಗಬೇಕು. ನಮ್ಮನ್ನು ಸುವರ್ಣದಂತಾಗಿಸಬಲ್ಲ ಪರಸುಗಲ್ಲು ಎರಡು ಅಕ್ಷರಗಳಲ್ಲಿ ಅಡಕವಾಗಿದೆ. ಅದು 'ಸತ್ಯ'. ಆದಕಾರಣ ಪ್ರತಿಯೊಬ್ಬ ಭಾರತೀಯನೂ ಸತ್ಯಕ್ಕೆ ಆಗ್ರಹ ತೊಡುವುದಾದರೆ ಭಾರತಕ್ಕೆ ಕುಳಿತುಕುಳಿತಲ್ಲೇ ಸ್ವರಾಜ್ಯ ಸಿಕ್ಕೀತು.

## ಅಧ್ಯಾಯ – ೨

# ನಿಜ ಅರ್ಥಶಾಸ್ತ್ರ

ಪ್ರತಿಯೊಬ್ಬ ಮನುಷ್ಯನಿಗೂ ಬದುಕುವ ಹಕ್ಕುಂಟು, ಆದಕಾರಣ ತನ್ನ ಊಟಕ್ಕೆ, ಅಗತ್ಯವಿದ್ದಲ್ಲಿ ಬಟ್ಟೆ ಮತ್ತು ವಸತಿಗೆ ಸಾಮಗ್ರಿ ಪಡೆವ ಹಕ್ಕುಂಟು. ಈ ಸುಲಭ ಕ್ರಿಯೆಗೆ ಅರ್ಥಶಾಸ್ತ್ರಿಗಳ ಅಥವಾ ಅವರ ನಿಯಮಗಳ ನೆರವು ಬೇಕಿಲ್ಲ.

'ನಾಳೆಯ ಚಿಂತೆ ಮಾಡಬೇಡ' ಎಂಬುದು ಜಗತ್ತಿನ ಎಲ್ಲ ಧರ್ಮ ಗ್ರಂಥಗಳಲ್ಲೂ ಮಾರ್ಮೊಳಗುತ್ತಿರುವ ವಿಧಿ. ಸುವ್ಯವಸ್ಥಿತ ಸಮಾಜದಲ್ಲಿ ಆಜೀವಿಕೆಯ ಗಳಿಕೆ ಜಗತ್ತಿನಲ್ಲೇ ಅತಿಸುಲಭವಾಗಿರಬೇಕು. ಒಂದು ದೇಶದ ಸುವ್ಯವಸ್ಥೆಯ ಒರೆಗಲ್ಲು ಅದರ ಕೋಟೀಶ್ವರರ ಸಂಖ್ಯೆಯಲ್ಲ, ಅಲ್ಲಿನ ಜನರಿಗೆ ಉಪವಾಸವಿಲ್ಲದಂತಿರುವುದೇ. ಐಹಿಕ ಪ್ರಗತಿಯಿಂದಲೇ ನೀತಿವಿಕಾಸ— ಎಂಬುದನ್ನು ವಿಶ್ವಕ್ಕೇ ಅನ್ವಯಿಸಬಲ್ಲ ನಿಯಮವಾಗಿ ವಿಧಿಸಬಹುದೇ— ಎಂಬುದಷ್ಟೇ ವಿಚಾರಮಾಡಬೇಕಾದುದು.

ಕೆಲವು ನಿದರ್ಶನಗಳನ್ನು ತೆಗೆದುಕೊಳ್ಳೋಣ. ಅಪಾರ ಐಹಿಕ ಸಮೃದ್ಧಿ ಗಳಿಸಿದ್ದಾಗಲೇ ರೋಮ್‌ನ ನೀತಿಪತನ ಆಯಿತು. ಈಜಿಪ್ಟೂ ಹಾಗೆಯೇ, ಇತಿಹಾಸದ ದಾಖಲೆಯುಳ್ಳ ಎಲ್ಲ ದೇಶಗಳೂ ಹಾಗೆಯೇ. ರಾಜನೂ ಭಗವಂತನೂ ಆದ ಕೃಷ್ಣನ ವಂಶಿಕರೂ ಬಾಂಧವರೂ ಸಹ ಐಶ್ವರ್ಯದಲ್ಲಿ ಮುಳುಗಿದ್ದಾಗಲೇ ಪತಿತರಾದರು. ರಾಕ್‌ಫೆಲರುಗಳಿಗೂ ಕಾರ್ನೆಗಿಗಳಿಗೂ ಸಾಮಾನ್ಯ ನೀತಿಮಟ್ಟವನ್ನು ನಾವು ನಿರಾಕರಿಸುವುದಿಲ್ಲ, ಅವರನ್ನು ಉದಾರ ವಾಗಿಯೇ ಸಂತೋಷದಿಂದ ನಿರ್ಣಯಿಸೋಣ. ಅತಿಹೆಚ್ಚಿನ ನೀತಿಮಟ್ಟವನ್ನೂ ಅವರಿಂದ ನಾವು ನಿರೀಕ್ಷಿಸೆವು. ಅವರ ವಿಷಯದಲ್ಲಿ ಐಹಿಕ ಲಾಭ ನೀತಿಯ ಲಾಭವಾಗಿ ಆವಶ್ಯಕವಾಗಿ ಪರಿಣಮಿಸಿಲ್ಲ. ಸಾವಿರಾರು ಮಂದಿ ದೇಶಬಾಂಧವರ ನಿಕಟಸಂಪರ್ಕ ಲಭಿಸಿದ ದಕ್ಷಿಣ ಆಫ್ರಿಕದಲ್ಲಿ ಐಶ್ವರ್ಯ ಹೆಚ್ಚಿದಂತೆಲ್ಲ ಅವರ ನೀತಿಭ್ರಷ್ಟತೆಯೂ ಹೆಚ್ಚುತ್ತಿದ್ದುದನ್ನು ನಾ ಕಂಡೆ. ಸತ್ಯಾಗ್ರಹದ ನೀತಿಪರ ಹೋರಾಟವನ್ನು ಬಡವರು ಮುಂದುವರಿಸಿದಂತೆ ನಮ್ಮ ಸಿರಿವಂತರು ಮುಂದು

ವರಿಸಲಿಲ್ಲ ಬಡವನ ಆತ್ಮಗೌರವಕ್ಕೆ ಘಾತವಾದಷ್ಟು ಧನಿಕನದಕ್ಕೆ ಆಗಲಿಲ್ಲ. ಅಪಾಯದ ಹೆದರಿಕೆ ಇಲ್ಲದಿದ್ದಲ್ಲಿ ಸಿರಿವಂತಿಕೆ ನಿಜವಾದ ವಿಕಾಸಕ್ಕೆ ಹೇಗೆ ಅಡ್ಡಿಯೆಂಬುದನ್ನು ತೀರಾ ಹತ್ತಿರದಲ್ಲೂ ತೋರಿಸಬಲ್ಲೆ.

ಜಗತ್ತಿನ ಧರ್ಮಗ್ರಂಥಗಳು ಅನೇಕ ಆಧುನಿಕ ಪಠ್ಯಗ್ರಂಥಗಳಿಗಿಂತ ಹೆಚ್ಚು ಸುರಕ್ಷಿತವಾದ, ಸ್ವಷ್ಟವಾದ ಅರ್ಥಶಾಸ್ತ್ರದ ನಿಯಮಗಳನ್ನು ಕುರಿತ ನಿಬಂಧಗಳೆಂದು ಎಣಿಸುವ ಸಾಹಸಮಾಡುತ್ತೇನೆ ನಾನು. ನಮಗೆ ನಾವೇ ಕೇಳಿಕೊಳ್ಳುತ್ತಿರುವ ಈ ಪ್ರಶ್ನೆಗಳು ಹೊಸವಲ್ಲ. ಎರಡು ಸಾವಿರ ವರ್ಷಗಳ ಹಿಂದೆ ಏಸುವಿಗೂ ಈ ಪ್ರಶ್ನೆಗಳನ್ನು ಹಾಕಿದ್ದರು. ಸಂತ ಮಾರ್ಕ್ ಈ ಶಾಸ್ತ್ರವನ್ನು ಚೆನ್ನಾಗಿ ವರ್ಣಿಸಿದಾನೆ. ಏಸು ಪ್ರಸನ್ನಾವಸ್ಥೆಯಲ್ಲಿದಾನೆ. ಆತ ಶ್ರದ್ಧಾಳು, ಉತ್ಸುಕ. ಅನಂತತೆಯನ್ನು ಕುರಿತು ಮಾತಾಡುತ್ತಾನೆ. ಸುತ್ತಣ ಜಗತ್ತು ಆತನಿಗೆ ಗೊತ್ತು. ಆತ ತನ್ನ ಕಾಲದ ಅತಿದೊಡ್ಡ ಅರ್ಥಶಾಸ್ತ್ರಜ್ಞ. ಕಾಲದೇಶಗಳನ್ನು ಮಿತಗೊಳಿಸುವಲ್ಲಿ ಸಫಲನಾದ; ಅವುಗಳಿಂದ ಅತೀತನಾದ. ಇಂಥ ಪರಮಪುರುಷನ ಬಳಿಗೇ ಜನ ಓಡಿಬಂದು, ಮಂಡಿಯೂರಿ ಬೇಡುತ್ತಾರೆ: "ನಲ್ಮೆಯ ಸ್ವಾಮಿ, ಅಮರಜೀವನ ಪಡೆಯಲು ಏನು ಮಾಡಲಿ?"—ಎಂದು. ಅಂಥವರಿಗೆ ಏಸು ಹೇಳಿದ: "ನನ್ನೇಕೆ ನಲ್ಮೆಯವನೆಂದು ಕರೆಯುವೆ? ದೇವರೊಬ್ಬನ ಹೊರತು ಮತ್ತಾರೂ ಒಳ್ಳೆಯವರಲ್ಲ. ವಿಧಿಗಳನ್ನು ನೀನು ಬಲ್ಲೆ. ವ್ಯಭಿಚಾರಿಯಾಗಬೇಡ, ಕೊಲಬೇಡ, ಕಳಬೇಡ, ಹುಸಿಸಾಕ್ಷಿ ನುಡಿಯಬೇಡ, ವಂಚಿಸಬೇಡ, ತಾಯಿತಂದೆಗಳನ್ನು ಗೌರವಿಸು." ಆತ ಸ್ವಾಮಿಗೆ ಮರು ನುಡಿದ: "ಸ್ವಾಮಿ, ಇವನ್ನೆಲ್ಲ ಹರೆಯದಿಂದಲೂ ಆಚರಿಸಿದೇನೆ." ಏಸು ಆತನನ್ನು ದಿಟ್ಟಿಸಿನೋಡಿ, ಒಲಿದು, ಇಂತೆಂದ: "ಒಂದು ನಿನ್ನಲ್ಲಿಲ್ಲ; ನಿನ್ನ ದಾರಿ ಹಿಡಿ, ನಿನ್ನಲ್ಲಿರುವುದೆಲ್ಲ ಮಾರು, ಬಡವರಿಗೆ ನೀಡು, ಸ್ವರ್ಗದಲ್ಲಿ ನಿನ್ನ ನಿಕ್ಷೇಪವಿದ್ದೀತು; ಬಾ, ಶಿಲುಬೆ ಹೊರು, ನನ್ನನ್ನನುಸರಿಸು"

ಈ ಮಾತು ಕೇಳಿ ಆತ ದುಃಖಿಯಾದ, ವಿಷಣ್ಣನಾಗಿ ಹೊರಟುಹೋದ, ಆತನಲ್ಲಿ ಭಾರಿ ಸೊತ್ತು ಇತ್ತು. ಏಸು ಸುತ್ತೆಲ್ಲ ನೋಡಿ ಶಿಷ್ಯನಿಗೆ ಹೇಳಿದ: "ದೇವರ ಸಾಮ್ರಾಜ್ಯಕ್ಕೆ ಸಿರಿವಂತರಿಗೆ ಪ್ರವೇಶವಿಲ್ಲ. ಸೂಜಿಯ ಕಣ್ಣಲ್ಲಿ ಒಂಟೆ ಪಾರಾಗಿ ಬಂದೀತು, ಆದರೆ ಸಿರಿವಂತ ದೇವರ ಸಾಮ್ರಾಜ್ಯವನ್ನು ಹೊಗಲಾರ."

ಇಂಗ್ಲಿಷ್ ಭಾಷೆಯಲ್ಲೇ ಅತ್ಯುದಾತ್ತವಾದ ಶಬ್ದಗಳಲ್ಲಿ ನಿರೂಪಿತವಾದ ಶಾಶ್ವತ ಜೀವನತತ್ತ್ವ ಇಲ್ಲಿದೆ. ಆದರೆ ಶಿಷ್ಯರು ಅವಿಶ್ವಾಸದಿಂದ ತಲೆಯಲ್ಲಾಡಿಸಿದರು, ಇಂದಿಗೂ ನಾವು ಮಾಡುವಂತೆ. ಇಂದು ನಾವೆನ್ನುವಂತೆಯೆ ಆತನಿಗೆ ಅವರೆಂದರು: "ನೋಡಿ, ಈ ನಿಯಮ ವ್ಯವಹಾರದಲ್ಲಿ ಹೇಗೆ ವಿಫಲವಾಗುವುದು. ಇರುವುದೆಲ್ಲ ಮಾರಿ ಬರಿಗೈಯಾದರೆ ನಮ್ಮ ಊಟಕ್ಕೇ ಸೊನ್ನೆ. ನಮಗೆ ಹಣ ಬೇಕೇ ಬೇಕು, ಇಲ್ಲವಾದರೆ ಸಾಕಷ್ಟು ನೀತಿವಂತರಾಗಿರಲಾರೆವು." ಅಂತಲೇ ಅವರು ತಮ್ಮ ವಿಷಯವನ್ನು ಇಂತು ಪ್ರತಿಪಾದಿಸುತ್ತಾರೆ: "ಹಾಗಾದರೆ ಉಳಿವು ಯಾರಿಗೆ?" ಎಂದು ಅವರಿಗೆ ಅಮಿತ ಆಶ್ಚರ್ಯವಾಯಿತು. ಅವರತ್ತ ನೋಡುತ್ತ ಏಸು ನುಡಿದ: "ಮನುಷ್ಯರಿಗೆ ಅದು ಅಸಾಧ್ಯ, ಆದರೆ ದೇವರಿಗೆ ಎಲ್ಲವೂ ಸಾಧ್ಯ." ಬಳಿಕ ಪೀಟರ್ ಎನ್ನತೊಡಗಿದ: "ನೋಡು, ನಾವೆಲ್ಲವನ್ನೂ ತೊರೆದು ನಿನ್ನ ಹಿಂದೆ ಬಂದಿದೇವೆ." ಏಸು ಉತ್ತರ ಕೊಟ್ಟ: "ಅಂತಲೇ ನಾನೆನ್ನುವೆ — ನನಗಾಗಿಯಾಗಲಿ — ಸಿದ್ಧಾಂತಕ್ಕಾಗಿಯಾಗಲಿ ಮನೆ, ಮಠ, ಮಡದಿ, ಸೋದರಸೋದರಿಯರು ತಂದೆತಾಯಿಗಳು, ಮಕ್ಕಳು, ಆಸ್ತಿಪಾಸ್ತಿ ತೊರೆದು ಬಂದವರಿಗೆ ಅವೆಲ್ಲಕ್ಕೆ ನೂರು ಪಾಲು ಪಡೆಯದವರು ಯಾರೂ ಇಲ್ಲ, ಇಲ್ಲಿ ಈಗ ಅವೆಲ್ಲವೂ ಸಿಕ್ಕಿಯಾವು, ಪರಲೋಕದಲ್ಲಿ ಅಮರ ಜೀವನ ಲಭಿಸೀತು. ಆದರೆ ಮೊದಲಿದ್ದವರು ಎಷ್ಟೋ ಜನ ಕಡೆಯಾದಾರು, ಕಡೆಗಿದ್ದವರು ಮೊದಲಾದಾರು."

ಇಲ್ಲಿದೆ ಆ ವಿಧಿಯ ಅನುಷ್ಠಾನದ ಪರಿಣಾಮ ಅಥವಾ ಪ್ರತಿಫಲ (ನಿಮಗೆ ಈ ಪದ ಬೇಕ್ಕಿದ್ದರೆ). ಬೇರೆ ಹಿಂದೂವೇತರ ಧರ್ಮಗ್ರಂಥಗಳಿಂದ ಇಂಥ ವಾಕ್ಯಗಳನ್ನು ಉದಾಹರಿಸುವ ತೊಂದರೆ ತೆಗೆದುಕೊಂಡಿಲ್ಲ. ಏಸು ಪ್ರತಿಪಾದಿಸಿದ ನಿಯಮದ ಸಮರ್ಥನೆಗಾಗಿ ನಮ್ಮ ಋಷಿಮುನಿಗಳ ವಾಕ್ಯಗಳನ್ನು, ಬೈಬಲ್‌ನಿಂದ ಉದ್ಧರಿಸಿದಂಥ ವಾಕ್ಯಗಳಿಗಿಂತಲೂ ಬಲವತ್ತರವಾದುವನ್ನೂ ಸಹ ಉದ್ಧರಿಸಿ ನಿಮಗೆ ಅವಮಾನಪಡಿಸೆ. ನಮ್ಮೆದುರು ಇರುವ ಪ್ರಶ್ನೆಗೆ ಹೌದೆಂದು ಉತ್ತರಿಸಲು ಜಗತ್ತಿನ ಅತ್ಯುನ್ನತ ಧರ್ಮೋಪದೇಶಕರ ಜೀವನಗಳೇ ಅತಿಪ್ರಬಲ ಸಮರ್ಥನೆಯಾಗಿವೆ. ಏಸು, ಮಹಮದ್, ಬುದ್ಧ, ನಾನಕ್, ಕಬೀರ, ಚೈತನ್ಯ, ಶಂಕರ, ದಯಾನಂದ, ರಾಮಕೃಷ್ಣರು ಸಾವಿರಾರು ಜನರ ಮೇಲೆ ಅಗಾಧ ಪ್ರಭಾವ ಬೀರಿ ಅವರ ಚಾರಿತ್ರ್ಯ ರೂಪಿಸಿದವರು.

ಅವರ ಬದುಕಿನಿಂದ ಜಗತ್ತು ಸಂಪದ್ಭರಿತವಾಯಿತು. ಅವರೆಲ್ಲ ಸ್ವೇಚ್ಛೆಯಿಂದ ದಾರಿದ್ರ್ಯವನ್ನು ವರಿಸಿದವರು.

ಇಂದಿನ ಐಹಿಕ ಸುಖದ ಲಾಲಸೆಯನ್ನೇ ನಮ್ಮ ಗುರಿಯಾಗಿಟ್ಟು ಕೊಂಡಂತೆಲ್ಲ ಪ್ರಗತಿಪಥದಲ್ಲಿ ಕೆಳಗುರುಳಹತ್ತಿದೇವೆ ಎಂದು ನನ್ನ ನಂಬಿಕೆ, ಇಲ್ಲದಿದ್ದರೆ ನಾನು ಈ ವಿಷಯವನ್ನು ಇಷ್ಟು ವಿಸ್ತರಿಸುತ್ತಿರಲಿಲ್ಲ. ನಾನು ವಿವರಿಸಿರುವ ರೀತಿಯ ಆರ್ಥಿಕ ಪ್ರಗತಿ ನಿಜವಾದ ಪ್ರಗತಿಗೆ ವಿರುದ್ಧ—ಎಂದು ನನ್ನೆಣಿಕೆ. ಅಂತಲೇ ಐಶ್ವರ್ಯವನ್ನು ಹೆಚ್ಚಿಸುವ ಚಟುವಟಿಕೆಗಳನ್ನು ಮಿತ ಗೊಳಿಸುವ ಹಿಂದಿನ ಆದರ್ಶ ಹುಟ್ಟಿದುದು. ಐಹಿಕ ಆಕಾಂಕ್ಷೆಗೇನೂ ಇದು ಅಂತ್ಯ ಹೇಳದು. ಎಂದೂ ಇದ್ದಂತೆ ಐಶ್ವರ್ಯಸಾಧನೆಯೇ ಜೀವನದ ಗುರಿಯಾಗಿ ಉಳ್ಳವರು ಇದ್ದೇ ಇದ್ದಾರು. ಆದರೆ ಅದು ಆದರ್ಶದಿಂದ ಚ್ಯುತಿಯೆಂದು ಎಂದಿನಂತೆಯೇ ಎಣಿಸಿಯೇವು. ಅತ್ಯಂತ ಭಾಗ್ಯವಂತರೂ ಸಹ ಸ್ವೇಚ್ಛೆಯಿಂದ ಬಡವರಾಗಿದ್ದಿದ್ದರೆ ಉಚ್ಚತರ ಸ್ಥಿತಿಯಾಗಿರುತ್ತಿತ್ತೆಂದು ಭಾವಿಸಿದುದು ಎಂಥ ಸೊಗಸಾದ ವಿಷಯ! ಭಗವಂತನನ್ನೂ ಕುಬೇರನನ್ನೂ ಒಟ್ಟಿಗೇ ಆರಾಧಿಸು ವುದು ಸಾಧ್ಯವಿಲ್ಲವೆಂಬುದು ಅತ್ಯುನ್ನತ ಮೌಲ್ಯದ ಆರ್ಥಿಕ ಸತ್ಯ. ಎರಡರಲ್ಲಿ ಒಂದನ್ನು ಆರಿಸಲೇಬೇಕು.

ಪಾಶ್ಚಾತ್ಯ ರಾಷ್ಟ್ರಗಳು ಇಂದು ಭೌತವಾದದ (ವಸ್ತುವಾದದ) ಭೂತದ ಅಡಿಯಲ್ಲಿ ಸಿಕ್ಕಿ ನರಳುತ್ತಿವೆ. ಅವುಗಳ ನೀತಿವಿಕಾಸ ಕುಂಠಿತವಾಗಿಬಿಟ್ಟಿದೆ. ರೂಪಾಯಿ, ಆಣೆ, ಕಾಸಿನಲ್ಲಿ ಅವರು ತಮ್ಮ ಪ್ರಗತಿಯನ್ನು ಅಳೆಯುತ್ತಾರೆ. ಅಮೆರಿಕದ ಸಿರಿವಂತಿಕೆಯೇ ಮಾನದಂಡವಾಗಿಬಿಟ್ಟಿದೆ. ಇತರ ರಾಷ್ಟ್ರಗಳು ಅದನ್ನು ಕಂಡು ಕರುಬುತ್ತವೆ. ಅಮೆರಿಕದ ಸಿರಿವಂತಿಕೆಯನ್ನು ಗಳಿಸೋಣ, ಆದರೆ ಅವರ ಮಾರ್ಗವನ್ನು ಮಾತ್ರ ಬಿಡೋಣ ಎಂದು ನಮ್ಮ ದೇಶಭಾಂದವರು ಕೆಲವರು ಹೇಳುವುದನ್ನು ಕೇಳಿದೇನೆ. ಅಂಥ ಪ್ರಯತ್ನವನ್ನೇನಾದರೂ ಮಾಡಿದರೆ ಅದಕ್ಕೆ ಸೋಲು ಕಟ್ಟಿಟ್ಟದ್ದೆಂದು ಸೂಚಿಸಲೆಳಸುತ್ತೇನೆ. ನಾವು ಏಕಕಾಲದಲ್ಲಿ ವಿವೇಕಿಗಳೂ, ಸಮಚಿತ್ತರೂ ಹಾಗೂ ರೋಷಾವಿಷ್ಟರೂ ಆಗಿರುವುದು ಸಾಧ್ಯವಿಲ್ಲ. ಜಗತ್ತಿನಲ್ಲೇ ಪರಮ ನೀತಿವಂತರಾಗುವಂತೆ ನಮ್ಮ ನಾಯಕರು ನಮಗೆ ಕಲಿಸಲಿ. ಈ ನಮ್ಮ ಭೂಮಿ ಒಂದು ಕಾಲದಲ್ಲಿ ದೇವತೆಗಳ ತವರು ಆಗಿತ್ತಂತೆ. ಗಿರಣಿಯ ಚಿಮಣಿಗಳ, ಕಾರ್ಖಾನೆಗಳ ಗದ್ದಲವೋ ಭೀಕರ, ಗುರಿ

ಅರಿಯದ ಜನ, ಎಷ್ಟೋ ವೇಳೆ ಅಡ್ಡಜ್ಞಾನ ಅವರಿಗೆ, ಪೆಟ್ಟಿಗೆಗಳಲ್ಲಿ ಮೀನು ಗಳನ್ನು ಒಟ್ಟಿದಂತೆ ಒಟ್ಟಲ್ಪಟ್ಟುದರಿಂದ ಪ್ರಸನ್ನಚಿತ್ತವೃತ್ತಿಯಿಲ್ಲ; ತೀರಾ ಅಪರಿಚಯಸ್ಥರ ನಡುವೆ ಇದಾರೆ, ಸಾಧ್ಯವಿದ್ದರೆ ಅವರು ಇವರಿಗೆ ಅರ್ಧಚಂದ್ರ ಪ್ರಯೋಗಿಸಿಯಾರು, ಪ್ರತಿಯಾಗಿ ಇವರು ಅವರಿಗೆ ಅರ್ಧಚಂದ್ರ ಪ್ರಯೋಗಿಸ ಬಹುದು—ಇಂಥ ಜನರಿಂದ ತುಂಬಿದ ಮೋಟಾರುವಾಹನಗಳು ಹರಿದಾಡುವ ರಸ್ತೆಗಳು — ಇಂಥ ನಾಡು ದೇವತೆಗಳ ಆವಾಸಸ್ಥಳವೆಂದು ಊಹಿಸುವುದು ಆಶ್ಚರ್ಯ. ಇವೆಲ್ಲ ಐಹಿಕ ಪ್ರಗತಿಯ ಪ್ರತೀಕಗಳೆಂದು ಎಣಿಸಲ್ಪಟ್ಟಿರುವ ದೆಸೆಯಿಂದ ಇವನ್ನು ಉಲ್ಲೇಖಿಸಿದೇನೆ. ಇವಂತೂ ನಮ್ಮ (ಭೌತ) ಸುಖವನ್ನು ಅಣುವಿನಷ್ಟೂ ಹೆಚ್ಚಿಸವು. ಮಹಾಜ್ಞಾನಿ ವ್ಯಾಲೇಸ್ ತನ್ನ ನಿಶ್ಚಿತ ನಿರ್ಣಯ ಎಂದು ಹೇಳಿರುವುದು ಇದೇ.

“ಗತಕಾಲದಿಂದ ಬಂದಿರುವ ಅತಿಪ್ರಾಚೀನ ದಾಖಲೆಗಳಿಂದ ಸಾಮಾನ್ಯ ನೀತಿವಿಚಾರ ಹಾಗೂ ಕಲ್ಪನೆಗಳು, ಅಂಗೀಕೃತವಾದ ನೀತಿಮಟ್ಟ ಹಾಗೂ ಅದರಿಂದುಂಟಾದ ನಡೆವಳಿಕೆ ಇಂದಿನದಕ್ಕಿಂತ ಯಾವ ಪ್ರಮಾಣದಲ್ಲೂ ಕಡಿಮೆ ಇರಲಿಲ್ಲವೆಂದು ಸಾಕಷ್ಟು ಸೂಚನೆಗಳು ಸಿಗುತ್ತವೆ.”

ಅನಂತರ ಹಲವಾರು ಅಧ್ಯಾಯಗಳಲ್ಲಿ ಆತ, ಇಂಗ್ಲಿಷ್ ದೇಶವಾಸಿ, ಅಲ್ಲಿ ಬೆಳೆದು ಬಂದಿರುವ ಸಿರಿವಂತಿಕೆಯ ಸಂದರ್ಭದಲ್ಲಿ ಉಂಟಾಗಿರುವ ಸನ್ನಿವೇಶ ವನ್ನು ವಿವೇಚಿಸುತ್ತಾನೆ. ಆತ ಹೇಳುತ್ತಾನೆ:

“ಸಂಪತ್ತಿನ ಈ ಶೀಘ್ರವೃದ್ಧಿ ಮತ್ತು ನಿಸರ್ಗದ ಮೇಲೆ ನಮ್ಮ ಪ್ರಾಬಲ್ಯದ ಹೆಚ್ಚಳಗಳು ನಮ್ಮ ಒರಟು ನಾಗರಿಕತೆ ಹಾಗೂ ನಮ್ಮ ಮೇಲು ಮೇಲಿನ ಈಸಾಯಿ ಧರ್ಮಗಳ ಮೇಲೆ ಭಾರಿ ಹೊರೆ ಹೇರಿಬಿಟ್ಟಿವೆ. ಅದರ ಜತೆಗೇ ಅಷ್ಟೇ ಆಶ್ಚರ್ಯಕರವಾದಷ್ಟು, ಹಿಂದೆಂದೂ ಇಲ್ಲದಷ್ಟು ಬಗೆಬಗೆಯ ಸಾಮಾಜಿಕ ಭ್ರಷ್ಟಾಚಾರವೂ ಬಂದುಬಿಟ್ಟಿದೆ.”

ಬಳಿಕ ಸ್ತ್ರೀಪುರುಷರು–ಮಕ್ಕಳ ಶವಗಳ ಮೇಲೆ ಕಾರ್ಖಾನೆಗಳು ಹೇಗೆ ನಿರ್ಮಿತವಾದುವು, ದೇಶ ಸಿರಿವಂತಿಕೆಯಲ್ಲಿ ಮುಂದುವರಿದಂತೆಲ್ಲ ನೀತಿಯಲ್ಲಿ ಹೇಗೆ ಕೆಳಗುರುಳಿತೆಂಬುದನ್ನೂ ತೋರಿಸುತ್ತಾನೆ. ಅಸ್ವಚ್ಛತೆ, ಜೀವಘಾತುಕ ಕಸಬುಗಳು, ಪದಾರ್ಥಗಳ ಬೆರಕೆ, ಲಂಚ ಹಾಗೂ ಜೂಜು—ಇವುಗಳನ್ನು ಉದಾಹರಿಸಿ ಈ ವಿಷಯ ತೋರಿಸುತ್ತಾನೆ. ಸಿರಿವಂತಿಕೆ ಹೆಚ್ಚಿದಂತೆಲ್ಲ ನ್ಯಾಯ

ಅನೀತಿಯುತವಾಗಿರುವುದನ್ನೂ, ಕುಡಿತದಿಂದಲೂ ಆತ್ಮಹತ್ಯೆಯಿಂದಲೂ ಸಾವು ಹೆಚ್ಚಿರುವುದನ್ನೂ, ಅಪ್ರಾಪ್ತಕಾಲದ ಹುಟ್ಟುಗಳ ಹಾಗೂ ಜನನಸಂಬಂಧೀ ದೋಷಗಳ ಸರಾಸರಿ ಹೆಚ್ಚಿರುವುದನ್ನೂ, ಸೂಳೆಗಾರಿಕೆ ಒಂದು ಸಂಸ್ಥೆಯೇ ಆಗಿಬಿಟ್ಟಿರುವುದೆಂಬುದನ್ನೂ ಆತ ತೋರಿಸಿದಾನೆ. ಈ ಅರ್ಥಗರ್ಭಿತ ಮಾತುಗಳಿಂದ ಆತ ತನ್ನ ವಿಮರ್ಶೆಯನ್ನು ಮುಗಿಸಿದಾನೆ :

" ವಿವಾಹವಿಚ್ಛೇದನದ ನ್ಯಾಯಾಲಯಗಳ ನಡೆವಳಿಕೆಗಳು ಐಶ್ವರ್ಯ ಹಾಗೂ ವಿಶ್ರಾಂತಿಯ ಪರಿಣಾಮಗಳ ಮತ್ತೊಂದು ಮುಖ ತೋರಿಸುತ್ತವೆ. ಲಂಡನ್ನಿನ ಉಚ್ಚ ಸಮಾಜದಲ್ಲಿ ಸಾಕಷ್ಟು ವ್ಯವಹರಿಸಿರುವ ಒಬ್ಬ ಮಿತ್ರ ಗ್ರಾಮಾಂತರದಲ್ಲೂ ಲಂಡನ್ನಿನಲ್ಲೂ ಅತ್ಯಂತ ವಿಷಯಲಂಪಟ ಚಕ್ರವರ್ತಿಯ ಕಾಲದಲ್ಲಿಯೂ ಮೀರಿಸಲಾಗಿಲ್ಲದಂಥ ಅನೇಕ ಬಗೆಯ ಅತ್ಯಾಚಾರಗಳನ್ನು ಅನೇಕ ಸಂದರ್ಭಗಳಲ್ಲಿ ಕಾಣಬಹುದೆಂದು ಆಶ್ವಾಸನ ನೀಡಿದಾನೆ. ಯುದ್ಧದ ವಿಷಯವಂತೂ ಏನೂ ಹೇಳಲೇ ಬೇಕಿಲ್ಲ. ರೋಮನ್ ಸಾಮ್ರಾಜ್ಯದ ಉದಯದಂದಿನಿಂದ ಹೆಚ್ಚು ಕಡಿಮೆ ಅದು ಕಾಲಕಾಲಕ್ಕೆ ಕಾಡುವಂಥದೇ ಆಗಿದೆ; ಆದರೆ ಎಲ್ಲ ನಾಗರಿಕ ಜನಾಂಗಗಳಲ್ಲೂ ಯುದ್ಧದ ಬಗ್ಗೆ ಅನಾಸ್ಥೆ ಈಗ ನಿಸ್ಸಂದೇಹವಾಗಿದೆ. ಆದರೂ ಶಸ್ತ್ರಾಸ್ತ್ರಗಳ ಭಾರಿ ಹೊರೆಯನ್ನು ಶಾಂತಿಯ ಪರವಾಗಿ ಹೊರಡಿಸುವ ಅತ್ಯಂತ ಪವಿತ್ರ ಆಶಯಗಳೊಡನೆ ತುಲನೆಮಾಡಿದಾಗ ಆಳುವ ವರ್ಗಗಳಲ್ಲಿ ನೀತಿಪರತೆ ದಿಗ್ದರ್ಶಕ ತತ್ತ್ವವಾಗಿರುವುದರ ಪೂರಾ ಅಭಾವವನ್ನೇ ತೋರಿಸುತ್ತದೆಯೆಂದು ಎಣಿಸಬೇಕು."

ಬ್ರಿಟಿಷರ ಕೃಪೆಯಿಂದ ನಾವು ಎಷ್ಟೋ ಕಲಿತಿದೇವೆ, ಆದರೆ ಆಂತರಿಕ ನೀತಿಪರತೆಯ ವಿಷಯದಲ್ಲಿ ನಾವು ಬ್ರಿಟನ್ನಿನಿಂದ ಪಡೆಯಬೇಕಾದುದು ಬಹಳ ಇಲ್ಲ, ನಾವು ಎಚ್ಚರದಿಂದಿಲ್ಲದಿದ್ದಲ್ಲಿ ಭೌತವಾದದ ರೋಗದ ನಿಮಿತ್ತ ಅದುತ್ತಾಗಿರುವ ಅನೇಕ ಪಾಪಗಳನ್ನು ನಾವೂ ತಂದುಕೊಂಡೇವು. ನಮ್ಮ ನಾಗರಿಕತೆಯನ್ನೂ, ನೀತಿತತ್ತ್ವಗಳನ್ನೂ ನೆಟ್ಟಗೆ ಇಟ್ಟುಕೊಂಡರೆ ಮಾತ್ರವೇ, ನಮ್ಮ ಉಜ್ವಲ ಗತವೈಭವದ ಬಗ್ಗೆ ಜಂಬಕೊಚ್ಚಿಕೊಳ್ಳುವ ಬದಲು ನಮ್ಮ ಪ್ರಾಚೀನ ನೀತಿವೈಭವವನ್ನು ನಮ್ಮ ಬಾಳಿನಲ್ಲೇ ಮೂಡಿಸಿ, ನಮ್ಮ ಬಾಳುವೆಯೇ ಅದಕ್ಕೆ ಸಾಕ್ಷಿಯಂತಾಗುವುದಾದರೇ ನಮಗೆ ಈ ಸಂಬಂಧದಿಂದ ಲಾಭ. ಆಗ ಬ್ರಿಟನ್ನಿಗೂ ನಮಗೂ ಹಿತ. ನಮಗೆ ಆಳರಸರನ್ನು ನೀಡಿದೆಯೆಂದು

ನಾವು ಅದನ್ನು ನಕಲು ಮಾಡತೊಡಗಿದರೆ ಅವರೂ ನಾವೂ ಅಧಃಪತನವನ್ನು ಅನುಭವಿಸಿಯೇವು. ಆದರ್ಶಗಳಿಗೆ ನಾವು ಅಂಜಬೇಕಾಗಿಲ್ಲ. ಅವನ್ನು ಅತ್ಯಂತವಾಗಿ ಕೃತಿಗಿಳಿಸಲೂ ಹೆದರಬೇಕಿಲ್ಲ; ಆಗಲೇ ನಮ್ಮದೊಂದು ನಿಜಕ್ಕೂ ಆಧ್ಯಾತ್ಮಿಕ ರಾಷ್ಟ್ರ, ಆಗ ಚಿನ್ನಕ್ಕಿಂತ ಹೆಚ್ಚು ಸತ್ಯ ತೋರಿಸಿಯೇವು, ಅಧಿಕಾರ–ಐಶ್ವರ್ಯಗಳ ಆಡಂಬರಕ್ಕಿಂತ ಮಿಗಿಲಾಗಿ ನಿರ್ಭೀತಿ ಪ್ರದರ್ಶಿಸಿಯೇವು, ಸ್ವಾರ್ಥ ಪ್ರೇಮಕ್ಕಿಂತ ಹೆಚ್ಚಿನ ಔದಾರ್ಯ ತೋರಿಯೇವು. ನಮ್ಮ ಮನೆಗಳಿಂದಲೂ ಅರಮನೆಗಳಿಂದಲೂ ಮತ್ತು ದೇವಮಂದಿರಗಳಿಂದಲೂ ಐಶ್ವರ್ಯದ ಗುಣ ವೈಶಿಷ್ಟ್ಯಗಳನ್ನು ತೊಡೆದು ನೀತಿಪರತೆಯ ಗುಣವೈಶಿಷ್ಟ್ಯಗಳನ್ನು ತೋರಿದಲ್ಲಿ ಎಂಥ ವಿರುದ್ಧಶಕ್ತಿಗಳ ಒಕ್ಕೂಟಗಳೊಡನಾದರೂ ಭಾರಿ ಸೇನೆಯ ಹೊರೆ ಹೊರದೆಯೇ ಹೋರಾಡಬಲ್ಲೆವು. ಮೊದಲು ನಾವು ದೇವರ ಸಾಮ್ರಾಜ್ಯವನ್ನೂ, ಆತನ ಧರ್ಮವನ್ನೂ ಅರಸೋಣ, ಉಳಿದುದೆಲ್ಲವೂ ಬಳಿಕ ಬಂದೇ ತೀರುವು ದೆಂಬ ಅಪರಾವರ್ತ್ಯ ಆಶ್ವಾಸನವಿದ್ದೇ ಇದೆ. ಇದು ನಿಜವಾದ ಅರ್ಥಶಾಸ್ತ್ರ. ಅದನ್ನು ನೀವೂ ನಾನೂ ಕಾದಿಟ್ಟುಕೊಳ್ಳೋಣ, ನಮ್ಮ ನಿತ್ಯಜೀವನದಲ್ಲಿ ತಂದುಕೊಳ್ಳೋಣ.[೧]

## ಅರ್ಥಶಾಸ್ತ್ರ ಮತು ನೀತಿಶಾಸ್ತ್ರ

ನಿಜವಾದ ಅರ್ಥಶಾಸ್ತ್ರ ಅತ್ಯುನ್ನತ ನೀತಿಮಟ್ಟಕ್ಕೆ ಎಂದೂ ವಿರುದ್ಧ ಅಲ್ಲ, ಎಲ್ಲ ನಿಜವಾದ ನೀತಿಶಾಸ್ತ್ರವೂ ನಿಜವೆನಿಸಬೇಕಾದರೆ ಸರಿಯಾದ ಅರ್ಥ ಶಾಸ್ತ್ರವೇ ಆಗಿರಬೇಕು. ಧನೇಶ್ವರನ (ಕುಬೇರ) ಪೂಜೆಯನ್ನು ಪ್ರತಿಪಾದಿಸಿ, ದುರ್ಬಲರನ್ನು ಬಲಿಗೊಟ್ಟು ಬಲಿಷ್ಠರು ಸಂಪತ್ತನ್ನು ಸಂಗ್ರಹಿಸಗೊಡುವಂಥ ಅರ್ಥಶಾಸ್ತ್ರ ಸುಳ್ಳು ಹಾಗು ದಾರುಣಶಾಸ್ತ್ರ. ಅದು ಮಾರಕ. ತದ್ವಿರುದ್ಧ ಅರ್ಥಶಾಸ್ತ್ರವಾದರೋ ಸಾಮಾಜಿಕ ನ್ಯಾಯಪರ, ಅತ್ಯಂತ ದುರ್ಬಲರನ್ನೂ ಒಳಗೊಂಡು ಎಲ್ಲರ ಏಕರೀತಿಯ ಒಳಿತನ್ನು ಅದು ವರ್ಧಿಸುತ್ತದೆ, ಮತ್ತು ಹಸನಾದ ಬಾಳುವೆಗೆ ಅದು ಅನಿವಾರ್ಯ.[೨]

ಅರ್ಥಶಾಸ್ತ್ರ–ನೀತಿಶಾಸ್ತ್ರಗಳ ನಡುವೆ ಹರಿತವಾದ ಗೆರೆ ಎಳೆಯೆ ಅಥವಾ ಭೇದ ಬಗೆಯೆನೆಂದು ನಾನು ಒಪ್ಪಿಕೊಳ್ಳಬೇಕು. ಒಬ್ಬ ವ್ಯಕ್ತಿಯ ಅಥವಾ

ರಾಷ್ಟ್ರದ ನೀತಿಸ್ವಾಸ್ಥ್ಯಕ್ಕೆ ಮಾರಕವಾದ ಅರ್ಥಶಾಸ್ತ್ರ ಅನೀತಿಪರ, ಆದುದರಿಂದ ಪಾಪಕರ. ಹೀಗೆ ಒಂದು ದೇಶವನ್ನು ಮತ್ತೊಂದು ದೇಶ ಹರಿದು ತಿನ್ನಲು ಅನುಮತಿ ನೀಡುವ ಅರ್ಥಶಾಸ್ತ್ರ ಅನೀತಿಪರ. ಮಿತಿಮೀರಿ ದುಡಿಸಿಕೊಂಡು ತಯಾರಿಸಿದ ವಸ್ತುಗಳನ್ನು ಕೊಳ್ಳುವುದು, ಬಳಸುವುದು ಪಾಪ.೩

ನೀತಿಯನ್ನು ಹಾಗೂ ಸದ್ಭಾವನೆಯನ್ನು ದುರ್ಲಕ್ಷಿಸುವ ಅರ್ಥಶಾಸ್ತ್ರ ಮೇಣದ ಗೊಂಬೆಗಳಿದ್ದಂತೆ, ಜೀವಂತವಿದ್ದಂತೆ ಕಂಡರೂ ಸಜೀವವಾಗಿರುವುದರಲ್ಲಿರುವ ಪ್ರಾಣ ಅಲ್ಲಿ ಇಲ್ಲ. ಪ್ರತಿಯೊಂದು ಆಯತವೇಳೆಯಲ್ಲಿಯೂ ಈ ನವೀನ ಅರ್ಥಶಾಸ್ತ್ರದ ನಿಯಮಗಳು ವ್ಯವಹಾರದಲ್ಲಿ ಮುರಿದುಬಿದ್ದಿವೆ. ಅವನ್ನು ನಿರ್ದೇಶಕ ತತ್ತ್ವಗಳೆಂದು ತಿಳಿಯುವ (ಒಪ್ಪುವ) ರಾಷ್ಟ್ರಗಳೂ ವ್ಯಕ್ತಿಗಳೂ ಹಾಳಾಗಲೇಬೇಕು.

ನೀತಿಯ ಮೂಲ್ಯಗಳನ್ನಲಕ್ಷಿಸುವ ಅಥವಾ ದುರ್ಲಕ್ಷಿಸುವ ಅರ್ಥಶಾಸ್ತ್ರ ಎಲ್ಲ ಅಸತ್ಯ. ಅಹಿಂಸೆಯ ನಿಯಮವನ್ನು ಅರ್ಥಶಾಸ್ತ್ರದ ಆಧಿಪತ್ಯಕ್ಕೆ ವಿಸ್ತರಿಸುವುದೆಂದರೆ ಅಂತರರಾಷ್ಟ್ರೀಯ ವಾಣಿಜ್ಯನಿಯಮನಕ್ಕೆ ನೀತಿಯ ಮೂಲ್ಯಗಳ ಅನ್ವಯವೂ ವಿಚಾರಣೀಯ ಅಂಶವೆನ್ನುವುದಕ್ಕೆ ಚಾಚೂ ಕಡಿಮೆಯಲ್ಲ.

ನಮ್ಮ ರಾಷ್ಟ್ರಸತ್ವವನ್ನು ಸಂಘಟಿಸಬಯಸುತ್ತೇವೆ ನಾವು. ಇದು ಕೇವಲ ಅತ್ಯುತ್ತಮ ಉತ್ಪಾದನ ತಂತ್ರವನ್ನು ಅಳವಡಿಸಿಕೊಳ್ಳುವುದರಿಂದ ಮಾತ್ರ ಸಾಧ್ಯವಿಲ್ಲ, ಉತ್ಪಾದನ ಹಾಗೂ ವಿತರಣವೆರಡರಲ್ಲಿಯೂ ಉತ್ತಮ ಮಾರ್ಗದ ಅವಲಂಬನೆಯಿಂದ ಅದು ಸಾಧ್ಯ.

ಸಮಾನವಿತರಣ ನನ್ನ ಆದರ್ಶ, ಆದರೆ ನಾ ಕಾಣುವ ಮಟ್ಟಿಗೆ ಅದು ಅಸಾಧ್ಯ, ಅಂತಲೇ ನ್ಯಾಯೋಚಿತ ವಿತರಣಕ್ಕಾಗಿ ನಾ ಶ್ರಮಿಸುತ್ತೇನೆ.

ನನ್ನ ಪ್ರಕಾರ ಭಾರತದ, ಅಷ್ಟೇ ಏಕೆ ಜಗತ್ತಿನ ಅರ್ಥರಚನೆ—ಅದರಡಿ ಇರುವ ಯಾರೊಬ್ಬರೂ ಅನ್ನ-ಅರಿವೆ ಕಾಣದೆ ಬವಣೆಪಡಬೇಕಿಲ್ಲದಂತಿರಬೇಕು. ಅರ್ಥಾತ್ ಪ್ರತಿಯೊಬ್ಬನಿಗೂ ತನ್ನ ಚರಿತಾರ್ಥ ನಡೆಸಿಕೊಳ್ಳಲು ಸಾಕಾಗುವಷ್ಟು ಕೆಲಸ ಸಿಗುವಂತಿರಬೇಕು. ಜೀವನದ ಮುಖ್ಯ ಅಗತ್ಯಗಳ ಉತ್ಪಾದನದ ಸಾಧನಗಳು ಜನಸಮೂಹದ ಹಿಡಿತದಲ್ಲಿ ಇದ್ದರೇ ಈ ಆದರ್ಶದ ಸಾರ್ವತ್ರಿಕ ಸಾಧನೆ ಸಾಧ್ಯ. ದೇವರು ಕೊಟ್ಟಿರುವ ಗಾಳಿ-ನೀರು ಇರುವಂತೆ ಅಥವಾ ಇರಬೇಕಾದಂತೆ ಇವು ಎಲ್ಲರಿಗೂ ಮುಕ್ತವಾಗಿ ಸಿಗಬೇಕು; ಇತರರ ಶೋಷಣೆಗೆ

ಮಾಧ್ಯಮವಾಗತಕ್ಕದ್ದಲ್ಲ. ಯಾವುದೇ ದೇಶ, ರಾಷ್ಟ್ರ ಅಥವಾ ಗುಂಪಿಗೆ ಇವುಗಳ ಸರ್ವಮಾನ್ಯ ಅನ್ಯಾಯ. ಈ ಸರಳ ತತ್ತ್ವವನ್ನು ಕಡೆಗಂಡಿರುವುದೇ ಈ ನಿರ್ಭಾಗ್ಯ ನಾಡಿನಲ್ಲಷ್ಟೇ ಅಲ್ಲ, ಜಗತ್ತಿನ ಇತರ ಭಾಗಗಳಲ್ಲೂ ಇರುವ ದಾರಿದ್ರ್ಯಕ್ಕೆ ಕಾರಣ.

## ಅರ್ಥಶಾಸ್ತ್ರ ಮತ್ತು ಧರ್ಮ

ಆರ್ಥಿಕವಾಗಿ ತಪ್ಪಾದುದು ಧಾರ್ಮಿಕವಾಗಿ ಸರಿಯಾಗದು. ಅರ್ಥಾತ್ ಧರ್ಮವೊಂದು ಅರ್ಥಶಾಸ್ತ್ರದ ಮೂಲತತ್ತ್ವಗಳಿಗೆ ಪೆಟ್ಟು ಕೊಟ್ಟಲ್ಲಿ ಅದು ನಿಜವಾದ ಧರ್ಮವಾಗದು, ಕೇವಲ ಒಂದು ಭ್ರಮೆಯಾದೀತು. ಆದರೆ ಈ ಅಭಿಪ್ರಾಯ ನಮ್ಮ ಪ್ರಾಚೀನ ಧರ್ಮಗ್ರಂಥಗಳ ಉಪದೇಶಕ್ಕೆ ವಿರುದ್ಧವೆಂದು ನನ್ನ ವಿಮರ್ಶಕನ ನಂಬಿಕೆ. ಈ ಅಭಿಪ್ರಾಯಕ್ಕೆ ವಿರುದ್ಧವಾದ ಒಂದಾದರೂ ಶಾಸ್ತ್ರವಾಕ್ಯವನ್ನು ನಾನಂತೂ ಕಾಣೆ. ಅರ್ಥಶಾಸ್ತ್ರದ ಮೂಲತತ್ತ್ವಗಳಿಗೆ ವಿರುದ್ಧವಾಗಿ ನಡೆಯುತ್ತಿರುವ ಯಾವುದೇ ಧಾರ್ಮಿಕ ಸಂಸ್ಥೆಯನ್ನೂ ಜಗತ್ತಿನ ಯಾವುದೇ ಭಾಗದಲ್ಲಿಯೂ ನಾನರಿಯೆ. ನಿಸರ್ಗವಂತೂ ನಾನು ತಿಳಿಸಿರುವ ತತ್ತ್ವಗಳನ್ನು ಸದಾ ಆಚರಿಸುತ್ತಿದೆಯೆಂಬುದನ್ನು ಕಣ್ಣುಳ್ಳವರೆಲ್ಲ ಕಾಣಬಹುದು, ತನ್ನ ಸೃಷ್ಟಿಯಲ್ಲಿ ಆಹಾರದ ಹಸಿವನ್ನು ಹುಟ್ಟಿಸಿದೆ, ಅದನ್ನು ಅನುದಿನವೂ ಹಿಂಗಿಸಿಕೊಳ್ಳಲು ಸಾಕಷ್ಟು ಆಹಾರವನ್ನೂ ಹುಟ್ಟಿಸುತ್ತಿದೆ. ಅದು ನಿಸರ್ಗದ ಹಾದಿ. ಸ್ವಾರ್ಥಪಿಪಾಸೆಯಿಂದ ಕುರುಡನಾದ ಮಾನವ ನಿಸರ್ಗ ನಿಯಮಗಳನ್ನು ಉಲ್ಲಂಘಿಸಿ, ಪರರ ಸೊತ್ತಿನ ಅಸ್ತೇಯ, ಅಪರಿಗ್ರಹದ ಮೂಲಭೂತ, ಸ್ಥಿರ ನೀತಿನಿಯಮಗಳನ್ನು ಉಲ್ಲಂಘಿಸಿ ತನಗೆ ಬೇಕಾದುದಕ್ಕಿಂತ ಹೆಚ್ಚಾಗಿ ಬಾಚಿಕೊಳ್ಳುತ್ತಾನೆ, ಬಳಸಿಬಿಡುತ್ತಾನೆ, ಹೀಗೆ ತನಗೂ ತನ್ನ ಸಹಜೀವಿಗಳಿಗೂ ಅನಂತ ಕಷ್ಟ ತಂದುಕೊಳ್ಳುತ್ತಾನೆ. ಇನ್ನೊಂದು ದೃಷ್ಟಾಂತದತ್ತ ಹೊರಳೋಣ: ಬ್ರಾಹ್ಮಣ ಜ್ಞಾನವನ್ನು ಯಾವುದೇ ಐಹಿಕ ಪ್ರತಿಫಲದಾಸೆಯಿಲ್ಲದೆ ದಾನವಾಗಿ ಕೊಡಬೇಕೆಂದು ಶಾಸ್ತ್ರಗಳ ವಿಧಿ. ಆದರೆ ಅದೇ ಕಾಲಕ್ಕೆ ಭಿಕ್ಷೆ ಬೇಡುವ, ಪಡೆಯುವ ಅಧಿಕಾರವನ್ನು ಅವು ಅವನಿಗೆ ನೀಡಿವೆ, ಸಮಾಜದ ಇತರ ವರ್ಗಗಳು ಭಿಕ್ಷೆ ನೀಡಬೇಕೆಂದು ವಿಧಿಸಿವೆ, ಹೀಗೆ

ಧರ್ಮವನ್ನೂ ಅರ್ಥಶಾಸ್ತ್ರವನ್ನೂ ಸಾಮರಸ್ಯದ ಏಕತಂತುವಿನಿಂದ ಬೆಸೆದಿದೆ. ಪ್ರತಿಯೊಬ್ಬನ ಆಯವ್ಯಯದ ಖಾತೆಗಳು ಪರಿಪೂರ್ಣವಾಗಿ ಸಮನಾಗಿರಬೇಕೆಂದು ಧರ್ಮತತ್ತ್ವ ಕೇಳುತ್ತದೆ. ಅದು ಅತ್ಯಂತ ಸತ್ಯವಾದ ಅರ್ಥಶಾಸ್ತ್ರವೂ ಹೌದು, ಅಂತಲೇ ಅದು ನಿಜವಾದ ಧರ್ಮವೂ ಸಹ. ಇವೆರಡರ ನಡುವೆ ಯಾವುದೇ ಅಂತರ ಬಂತೆಂದರೆ ಕೆಟ್ಟ ಅರ್ಥಶಾಸ್ತ್ರವಾಗುತ್ತದೆ, ಅಧರ್ಮಕ್ಕೆ ದಾರಿಯಾಗುತ್ತದೆ. ಅಂತಲೇ ದಿವ್ಯ ಗೀತಾಕಾರ ಯೋಗವನ್ನು "ಸಮತ್ವ" ಎಂದಿದಾನೆ. ಆದರೆ ಅರ್ಥಶಾಸ್ತ್ರ ಧರ್ಮದ ಅಧೀನವಾಗುವುದರ ಉಪಯೋಗವನ್ನು ಮಾನವಕುಲದ ಬಹುಭಾಗ ಅರಿಯುವುದಿಲ್ಲ, ತಮಗೆ 'ಲಾಭ' ಪೇರಿಸಿಕೊಳ್ಳಲು ಮಾತ್ರ ಅವರಿಗೆ ಅದು ಬೇಕು. ಆದರೆ ನನ್ನ ಮಾನವನಿಷ್ಠ ಅರ್ಥಶಾಸ್ತ್ರ "ಲಾಭ"ವನ್ನು ಪೂರಾ ತಳ್ಳಿಯೇ ಹಾಕಿಬಿಡುತ್ತದೆ. ಅದು "ಖೋತಾ"ವನ್ನೂ ತಳ್ಳಿಹಾಕುತ್ತದೆ, ಕಾರಣ ಸರಳ, ಪೂರಾ ನಷ್ಟದ ನೀತಿ ಅನುಸರಿಸಿ ಒಂದು ಧಾರ್ಮಿಕ ಸಂಸ್ಥೆಯನ್ನು ಕಾಪಾಡುವುದು ತೀರಾ ಅಸಾಧ್ಯ.೪

## ಅರ್ಥಶಾಸ್ತ್ರದ ನಿಯಮಗಳು

ನಾನು ಅಜ್ಞ, ಆದರೂ ಅರ್ಥಶಾಸ್ತ್ರಗ್ರಂಥಗಳಲ್ಲಿ ವಿಧಿಸಿರುವ ನಿಯಮಗಳೆಂದು ಹೇಳಲ್ಪಡುವುವು ಮೀಡರ, ಪರ್ಷಿಯನರ ಅಪರಿವರ್ತನೀಯ ಕಟ್ಟಳೆಗಳಂತೆ ಬದಲಿಸಲಾಗದವಲ್ಲವೆಂದು ಹೇಳುವ ಸಾಹಸಮಾಡುತ್ತೇನೆ, ಅವು ವಿಶ್ವಾನ್ವಯಿಗಳೂ ಅಲ್ಲ. ಇಂಗ್ಲೆಂಡಿನ ಅರ್ಥಶಾಸ್ತ್ರ ಜರ್ಮನಿಯದಕ್ಕಿಂತ ಭಿನ್ನ. ಜರ್ಮನಿ ಅಪಾರ ಬೀಟ್‌ಸಕ್ಕರೆಯ ಸಮೃದ್ಧಿಯಿಂದ ಸಂಪದ್ಭರಿತವಾಯಿತು. ಇಂಗ್ಲೆಂಡ್ ವಿದೇಶೀ ಮಾರುಕಟ್ಟೆಗಳನ್ನು ಬಳಸಿಕೊಂಡು ಸಿರಿಗಳಿಸಿಕೊಂಡಿತು. ಚಿಕ್ಕದಾದ, ಅಚ್ಚುಕಟ್ಟಾದ ಪ್ರದೇಶಕ್ಕೆ ಸಾಧ್ಯವಾದುದು ೧೯೦೦ ಮೈಲಿ ಉದ್ದ, ೧೫೦೦ ಮೈಲಿ ಅಗಲದ ಸೀಮೆಗೆ ಅಸಾಧ್ಯವಾದೀತು. ಒಂದು ದೇಶದ ಅರ್ಥಶಾಸ್ತ್ರ ಅದರ ವಾಯುಗುಣ, ಭೂಗರ್ಭ ಲಕ್ಷಣ ಹಾಗೂ ಮನೋಧರ್ಮಗಳಿಂದ ನಿರ್ಣೀತವಾಗುತ್ತದೆ. ಈ ಮುಖ್ಯ ಅಂಶಗಳಲ್ಲಿ ಭಾರತದ ಸ್ಥಿತಿಗತಿ ಇಂಗ್ಲೆಂಡಿನ ಪರಿಸ್ಥಿತಿಗಿಂತ ಬೇರೆ. ಇಂಗ್ಲೆಂಡಿಗೆ ಅಮೃತವಾದುದು ಭಾರತಕ್ಕೆ ಪಾಷಾಣವಾಗುತ್ತದೆ. ಇಂಗ್ಲೆಂಡಿನ ಹವೆಗೆ ಗೋಮಾಂಸ, ಚಹಾ

ಒಳ್ಳೆಯದಿರಬಹುದು, ಧರ್ಮನಿಷ್ಠ ಭಾರತದ ಬಿಸಿ ಹವೆಗೆ ಅವು ವಿಷ. ಬ್ರಿಟಿಷ್ ದ್ವೀಪಗಳ ಉತ್ತರಪ್ರದೇಶಕ್ಕೆ ಗರಂ ವ್ಹಿಸ್ಕಿ ಅಗತ್ಯವಿದ್ದೀತು, ಆದರೆ ಅದು ಭಾರತೀಯನನ್ನು ಕೆಲಸಕ್ಕೂ ಸಮಾಜಕ್ಕೂ ಅನರ್ಹನನ್ನಾಗಿಸೀತು. ಸ್ಕಾಟ್ಲೆಂಡಿನಲ್ಲಿ ಫರ್ ನಿಲುವಂಗಿ ಇಲ್ಲದೆ ತೀರದು, ಭಾರತದಲ್ಲಿ ಅದು ಅಸಹ್ಯ ಹೊರೆ.

ತನ್ನ ಜನ ನಗರಗಳಲ್ಲಿ ವಾಸಿಸಬಹುದಾದ, ವಾಸಿಸುತ್ತಲೇ ಇರುವ, ಬೇರೆ ರಾಷ್ಟ್ರಗಳನ್ನು ಕಿತ್ತು ತಿನ್ನುವುದನ್ನು ಲೆಕ್ಕಿಸದಿರುವ, ಆ ಕಾರಣದಿಂದಾಗಿ ತಮ್ಮ ಅಸಹಜ ವ್ಯಾಪಾರವನ್ನು ರಕ್ಷಿಸಿಕೊಳ್ಳಲು ಅತಿದೊಡ್ಡ ನೌಕಾಬಲವನ್ನು ನಿರ್ಮಿಸಿಕೊಂಡಿರುವ ಉದ್ಯೋಗಮಯ ದೇಶವೊಂದಕ್ಕೆ ಸ್ವಚ್ಛಂದ ವ್ಯಾಪಾರ ಆರ್ಥಿಕವಾಗಿ ವಿಹಿತವಿರಬಹುದು. (ಓದುಗರು ಕಂಡುಕೊಳ್ಳುವಂತೆ ಅದರ ನೀತಿಪರತೆಯನ್ನಂತೂ ನಾ ಪ್ರಶ್ನಿಸುತ್ತೇನೆ.) ಭಾರತಕ್ಕಾದರೋ ಸ್ವಚ್ಛಂದ ವ್ಯಾಪಾರ ಶಾಪವೆನಿಸಿದೆ, ಅದನ್ನು ಬಂಧನದಲ್ಲಿಟ್ಟಿದೆ.೫

ಅರ್ಥಶಾಸ್ತ್ರದ ನಿಯಮಗಳು ಬೇರೆ ಬೇರೆ ಪರಿಸ್ಥಿತಿಗೆ ಬೇರೆ ಬೇರೆ ರೀತಿಯಲ್ಲಿ ಅನ್ವಯವಾಗಬೇಕು.೬

## ನಿಜವಾದ ನಾಗರಿಕತೆಯತ್ತ ಮಾನವನ ಪ್ರಗತಿ

ಇತಿಹಾಸದ ದಾಖಲೆಯಿರುವ ಸಮಯದಿಂದ ನಮ್ಮ ಕಾಲದವರೆಗೆ ನಮ್ಮ ದೃಷ್ಟಿ ಹೊರಳಿಸಿದರೆ ಮಾನವ ಅಹಿಂಸೆಯತ್ತ ಸ್ಥಿಮಿತವಾಗಿ ಪ್ರಗತಿ ಹೊಂದುತ್ತಿರುವುದನ್ನು ಕಾಣಬಹುದು. ನಮ್ಮ ಅತಿಪ್ರಾಚೀನ ಪೂರ್ವಜರು ನರಭಕ್ಷಕರಾಗಿದ್ದರು. ನರಭಕ್ಷಣಕ್ಕೆ ಬೇಸತ್ತ ಸಮಯವೊಂದು ಬಳಿಕ ಬಂತು, ಅನಂತರ ಬೇಟೆಯಾಡಿ ಬದುಕತೊಡಗಿದರು. ಆಮೇಲೆ ಅಲೆದಾಡುವ ಬೇಡರ ಬದುಕಿಗೆ ಮನುಷ್ಯ ನಾಚಿಕೆಪಡುವ ಸ್ಥಿತಿ ಬಂತು. ಆದುದರಿಂದ ಆಗ ಮಾನವ ಬೇಸಾಯಕ್ಕೆ ತೊಡಗಿದ, ತನ್ನ ಅನ್ನಕ್ಕಾಗಿ ಭೂಮಿತಾಯಿಯನ್ನು ಮುಖ್ಯವಾಗಿ ಆಶ್ರಯಿಸಿದ. ಹೀಗೆ ಅಲೆದಾಡುತ್ತಿದ್ದವ ನಾಗರಿಕ ಸ್ಥಿರ ಜೀವನಕ್ಕೆ ಇಳಿದುಬಿಟ್ಟ. ಹಳ್ಳಿ–ಪಟ್ಟಣಗಳನ್ನು ಕಟ್ಟಿದ, ಕುಟುಂಬದ ಸದಸ್ಯನಾಗಿದ್ದು ಒಂದು ಸಮಾಜದ, ರಾಷ್ಟ್ರದ ಸದಸ್ಯನಾದ. ಇವೆಲ್ಲ ಪ್ರಗತಿಪರ ಅಹಿಂಸೆಯ, ಕುಗ್ಗುತ್ತಿರುವ ಹಿಂಸೆಯ ಸಂಕೇತ. ಹಾಗಿರದಿದ್ದರೆ ಕೆಳವರ್ಗದ ಹಲವು

ಪ್ರಾಣಿವರ್ಗ ಅಳಿದುಹೋದಂತೆ ಮನುಷ್ಯಕುಲವೂ ಈ ವೇಳೆಗೆ ನಶಿಸಿಹೋಗ ಬೇಕಿತ್ತು.

ಪ್ರವಾದಿಗಳೂ ಅವತಾರಪುರುಷರೂ ಹೆಚ್ಚೋ ಕಡಿಮೆಯೋ ಅಹಿಂಸೆಯ ಪಾಠವನ್ನು ಕಲಿಸಿದಾರೆ. ಅವರಲ್ಲಿ ಯಾರೊಬ್ಬರೂ ಹಿಂಸೆಯನ್ನು ಉಪ ದೇಶಿಸುವೆನೆಂದು ಹೇಳಿಲ್ಲ. ಬೇರೆ ಹೇಗೆ ತಾನೆ ಸಾಧ್ಯ? ಹಿಂಸೆಯನ್ನು ಕಲಿಸಲೇ ಬೇಕಿಲ್ಲ. ಪಶುರೂಪಿ ಮಾನವ ಹಿಂಸಕ, ಆದರೆ ಚೇತನರೂಪಿಯಾದಾಗ ಅಹಿಂಸಕ. ತನ್ನೊಳಗಿನ ಚೇತನಕ್ಕೆ ಎಚ್ಚೆತ್ತ ಕೂಡಲೆ ಮಾನವ ಹಿಂಸಕವಾಗಿ ಉಳಿಯ. ಇಲ್ಲವೆ ಅಹಿಂಸೆಯತ್ತ ಮುಂಬರಿಯುತ್ತಾನೆ ಇಲ್ಲವೆ ತನ್ನ ವಿನಾಶದತ್ತ ಧಾವಿಸುತ್ತಾನೆ. ಅಂತಲೇ ಪ್ರವಾದಿಗಳೂ ಅವತಾರಪುರುಷರೂ ಅಹಿಂಸೆಯ ಲಕ್ಷಣಗಳಾದ ಸತ್ಯ, ಸಾಮರಸ್ಯ, ಬಂಧುಭಾವ, ನ್ಯಾಯ—ಇವುಗಳ ಬೋಧೆ ಮಾಡಿದಾರೆ.

ಮನುಜಕುಲ ಅಹಿಂಸೆಯತ್ತ ಒಂದೇ ಸಮನೆ ಸಾಗಿದೆಯೆಂದು ನಂಬುವೆ ವಾದರೆ ಅದು ಅತ್ತ ಇನ್ನೂ ಸಾಗಲೇಬೇಕೆಂದಾಗುತ್ತದೆ. ಈ ಜಗತ್ತಿನಲ್ಲಿ ಜಡವಾದುದು ಯಾವುದೂ ಇಲ್ಲ, ಎಲ್ಲವೂ ಗತಿಶೀಲ. ಪ್ರಗತಿ ಇಲ್ಲದಿದ್ದರೆ ಅನಿವಾರ್ಯವಾಗಿ ವಿಗತಿಯೇ. ದೇವರೇ ಅಲ್ಲದೆ ಬೇರಾರೂ ನಿರಂತರ ಚಕ್ರದಲ್ಲಿ ಸುತ್ತದೆ ಯಾರೂ ಉಳಿಯುವಂತಿಲ್ಲ ೭

ಭಾರತ ಬೆಳೆಸಿರುವ ಸಭ್ಯತೆಯನ್ನು ಮೀರಿಸಬಲ್ಲುದು ಜಗತ್ತಿನಲ್ಲಿ ಮತ್ತಾವುದೂ ಇಲ್ಲವೆಂದು ನಂಬಿದೇನೆ. ನಮ್ಮ ಪೂರ್ವಜರು ಬಿತ್ತಿದ ಬೀಜಕ್ಕೆ ಸಾಟಿಯಾದುದು ಯಾವುದೂ ಇಲ್ಲ. ರೋಂ ಹಾಳಾಯಿತು, ಗ್ರೀಸಿಗೂ ಅದೇ ಗತಿ ಬಂತು. ಈಜಿಪ್ಟಿನ ಫರೋಹಾ ಸಾಮ್ರಾಜ್ಯ ಮುರಿಯಿತು, ಜಪಾನ್ ಪಶ್ಚಿಮದ ವೇಷ ತೊಟ್ಟಿತು; ಚೀಣದ ವಿಷಯ ಹೇಳುವಂತಿಲ್ಲ, ಆದರೆ ಭಾರತ ಮಾತ್ರ ಇನ್ನೂ ಹಾಗೂ ಹೀಗೂ ಭದ್ರವಾಗಿಯೇ ಇದೆ ಬುಡದಲ್ಲಿ. ರೋಂ ಮತ್ತು ಗ್ರೀಸ್‌ಗಳ ವೈಭವ ಈಗಿಲ್ಲ. ಆದರೂ ಯುರೋಪಿನ ಜನ ರೋಂ-ಗ್ರೀಸುಗಳ ಜನರ ಬರೆಹಗಳಿಂದ ಪಾಠ ಕಲಿಯುತ್ತಾರೆ, ಅವರು ಮಾಡಿದ ತಪ್ಪುಗಳನ್ನು ನಾವು ಬಿಡೋಣ ಎನ್ನುತ್ತಾರೆ. ಹೀಗಿದೆ ಅವರ ದಯನೀಯ ಸ್ಥಿತಿ. ಇಂಥದರಲ್ಲಿಯೂ ಹಿಂದೂಸ್ತಾನ ಮಾತ್ರ ಅಚಲವಾಗಿದೆ. ಇದೇ ಅದರ ಶೋಭೆ. ಇಲ್ಲಿನ ಜನರು ಅನಾಗರಿಕರು, ಅಜ್ಞಾನಿಗಳು, ಸೋಮಾರಿಗಳು;

ಏನು ಬದಲಾವಣೆ ಮಾಡಬೇಕೆಂದರೂ ಅವರನ್ನು ತಿದ್ದುವುದು ಕಷ್ಟ ಎಂದು ಹಿಂದೂಸ್ತಾನದ ಮೇಲೆ ಆರೋಪವಿದೆ. ಆದರೆ ಇದು ನಮ್ಮ ದೋಷವಲ್ಲ, ಗುಣ. ಅನುಭವದ ಒರೆಗಲ್ಲಿಗೆ ತಿಕ್ಕಿ ಸರಿಯೆಂದು ಕಂಡುಕೊಂಡುದನ್ನು ಬದಲಿಸೋಣವೆ? ಹಿಂದೂಸ್ತಾನಕ್ಕೆ ಬುದ್ಧಿ ಹೇಳುವವರು ಬಹಳ ಜನ. ಆದರೂ ಹಿಂದೂಸ್ತಾನ ಅವಿಚಲಿತವಾಗಿದೆ. ಇದೇ ಅದರ ಸೊಬಗು; ಇದೇ ನಮ್ಮ ಆಸೆಯ ತಳಹದಿ.

ಮನುಷ್ಯನಿಗೆ ಕರ್ತವ್ಯಮಾರ್ಗವನ್ನು ತೋರಿಸುವ ಆಚಾರವ್ಯವಹಾರವೇ ಸಭ್ಯತೆ. ಕರ್ತವ್ಯಪಾಲನೆಯೇ ನೀತಿಪಾಲನೆ, ಎರಡೂ ಪರ್ಯಾಯಪದಗಳು. ನೀತಿಪಾಲನೆಯೆಂದರೆ ನಮ್ಮ ಬುದ್ಧಿ ಹಾಗೂ ರಾಗದ್ವೇಷಗಳ ಮೇಲೆ ಅಂಕೆ ಇಟ್ಟುಕೊಳ್ಳುವುದು. ಹಾಗೆ ನಡೆದಾಗ ನಮ್ಮನ್ನು ನಾವು ಅರಿಯುತ್ತೇವೆ. ಗುಜರಾತಿಯಲ್ಲಿ ಸಭ್ಯತೆ ಎಂದರೆ ಒಳ್ಳೆಯ ನಡತೆ.

ಈ ವ್ಯಾಖ್ಯೆ ಸರಿಯೆಂದರೆ, ಅನೇಕ ಲೇಖಕರು ಹೇಳಿರುವಂತೆ ಭಾರತ ಯಾರಿಂದಲೂ ಏನೂ ಕಲಿಯಬೇಕಾಗಿಲ್ಲ. ಇದು ಸರಿಯೆ. ಮನುಷ್ಯನ ಮನಸ್ಸು ಅತಿ ಚಂಚಲ ಪಕ್ಷಿಯಂತೆಂದು ನಮಗೆ ಗೊತ್ತು, ಪಡೆದಷ್ಟೂ ಮತ್ತೆ ಬೇಡುತ್ತದೆ, ಅದಕ್ಕೆ ತೃಪ್ತಿಯೆಂಬುದಿಲ್ಲ. ಇಂದ್ರಿಯಭೋಗದಲ್ಲಿ ತೊಡಗಿದಷ್ಟೂ ಹೆಚ್ಚು ಹೆಚ್ಚು ಅಂಕೆಗಳವಡದಾಗುತ್ತವೆ. ಅಂತಲೇ ನಮ್ಮ ಪೂರ್ವಜರು ನಮ್ಮ ಭೋಗಲಾಲಸೆಗೆ ಮಿತಿ–ಮೇರೆ ಕಲ್ಪಿಸಿದರು. ಸುಖ ಎಂಬುದು ಬಹುವಾಗಿ ಮನಸ್ಸಿನ ಒಂದು ಸ್ಥಿತಿ ಎಂದು ಕಂಡರು. ಸಿರಿವಂತನಾದುದರಿಂದಲೇ ಒಬ್ಬ ಸುಖಿಯಾಗಿರಲಾರ, ಅಥವಾ ಬಡವನಾದುದರಿಂದಲೇ ಅವನು ಸುಖಿ ಅಲ್ಲವೆಂದೂ ಅಲ್ಲ. ಎಷ್ಟೋ ಸಲ ಸಿರಿವಂತರು ದುಃಖಿಗಳಾಗಿರುತ್ತಾರೆ, ಬಡವರು ಸುಖಿಗಳಾಗಿಯೇ ಇರುತ್ತಾರೆ. ಜನಕೋಟಿ ಯಾವಾಗಲೂ ಬಡವರಾಗಿಯೇ ಇರುತ್ತಾರೆ. ಇದನ್ನೆಲ್ಲ ನೋಡಿಯೇ ನಮ್ಮ ಹಿರಿಯರು ಭೋಗಲಾಲಸೆಗಳಿಗೆ ಬಲಿಯಾಗಗೊಡಲಿಲ್ಲ. ಸಾವಿರಾರು ವರ್ಷಗಳಿಂದ ಅದೇ ನೇಗಿಲನ್ನೇ ಬಳಸುತ್ತ ಬಂದಿದೇವೆ. ಸಾವಿರಾರು ವರ್ಷಗಳ ಹಿಂದೆ ಇದ್ದಂಥ ಗುಡಿಸಲುಗಳೇ ಈಗಲೂ ಇವೆ. ನಮ್ಮ ದೇಶೀ ಶಿಕ್ಷಣ ಮೊದಲಿನಂತೆಯೇ ಇದೆ. ಜೀವನವಿನಾಶಕ ಸ್ಪರ್ಧೆಯಿರಲಿಲ್ಲ. ಪ್ರತಿಯೊಬ್ಬನೂ ತನ್ನ ತನ್ನ ಕಸಬು ನಡೆಸಿಕೊಂಡು ಹೋಗುತ್ತಿದ್ದ, ನಿಯಮಿತ ಪ್ರತಿಫಲ ಪಡೆಯುತ್ತಿದ್ದ. ಯಂತ್ರ

ಗಳನ್ನು ಕಂಡುಹಿಡಿಯುವುದು ನಮಗೆ ಗೊತ್ತಿರಲಿಲ್ಲವೆಂದಲ್ಲ, ಅಂಥ ವಿಷಯಕ್ಕೆ ಬೆನ್ನುಹತ್ತಿದರೆ ಅವುಗಳ ದಾಸರಾಗಿ ನಮ್ಮ ನೀತಿಪರತೆ ಕಳೆದುಕೊಳ್ಳುವೆವೆಂದು ನಮ್ಮ ಹಿರಿಯರು ಅರಿತಿದ್ದರು. ಆದುದರಿಂದ ದೀರ್ಘ ಚಿಂತನೆ ಮಾಡಿ ನಮ್ಮ ಕೈಕಾಲುಗಳಿಂದ ಎಷ್ಟು ಸಾಧ್ಯವೋ, ಏನು ಸಾಧ್ಯವೋ ಅದನ್ನೇ ಮಾಡಬೇಕೆಂದು ನಿರ್ಧರಿಸಿದರು. ನಮ್ಮ ಕೈಕಾಲುಗಳ ಸದುಪಯೋಗದಲ್ಲಿಯೇ ನಮ್ಮ ನಿಜವಾದ ಸುಖ–ಆರೋಗ್ಯಗಳಿವೆಯೆಂದು ಅವರು ತಿಳಿದಿದ್ದರು. ದೊಡ್ಡ ದೊಡ್ಡ ಪಟ್ಟಣಗಳು ಬರೀ ಮಾಯಾಜಾಲ, ವ್ಯರ್ಥ ಜಂಜಡ, ಅವುಗಳಲ್ಲಿ ಜನಕ್ಕೆ ಸುಖವಿರದು, ಕಳ್ಳಕಾಕರ–ದರೋಡೆಕೋರರ ಪಡೆಗಳಿರುತ್ತವೆ, ಸೂಳೆ ಗಾರಿಕೆ ಹಾಗೂ ಇತರ ಭ್ರಷ್ಟಾಚಾರ ಹೆಚ್ಚಿರುತ್ತದೆ, ಬಡವರನ್ನು ಬಲ್ಲಿದರು ದೋಚುತ್ತಾರೆ—ಎಂದೂ ಅವರು ಅರಿತುಕೊಂಡಿದ್ದರು. ಅದರಿಂದಾಗಿ ಸಣ್ಣ ಸಣ್ಣ ಹಳ್ಳಿಗಳೇ ಅವರಿಗೆ ತೃಪ್ತಿದಾಯಕವಿದ್ದುವು. ರಾಜರು–ಅವರ ಖಡ್ಗಗಳು ನೀತಿಯ ಖಡ್ಗಕ್ಕಿಂತ ಕೀಳು ಎಂದು ಅವರು ಭಾವಿಸಿದ್ದರು, ಆದುದರಿಂದ ಭೂಪತಿಗಳು ಋಷಿಮುನಿಗಳಿಗಿಂತ ಕಡಮೆಯೆಂದು ಅವರು ಗ್ರಹಿಸಿದ್ದರು. ಇಂಥ ರಚನೆಯುಳ್ಳ ರಾಷ್ಟ್ರ ಇತರರಿಗೆ ಕಲಿಸಬಲ್ಲ ರಾಷ್ಟ್ರವೇ ಹೊರತಾಗಿ ಕಲಿಯಬೇಕಾದ ರಾಷ್ಟ್ರವಲ್ಲ. ಈ ರಾಷ್ಟ್ರದಲ್ಲಿ ನ್ಯಾಯಾಲಯಗಳು, ವಕೀಲರು, ವೈದ್ಯರು ಎಲ್ಲರೂ ಇದ್ದರು. ಎಲ್ಲಕ್ಕೂ ಒಂದು ಮಿತಿಯಿತ್ತು. ಈ ವೃತ್ತಿಗಳು ಯಾವುದಕ್ಕೂ ವಿಶೇಷವಾಗಿ ಮೇಲಲ್ಲ ಎಂದು ಎಲ್ಲರೂ ತಿಳಿದಿದ್ದರು; ಅಲ್ಲದೆ ಈ ವಕೀಲರು ವೈದ್ಯರು ಯಾರನ್ನೂ ಸುಲಿಯುತ್ತಿರಲಿಲ್ಲ, ತಾವು ಜನರ ಆಶ್ರಿತರು—ಒಡೆಯರಲ್ಲ ಎಂದು ತಿಳಿದಿದ್ದರು. ನ್ಯಾಯ ಸಾಧಾರಣವಾಗಿ ತೃಪ್ತಿಕರವಿತ್ತು. ನ್ಯಾಯಾಲಯಗಳಿಗೆ ಹೋಗದಿರುವುದೇ ಸಾಧಾರಣ ನಿಯಮವಾಗಿತ್ತು. ಜನರನ್ನು ಸೆಳೆಯಲು ದಳ್ಳಾಳಿಗಳು ಇರುತ್ತಿರಲಿಲ್ಲ. ಅಂಥ ದೇನಾದರೂ ಇದ್ದರೆ ರಾಜಧಾನಿಯಲ್ಲಿ, ಅದರ ಸುತ್ತಮುತ್ತ ಇರುತ್ತಿತ್ತು. ಸಾಮಾನ್ಯ ಜನರು ಸ್ವತಂತ್ರವಾಗಿ ಬೇಸಾಯ ಮಾಡಿಕೊಂಡು ಹಾಯಾಗಿರು ತ್ತಿದ್ದರು. ನಿಜವಾದ ಸ್ವರಾಜ್ಯ ಅನುಭವಿಸುತ್ತಿದ್ದರು.

ಇಂದಿನ ಈ ಅನಿಷ್ಟ ನಾಗರಿಕತೆ ವ್ಯಾಪಿಸಿಲ್ಲದ ಕಡೆ ಭಾರತ ಇಂದಿಗೂ ಹಾಗೆಯೇ ಇದೆ. ಆ ಪ್ರದೇಶಗಳ ಜನ ನಿಮ್ಮ ಹೊಸ ಭಾವನೆಗಳನ್ನು ಕಂಡು ನ್ಯಾಯವಾಗಿಯೇ ನಕ್ಕಾರು.

ನಿಜವಾದ ಸಭ್ಯತೆ ಎಂದು ನಾನು ಯಾವುದನ್ನು ತಿಳಿದಿದೇನೆಂದು ತಿಳಿಯಿತಲ್ಲ ಈಗ. ನಾನು ವಿವರಿಸಿರುವ ಸ್ಥಿತಿಗತಿಯನ್ನು ಬದಲಿಸಬಯಸು ವವರು ದೇಶದ ಶತ್ರುಗಳು, ಪಾಪಿಗಳು.

ಭಾರತೀಯ ಸಭ್ಯತೆಯೆಂದು ನಾ ಬಣ್ಣಿಸಿದುದನ್ನು ಅದರ ಭಕ್ತರು ಹಾಗೆಯೇ ಬಣ್ಣಿಸಿದಾರೆ. ಜಗತ್ತಿನ ಯಾವೆಡೆಯೂ ಯಾವ ಸಭ್ಯತೆಯಲ್ಲಿಯೂ ಎಲ್ಲ ಜನರೂ ಪೂರ್ಣತೆ ಪಡೆದಿಲ್ಲ. ನೀತಿವಿಕಾಸವೇ ಭಾರತೀಯ ಸಭ್ಯತೆಯ ಪ್ರವೃತ್ತಿ, ಪಡುವಲದ ನಾಗರಿಕತೆ ಅನೀತಿಯ ಪ್ರಸಾರಗೊಳಿಸುತ್ತದೆ. ಅದು ನಾಸ್ತಿಕ, ಆದರೆ ಭಾರತೀಯ ಸಭ್ಯತೆ ಆಸ್ತಿಕತೆಯ ಮೇಲೆ ಆಧಾರಗೊಂಡಿದೆ. ಹಾಗೆಂದು ತಿಳಿದು, ನಂಬಿ, ಭಾರತದ ಹಿತೈಷಿಗಳು ಪ್ರತಿಯೊಬ್ಬರೂ ಮಗು ತಾಯಿಯ ಎದೆಯನ್ನು ಅಪ್ಪಿಕೊಳ್ಳುವಂತೆ ಭಾರತೀಯ ಸಭ್ಯತೆಯನ್ನು ಅಪ್ಪಿ ಕೊಳ್ಳಬೇಕು.೮

## ಸರಳಜೀವನ – ಉಚ್ಚ ವಿಚಾರ

"ಆದಷ್ಟು ಕಡಿಮೆ ಪರಿಶ್ರಮ ಮಾಡಿ ಹೆಚ್ಚು ಹೆಚ್ಚು ಅಗತ್ಯಗಳ (ಬೇಕುಗಳ) ಬಾಳುವೆ ಸಾಧ್ಯವಾಗುವಂಥದೇ ಆದರ್ಶ ಸಮಾಜ"—ಎಂದು ಅಹಮದಾಬಾದಿನಿಂದ ಒಬ್ಬ ಗೆಳೆಯರು ಬರೆಯುತ್ತಾರೆ. ವಿಚಾರ ಇಂಪಾಗಿದೆ, ಬಹುಮಂದಿ ಒಪ್ಪಬಹುದಾದ, ನಂಬುವಂಥ ವಾದವೈಖರಿಯ ಸಮರ್ಥನೆಯೂ ಅದಕ್ಕಿದೆ. ಆದಷ್ಟು ಉನ್ನತವಾದ ಜೀವನಮಟ್ಟವನ್ನು ಆದಷ್ಟು ಕಡಿಮೆ ಶ್ರಮ ಮಾಡಿ ಪ್ರತಿಯೊಬ್ಬರೂ ಇಟ್ಟುಕೊಳ್ಳಬೇಕೆಂಬುದು ಸೂಜಿಯ ಕಣ್ಣಲ್ಲಿ ಒಂಟೆ ಹೊಕ್ಕು ಬರಲೆಂದು ನಿರೀಕ್ಷಿಸುವಷ್ಟೇ ಹಾಸ್ಯಾಸ್ಪದ ಸಂಗತಿ. ಈ ಲೇಖಕರ ಉನ್ನತ ಜೀವನವೆಂದರೆ ಭೋಗವಿಲಾಸದ ಜೀವನವೆಂದು ತೋರು ತ್ತದೆ, ಯಾವುದೇ ಇಡೀ ಸಮಾಜಕ್ಕೂ ಅದು ಅಸಾಧ್ಯ. ಅಲ್ಲದೆ ಭೋಗ ವಿಲಾಸಕ್ಕೆ ಮಿತಿಯೂ ಇರದು, ಯಾವ ಮಿತಿಯಲ್ಲಿ ನಿಲ್ಲೋಣ? ಜಗತ್ತಿನ ಧರ್ಮಗ್ರಂಥಗಳೆಲ್ಲ ಇದಕ್ಕೆ ತದ್ವಿರುದ್ಧವಾದುದನ್ನೇ ಬೋಧಿಸಿವೆ. 'ಸರಳ ಜೀವನ–ಉನ್ನತವಿಚಾರ'—ಇದೇ ನಮ್ಮೆದುರು ಇರುವ ಆದರ್ಶ. ಬಹುಜನ ಸಮಾಜ ಇದರ ಸತ್ಯತೆಯನ್ನು ಮನಗಂಡಿದಾರೆ, ಆದರೆ ಆ ಸ್ಥಿತಿ ಸೇರಲು

ಮಾನವದೌರ್ಬಲ್ಯಗಳ ನಿಮಿತ್ತ ಅಶಕ್ತರಾಗಿದಾರೆ. ಆದರೆ ಅಂಥ ಜೀವನದ ಕಲ್ಪನೆ ಪೂರಾ ವ್ಯವಹಾರ್ಯ. ಭಾರತದ ಜನಕೋಟಿಗೆ ಒಂದು ನಿರ್ದಿಷ್ಟ ಆದಾಯದ ಭರವಸೆ ಇರಬೇಕೆಂಬುದು ಸರಿಯೇ. ಈ ಗುರಿಯನ್ನು ಸಾಧಿಸಲು ಬೃಹತ್ಪ್ರಮಾಣದ ಯಂತ್ರಗಳು ಅನಾವಶ್ಯಕವಷ್ಟೇ ಅಲ್ಲ, ಪೂರಾ ವಿನಾಶಕಾರಿ.

ಮನುಷ್ಯ ತನ್ನ ನಿತ್ಯದ ಬೇಕುಗಳನ್ನು ಹೆಚ್ಚಿಸಿಕೊಂಡ ಗಳಿಗೆಯಲ್ಲೇ ಸರಳಜೀವನ–ಉಚ್ಚವಿಚಾರದ ಆದರ್ಶದ ಅನುಷ್ಠಾನದಿಂದ ಕೆಳಗೆ ಬೀಳುತ್ತಾನೆ. ಇತಿಹಾಸ ಇದಕ್ಕೆ ಸಾಕಷ್ಟು ಸಾಕ್ಷ್ಯವನ್ನು ನೀಡುತ್ತದೆ. ಮನುಷ್ಯನಿಗೆ ಸುಖ ಇರುವುದು ನಿಜಕ್ಕೂ ತೃಪ್ತಿಯಲ್ಲಿಯೇ. ಅತೃಪ್ತನಾದವ ಎಷ್ಟೇ ಪಡೆದಿದ್ದರೂ ತನ್ನ ಆಸೆಗಳ ದಾಸನಾಗುತ್ತಾನೆ. ತನ್ನ ಆಸೆಗಳ ದಾಸ್ಯಕ್ಕೆ ಸಮನಾದುದು ಬೇರೊಂದಿಲ್ಲ. ಮನುಷ್ಯ ತನ್ನ ಕಡುಹಗೆಯೂ ತಾನೇ ಆಗಬಲ್ಲ, ತನ್ನ ಪರಮಮಿತ್ರನೂ ತಾನೇ ಆಗಬಲ್ಲನೆಂದು ಎಲ್ಲ ಸಂತರೂ ಗೋಪುರದ ಮೇಲಿಂದ ಘೋಷಿಸಿದಾರೆ. ಸ್ವತಂತ್ರನಾಗಿರುವುದು ಗುಲಾಮನಾಗಿರುವುದು ಅವನ ಕೈಲೇ ಇದೆ. ವ್ಯಕ್ತಿಗೆ ನಿಜವಾದುದು ಸಮಾಜಕ್ಕೂ ನಿಜ.[೯]

## ನೀತಿನಿಯಮ

ಪರರ ಸುಖಸಂತೋಷದ ಪರಿವೆಯೇ ಇಲ್ಲದ ನೀಚ ಸ್ವಾರ್ಥಿಯು ಪಶುವಿಗಿಂತಲೂ ಹೀನ. ತನ್ನ ಕುಟುಂಬದ ಹಿತಚಿಂತನೆ ಮಾಡತೊಡಗಿದರೆ ಪಶುತ್ವದ ಮಟ್ಟವನ್ನು ಬಿಟ್ಟು ಮೇಲೇರಿದಂತೆ. ತನ್ನ ಕುಲವೆಲ್ಲವೂ ಜಾತಿಯೆಲ್ಲವೂ ತನ್ನ ಕುಟುಂಬ ಎಂದು ತಿಳಿದರೆ ಮಟ್ಟ ಇನ್ನೂ ಮೇಲೇರಿತು. ಕಾಡುಜನರು ಅನಾಗರಿಕರು ಕೂಡ ನಮ್ಮ ಕುಟುಂಬದವರೇ ಎಂದುಕೊಂಡರೆ ಇನ್ನೂ ಮೇಲುಮೆಟ್ಟಲಿಗೆ ಏರಿದಂತೆ. ಅರ್ಥಾತ್ ಲೋಕಕಲ್ಯಾಣಕ್ಕಾಗಿ ಜಗದ್ಧಿತಕ್ಕಾಗಿ ಎಷ್ಟೆಷ್ಟು ದುಡಿಯುತ್ತಾನೋ ಅಷ್ಟಷ್ಟು ಮಟ್ಟಿಗೆ ಮನುಷ್ಯ ಶ್ರೇಷ್ಠನಾಗುತ್ತಾನೆ, ಉತ್ತಮನಾಗುತ್ತಾನೆ.

ಮಾನವಲೋಕದ ಪ್ರತಿಯೊಂದು ಜೀವಿಯಲ್ಲೂ ಅನುಕಂಪ, ಪ್ರೇಮ ಹುಟ್ಟದವರೆಗೆ ನಮಗೆ ನೀತಿನಿಯಮ ಅರ್ಥವಾಯಿತೆನ್ನಲಾಗದು. ಅತ್ಯುನ್ನತ ನೀತಿ ವಿಶ್ವವ್ಯಾಪಿ, ವಿಶ್ವತೋಮುಖಿ. ಜಗತ್ತಿನಲ್ಲಿರುವ ಪ್ರತಿಯೊಬ್ಬ ಜೀವಿಗೂ

ನಮ್ಮಿಂದ ಸೇವೆ ಪಡೆವ ಹಕ್ಕಿದೆಯೆಂದು ನೆನಪಿಟ್ಟು ಶಕ್ಯವಿದ್ದ ರೀತಿಯಲ್ಲೆಲ್ಲ ಶ್ರದ್ಧಾಪೂರ್ವಕ ಲೋಕಸೇವೆ ಎಸಗಬೇಕು. ತಮಗೆ ಮಾತ್ರ ತಾವು ಹೊಣೆ ಎಂದು ಭಾವಿಸುವವರು ಶ್ರೇಷ್ಠ ಶೀಲವಂತರೆಂದೂ ಆಗಲಾರರು. ತನ್ನ ಹಿತ ತಾನು ನೋಡಿಕೊಳ್ಳಲಾರದವನು ಬದುಕಿನ ಹೋರಾಟದಲ್ಲಿ ಉರುಳಿಬೀಳು ತ್ತಾನೆಂಬುದು ಮೂರ್ಖತನದ, ಅಪಾಯಕಾರಿ ಅಭಿಪ್ರಾಯ. ಏಕಚಿತ್ತದಿಂದ, ಪವಿತ್ರಬುದ್ಧಿಯಿಂದ ಲೋಕಸೇವೆಗೆ ಮೀಸಲಿಟ್ಟುಕೊಳ್ಳುವವರನ್ನು ದೇವರು ಕೈಬಿಡುವುದಿಲ್ಲ.

ಎಲ್ಲರೂ ಸಮಾನವಾಗಿ ನೀತಿನಿಯಮಕ್ಕೆ ಅಧೀನರು; ಆದುದರಿಂದ ಮಾನವಕುಲವೆಲ್ಲ ಒಂದೇ. ದೇವರ ದೃಷ್ಟಿಯಲ್ಲಿ ಎಲ್ಲ ಮನುಜರೂ ಸಮಾನರು. ಕುಲ ಪದವಿಗಳ ಭೇದವೇನೋ ಇದೆ; ಆದರೆ ಸ್ಥಾನ ಉನ್ನತವಾದಷ್ಟೂ ಹೊಣೆಯೂ ಹೆಚ್ಚು. ನಾವು ಉನ್ನತ ಸ್ಥಾನದಲ್ಲಿದ್ದರೆ ನಮ್ಮ ಔನ್ನತ್ಯದ ಬಡಾಯಿ ಕೊಚ್ಚಿಕೊಳ್ಳಬಾರದು; ಕೆಳಗಿನವರನ್ನು ಹೀನವಾಗಿ ಕಾಣಬಾರದು. ನಮ್ಮ ಕೆಲಸ ನಮಗೆ, ಅವರದು ಅವರಿಗೆ. ಎಲ್ಲರೂ ಒಂದೇ ಗುರಿಗಾಗಿ, ಮಾನವಕುಲದ ಕಲ್ಯಾಣಕ್ಕಾಗಿ ಶ್ರಮಿಸುತ್ತೇವೆ. ಹೀಗಲ್ಲದೆ ಅನ್ಯಥಾ ಭಾವಿಸಿದರೆ ನಾವು ನೀತಿವಂತರೆನಿಸಿಕೊಳ್ಳಲಾರೆವು.

ತನ್ನ ಲಾಭಕ್ಕಾಗಿ ಒಂದು ದೇಶ ಇನ್ನೊಂದು ದೇಶವನ್ನು ತನ್ನ ಕೈಯಲ್ಲಿ ಇಟ್ಟುಕೊಳ್ಳುವುದು ನೀತಿಯಲ್ಲ, ತಪ್ಪು ಎಂದು ಇದರಿಂದ ತಿಳಿಯುತ್ತದೆ. ಚೆನ್ನಾಗಿ ಮುಂಬರಿದು ವೃದ್ಧಿಗೊಂಡ ದೇಶದ ಅಧೀನದಲ್ಲಿ ಅಷ್ಟು ವೃದ್ಧಿ ಯಾಗಿರದ ದೇಶ ಇದ್ದರೆ ಅಧೀನ ದೇಶದ ಜನರನ್ನು ತನ್ನ ಜನರ ಮಟ್ಟಕ್ಕೆ ಹತ್ತಿಸಲು ಸರ್ವಪ್ರಯತ್ನವನ್ನೂ ಮಾಡಬೇಕಾದುದು ವೃದ್ಧಿಗೊಂಡ ದೇಶದ ಬದ್ಧಕರ್ತವ್ಯ. ಹೀಗೆಯೇ ಒಬ್ಬ ದೊರೆ ತಾನು ತನ್ನ ಪ್ರಜೆಗಿಂತ ಮೇಲು ಎಂದು ತಿಳಿಯಬಾರದು, ನಿಜವಾಗಿ ನೋಡಿದರೆ ದೊರೆ ಪ್ರಜಾಸೇವಕ. ಅಧಿಕಾರ ದಲ್ಲಿರುವ ಜನ ಸಹಮಾನವರ ಹಿತಕ್ಕಾಗಿ ತಮ್ಮ ಅಧಿಕಾರ ಉಪಯೋಗಿಸ ಬೇಕು. ನೀತಿಯ ನೆಲಗಟ್ಟಿನ ಮೇಲೆ ನಿಲ್ಲದ, ನಿಃಸ್ವಾರ್ಥ ಸ್ತ್ರೀಪುರುಷರಿಲ್ಲದ ಗಣರಾಜ್ಯ ನಿರಂಕುಶಾಧಿಕಾರಕ್ಕಿಂತಲೂ ಅಧಮ.

ಒಂದು ಸಮಾಜದ ಅಥವಾ ರಾಷ್ಟ್ರದ ಬಲಶಾಲಿ ಜನರು ದುರ್ಬಲರನ್ನೂ ದಲಿತರನ್ನೂ ಕಾಪಾಡುವುದನ್ನು ತಮ್ಮ ಪರಮ ಕರ್ತವ್ಯವೆಂದು ಭಾವಿಸಬೇಕು,

ಇದು ನೀತಿಯ ನಿಯಮದ ಬೇಡಿಕೆ. ಎಲ್ಲರೂ ಸೇವೆಯ ಧರ್ಮವನ್ನು ಕಂಡುಕೊಂಡರೆ ಧನಸಂಗ್ರಹ ಮಾಡುವುದು ಪಾಪವೆಂದು ಆಗ ತಿಳಿದಾರು, ಆಗ ಸಂಪತ್ತಿನ ಅಸಮಾನತೆಗಳು ಇರವು, ಫಲಿತ : ಬರಗಾಲ ಉಪವಾಸ ಮಾಯವಾದಾವು. ಜಗತ್ತಿನಲ್ಲಿ ನೀತಿವಂತಿಕೆ ಅಪರೂಪ, ತಾವು ಅಲ್ಪಸಂಖ್ಯಾಕರು ಎಂದು ನೀತಿಪಥಗಾಮಿಗಳು ಅಧೀರರಾಗಬಾರದು. ಸಲ್ಲುವುದನ್ನು ಮಾಡುವುದು ಅವರ ಕೆಲಸ, ಉಳಿದುದನ್ನು ದೇವರಿಗೆ ಬಿಡಬೇಕು. ಕರ್ಮಫಲದ ಯೋಚನೆ ಮಾಡಬಾರದು ; ಚೆನ್ನಾಗಿ ಮಾಡಿದ ಕೆಲಸಕ್ಕೆ ಅದೇ ಪ್ರತಿಫಲ.೧೦

ಒಂದು ರೀತಿಯಲ್ಲಿ ನಾವು ಕಳ್ಳರೆನ್ನುತ್ತೇನೆ. ಕೂಡಲೇ ನನಗೆ ಬೇಕಾಗಿಲ್ಲದ ಒಂದು ವಸ್ತುವನ್ನು ನಾನು ತೆಗೆದುಕೊಂಡು ಇಟ್ಟುಕೊಂಡರೆ ಇನ್ನೊಬ್ಬರಿಂದ ಅದನ್ನು ಕದ್ದಂತೆಯೇ. ಪ್ರಕೃತಿ ಅನುದಿನವೂ ನಮಗೆ ಬೇಕಾದುದನ್ನು ಆಗಾಗ ನೀಡುತ್ತದೆ, ಇದು ಅಪವಾದವಿಲ್ಲದ ಮೂಲಭೂತ ನಿಸರ್ಗನಿಯಮ ; ಪ್ರತಿಯೊಬ್ಬರೂ ತಮಗೆ ಎಷ್ಟು ಬೇಕೋ ಅಷ್ಟನ್ನೇ—ಸ್ವಲ್ಪವೂ ಹೆಚ್ಚಿಲ್ಲದೆ—ಪಡೆದುಕೊಂಡರೆ ಜಗತ್ತಿನಲ್ಲಿ ದಿವಾಳಿತನವೇ ಇರದು, ಉಪವಾಸ ಬಿದ್ದು ಯಾರೂ ಸಾಯರು. ಆದರೆ ಈ ಅಸಮಾನತೆ ಇರುವಷ್ಟೂ ದಿನ ನಾವು ಕಳವು ಮಾಡುತ್ತಲೇ ಇದೇವೆಂದರ್ಥ.

## ಅಪರಿಗ್ರಹ ಅಥವಾ ವರಿಸಿದ ದಾರಿದ್ರ್ಯ

ಪರಿಗ್ರಹವೆಂದರೆ ನಾಳೆಗಾಗಿ ಕಾದಿರಿಸುವುದು. ಸತ್ಯಶೋಧಕ, ಪ್ರೇಮಪಂಥಿ ನಾಳೆಗಾಗಿ ಏನನ್ನೂ ಕೂಡಿಡುವಂತಿಲ್ಲ. ಪರಮಾತ್ಮ ನಾಳೆಗಾಗಿ ಏನನ್ನೂ ತೆಗೆದಿಡ. ಆ ಗಳಿಗೆಗೆ ಎಷ್ಟು ಬೇಕೋ ಅಷ್ಟಕ್ಕಿಂತ ಹೆಚ್ಚಾಗಿ ಎಂದೂ ಆತ ಸೃಷ್ಟಿಸುವುದಿಲ್ಲ. ಆದಕಾರಣ ನಾವು ಆತನಲ್ಲಿ ನಂಬಿಕೆ ಇಟ್ಟಿದ್ದಲ್ಲಿ ನಮಗೆ ಅನುದಿನವೂ ಆತ ಕೂಳು ಕೊಟ್ಟಾನೆಂದು, ಅಂದರೆ ನಮಗೆ ಬೇಕಾದುದೆಲ್ಲವನ್ನೂ ಇತ್ತಾನೆಂದು ನೆಮ್ಮದಿಯಿಂದಿರಬೇಕು. ಅಂಥ ನಂಬಿಕೆಯಿಂದ ಬದುಕಿದ ಸಂತರು–ಭಕ್ತರೆಲ್ಲ ತಮ್ಮ ಅನುಭವದಲ್ಲಿ ಇದಕ್ಕೆ ಸಮರ್ಥನೆ ಕಂಡುಕೊಂಡಿದಾರೆ. ಅನುದಿನವೂ ಮನುಷ್ಯನಿಗೆ ಅವನ ನಿತ್ಯದ ಊಟವನ್ನು ಮಾತ್ರ ಕೊಡುವ ಈಶ್ವರೀ ನಿಯಮವನ್ನು ನಾವು ಅರಿತಿಲ್ಲ. ಅರಿತಿದ್ದರೂ ಅಸಡ್ಡೆ

ಮಾಡಿದೇವೆ. ಅಂತಲೇ ಅಸಮತೆಗೆ ಆಸ್ಪದವಾಗಿದೆ, ಅದರಿಂದ ಸಾವಿರ ಸಂಕಟ–ದುಃಖ ಹುಟ್ಟಿಬಂದಿವೆ. ಶ್ರೀಮಂತರ ಬಳಿ ಅವರಿಗೆ ಅಗತ್ಯವಿಲ್ಲದ ಎಷ್ಟೋ ಪದಾರ್ಥ ಕಿಕ್ಕಿರಿ ತುಂಬಿದೆ. ಅವೆಲ್ಲ ಅತ್ತ ಬಿಸುಟು ಇತ್ತ ಎಸೆದು ಹಾಳಾಗಿಹೋಗುತ್ತದೆ. ಆ ಪದಾರ್ಥಗಳ ಅಭಾವದಿಂದ ಇತ್ತ ಕೋಟ್ಯಂತರ ಜನ ಕೂಳಿಲ್ಲದೆ ಸಾಯುತ್ತಾರೆ. ಪ್ರತಿಯೊಬ್ಬರೂ ತನಗೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡರೆ ಯಾರಿಗೂ ಕೊರತೆಯಾಗದು, ಎಲ್ಲರೂ ತೃಪ್ತಿಯಿಂದ ಬದುಕಬಹುದು. ಇಂದು ಶ್ರೀಮಂತರೂ ಅತೃಪ್ತಿಯಲ್ಲಿ ಬಡವರಿಗೇನೂ ಕಡಿಮೆಯಲ್ಲ. ಬಡವ ಲಕ್ಷಾಧಿಪತಿಯಾಗಬೇಕೆಂದು ಆಸೆಪಡುತ್ತಾನೆ, ಲಕ್ಷಪತಿ ಕೋಟೀಶ್ವರನಾಗಬೇಕೆಂದು ಬಯಸುತ್ತಾನೆ. ತೃಪ್ತಿಭಾವ ವಿಶ್ವವ್ಯಾಪಿಯಾಗಿ ಹಬ್ಬುವಂತೆ ಮಾಡಲೋಸುಗ ಶ್ರೀಮಂತರು ಅಪರಿಗ್ರಹ ಕೈಗೊಳ್ಳಲು ಅಭಿಕ್ರಮಿಸಬೇಕು. ಅವರು ತಮ್ಮ ಆಸ್ತಿಪಾಸ್ತಿಯನ್ನು ಸಾಮಾನ್ಯಮಿತಿಯೊಳಗೆ ಇಟ್ಟುಕೊಂಡುದಾದರೆ ಕೂಳಿಲ್ಲದವರಿಗೆ ಸುಲಭವಾಗಿ ಊಟ ಸಿಕ್ಕೀತು, ಧನಿಕರೊಂದಿಗೇ ಅವರೂ ತೃಪ್ತಿಯ ಪಾಠ ಕಲಿತಾರು.

ಅಪರಿಗ್ರಹದ ಆದರ್ಶದ ಪೂರ್ಣ ಸಾಧನೆಯಾದಾಗ ಮನುಷ್ಯನೂ ಹಕ್ಕಿಗಳಂತೆ ದಿಗಂಬರನಾಗಬೇಕಾಗುತ್ತದೆ, ನಿಲ್ಲಲು ನೆಲೆ, ಉಡಲು ಬಟ್ಟೆ, ಉಣಲು ನಾಳೆಗೆ ಹಿಟ್ಟು ಇಡಬಾರದು. ಅಂಥವನಿಗೆ ನಿತ್ಯಯಾತ್ರೆಗೆ ಬೇಕಾದ ಅನ್ನವನ್ನು ಭಗವಂತ ಒದಗಿಸುತ್ತಾನೆ, ಆ ಚಿಂತೆ ಅವನದು. ಈ ಅವಧೂತ ಅವಸ್ಥೆಯನ್ನು ಮುಟ್ಟುವವರು ಲೋಕದಲ್ಲಿ ಬಹಳ ವಿರಳ. ಆದರೆ ಸಾಧಾರಣ ತರದ ಸಾಧಕರಾದ ನಾವು ಅಸಾಧ್ಯವೆಂದು ತೋರುವುದಕ್ಕೆ ಬೆದರಬೇಕಾಗಿಲ್ಲ. ಈ ಆದರ್ಶವನ್ನು ಸದಾ ಲಕ್ಷ್ಯದಲ್ಲಿಟ್ಟು ದಿನದಿನವೂ ನಮ್ಮ ಪರಿಗ್ರಹವೃತ್ತಿಯನ್ನು ಪರೀಕ್ಷಿಸುತ್ತ ಅವನ್ನು ತಗ್ಗಿಸಲು ಪ್ರಯತ್ನಿಸಬೇಕು. ಅಗತ್ಯಗಳನ್ನು ಹೆಚ್ಚಿಸಿಕೊಳ್ಳುವುದಲ್ಲ ನಿಜವಾದ ಸಭ್ಯತೆಯ ಲಕ್ಷಣ, ವಿಚಾರಪೂರ್ವಕ, ಇಚ್ಛಾಪೂರ್ವಕ ಅವನ್ನು ತಗ್ಗಿಸಿಕೊಳ್ಳುವುದು. ಇದರಿಂದಲೇ ನಿಜವಾದ ಸುಖ–ತೃಪ್ತಿ ಹೆಚ್ಚುತ್ತದೆ, ನಮ್ಮ ಸೇವೆಯ ಸಾಮರ್ಥ್ಯ ಬೆಳೆಯುತ್ತದೆ.೧೧

ರಾಜಕೀಯದ ಸುಳಿಗೆ ಸೆಳೆಯಲ್ಪಟ್ಟೆನೆಂದು ಅನಿಸಿದಾಗ ನನಗೆ ನಾನೇ ಕೇಳಿಕೊಂಡೆ: ಅನೀತಿ, ಅಸತ್ಯ, ರಾಜಕೀಯ ಲಾಭ ಎಂದೆನಿಸಿಕೊಂಡವುಗಳಿಂದ ಪೂರಾ ಪಾರಾಗಿ ಉಳಿಯಲು ಏನು ಬೇಕು ? ಆ ಕೃತಿಯ ವಿವರಗಳಿಗೆ

—ಅದು ಸ್ವಾರಸ್ಯಕರ ಮತ್ತು ನನಗಂತೂ ಪವಿತ್ರ—ನಿಮ್ಮನ್ನು ಒಯ್ಯ ಬಯಸುವುದಿಲ್ಲ; ಆದರೆ ಅದು ಮೊದಮೊದಲು ಕಠಿಣ ಸಂಗ್ರಾಮವೇ ಆಗಿತ್ತು, ನನ್ನ ಮಡದಿಯೊಂದಿಗೆ ಸೆಣಸಾಟವೇ ಆಗಿತ್ತು, ಈಗಲೂ ನಿಚ್ಚಳವಾಗಿ ನೆನಪಾಗುವಂತೆ ನನ್ನ ಮಕ್ಕಳೊಂದಿಗೂ ಸಹ ಹೋರಾಟವೇ ಆಗಿತ್ತೆಂದು ಮಾತ್ರ ಹೇಳಬಲ್ಲೆ. ಹಾಗಿದ್ದರೂ ನನ್ನ ಬಾಳುವೆ ನಿರ್ಭರವಾಗಿದ್ದ ಸನ್ನಿವೇಶದ ಜನರಿಗೆ, ಅನುದಿನವೂ ಅವರ ಕಷ್ಟಪರಂಪರೆಗೆ ಸಾಕ್ಷಿಯಾಗಿದ್ದ ನಾನು ಸೇವೆ ಸಲ್ಲಿಸಬೇಕಾದಲ್ಲಿ ಎಲ್ಲ ಐಶ್ವರ್ಯ, ಸೊತ್ತನ್ನೂ ತೊರೆಯಲೇಬೇಕೆಂಬ ನಿಶ್ಚಯಕ್ಕೆ ಖಚಿತವಾಗಿ ಬಂದೆ.

ಈ ನಂಬಿಕೆ ನನಗೆ ಉಂಟಾದ ಕೂಡಲೆ ಎಲ್ಲವನ್ನೂ ನಾನು ತೊರೆದೆ ಎಂದು ನಿಜವಾಗಿ ಹೇಳಲಾರೆ. ಪ್ರಾರಂಭದಲ್ಲಿ ಪ್ರಗತಿ ಮಂದಗತಿಯಲ್ಲೇ ಇತ್ತೆಂದು ಒಪ್ಪಿಕೊಳ್ಳುತ್ತೇನೆ. ಅಂದಿನ ಹೋರಾಟದ ದಿನಗಳನ್ನು ನೆನೆದಾಗ ಮೊದಲಲ್ಲಿ ಅದು ಕಷ್ಟದಾಯಕವೂ ಇತ್ತೆಂದು ನೆನಪಾಗುತ್ತದೆ. ದಿನಗಳೆದಂತೆ ನನ್ನದೆಂದು ನಾನೆಣಿಸಿದ್ದ ಎಷ್ಟೋ ವಸ್ತುಗಳನ್ನು ಬಿಸುಡಬೇಕಾಗಿ ಬಂತು, ಅವನ್ನು ತೊರೆಯುವುದೇ ಒಂದು ನಿರ್ದಿಷ್ಟ ಆನಂದವಾಗಿ ತೋರಿದ ಸಮಯವೂ ಬಂತು. ಒಂದಾದಮೇಲೆ ಒಂದರಂತೆ ರೇಖಾಗಣಿತದ ಪ್ರಮಾಣದಲ್ಲೋ ಎಂಬಂತೆ — ವಸ್ತುಗಳು ನನ್ನಿಂದ ಕಳಚಿಬಿದ್ದುವು. ನನ್ನ ಅನುಭವವನ್ನು ವಿವರಿಸುತ್ತಿರುವುದರಿಂದ ನನ್ನ ಹೆಗಲಿನಿಂದ ಭಾರಿ ಹೊರೆಯೇ ಇಳಿದಂತೆ ಆಯಿತೆಂದು ನಾ ಹೇಳಬಲ್ಲೆ, ಆಗ ನಾನಿನ್ನು ಸರಾಗವಾಗಿ ಸಾಗಬಲ್ಲೆ, ನನ್ನ ಬಾಂಧವರ ಸೇವೆಯನ್ನು ಹೆಚ್ಚು ಸುಖವಾಗಿ, ಇನ್ನೂ ಹೆಚ್ಚು ಸಂತೋಷದಿಂದ ಮಾಡಬಲ್ಲೆ ಎಂದೆನಿಸಿತು. ಆಗ ಯಾವುದರ ಪರಿಗ್ರಹವೂ ತೊಂದರೆಯಾಯಿತು, ಭಾರವಾಯಿತು.

ಈ ಸಂತೋಷದ ಮೂಲ ಶೋಧಿಸಿದಾಗ ನನ್ನದೆಂದು ಯಾವುದನ್ನೇ ಇಟ್ಟುಕೊಂಡರೂ ಇಡೀ ಜಗತ್ತಿನಿಂದ ಅದನ್ನು ಕಾದಿಟ್ಟುಕೊಳ್ಳಬೇಕಾಗುತ್ತದೆ ಎನಿಸಿತು. ಎಷ್ಟೋ ಜನಕ್ಕೆ ಆ ವಸ್ತು ಬೇಕಿದ್ದರೂ ಅವರ ಬಳಿ ಇರುತ್ತಿರಲಿಲ್ಲ, ಬರಗೆಟ್ಟು ಹಸಿದ ಜನ ನಾನು ಎಲ್ಲೋ ಒಬ್ಬಂಟಿಗನಾಗಿ ಇರುವ ಸ್ಥಳದಲ್ಲಿ ನನ್ನನ್ನು ಮುತ್ತಿ ಅದನ್ನು ತಮ್ಮೊಡನೆ ಹಂಚಿಕೊಳ್ಳಲಾಗಲಿ ಅಥವಾ ನನ್ನಿಂದ ಪೂರಾ ಕಸಿದುಕೊಳ್ಳಲೇ ಆಗಲಿ ಯತ್ನಿಸಿದುದಾದರೆ ನಾನು ಪೋಲೀಸರ ರಕ್ಷಣೆ

ಯನ್ನು ಬೇಡಬೇಕಾದೀತು—ಎಂದೂ ಅನಿಸಿತು. ಅವರಿಗೆ ಅದು ಬೇಕಿದ್ದು ಅವರು ತೆಗೆದುಕೊಂಡರೆ ಯಾವ ದುರುದ್ದೇಶದಿಂದಲೂ ಅವರು ಹಾಗೆ ಮಾಡುತ್ತಿಲ್ಲ, ನನ್ನ ಅಗತ್ಯಕ್ಕಿಂತ ಅವರ ಅಗತ್ಯ ಹೆಚ್ಚಾದುದರಿಂದ ಹಾಗೆ ಮಾಡುತ್ತಿದಾರೆ ಎಂದುಕೊಂಡೆ.

ಮತ್ತು ಹೀಗೂ ನಾ ಎಂದುಕೊಂಡೆ: ಪರಿಗ್ರಹ ಒಂದು ಅಪರಾಧ. ನನಗೆ ತಿಳಿದಂತೆಯೇ ಇತರರೂ ಬಯಸುವಂಥ ಕೆಲ ವಸ್ತುಗಳನ್ನು ಅವರೂ ಪಡೆಯಲು ಶಕ್ಯವಾದಾಗ ಮಾತ್ರ ನಾನೂ ಅವನ್ನು ಹೊಂದಬಲ್ಲೆ. ಅಂಥ ವಸ್ತುಗಳನ್ನು ಅಪರಿಗ್ರಹದಿಂದ, ಯಾವುದೊಂದನ್ನೂ ಪರಿಗ್ರಹಿಸದೆ, ಅಂದರೆ ಇಚ್ಛಾಪೂರ್ವಕ ಪರಿತ್ಯಾಗದಿಂದ ಮಾತ್ರವೇ ಎಲ್ಲರೂ ಪಡೆಯಲು ಸಾಧ್ಯ ಎಂದು ನಮಗೆ ಗೊತ್ತು, ನಮ್ಮ ಅನುಭವದಿಂದ ಹಾಗೆ ಹೇಳಬಲ್ಲೆವು.

ಅದಕ್ಕೆ ನೀವೆಂದೀರಿ: "ನಿನ್ನ ದೇಹದ ಮೇಲೆ ಎಷ್ಟೋ ವಸ್ತುಗಳನ್ನು ಧರಿಸಿದ್ದೀಯೆ, ಸ್ವಯಂಸ್ವೀಕೃತ ದಾರಿದ್ರ್ಯ ಹಾಗೂ ಎಲ್ಲ ವಸ್ತುಗಳ ಅಪರಿಗ್ರಹದ ಮಾತಾಡುತ್ತೀಯೆ?" ನಾನು ಹೇಳುತ್ತಿರುವ ವಿಷಯದ ಅರ್ಥವನ್ನು ಕೇವಲ ಮೇಲೆ ಮೇಲೆ ತಿಳಿದಿದ್ದರೆ ನಿಮ್ಮ ಸವಾಲು ಸರಿ. ಅದರ ಹಿಂದಿನ ಭಾವನೆ ಮುಖ್ಯ. ಶರೀರ ಧರಿಸಿದ ಮೇಲೆ ಅದನ್ನು ಮುಚ್ಚಲು ಯಾವುದಾದರೂ ಬಟ್ಟೆ ಬೇಕೇ ಬೇಕು. ಆದರೆ ಶರೀರಕ್ಕಾಗಿ ನೀನು ಪಡೆಯಬಹುದೆಲ್ಲವನ್ನೂ ಪಡೆಯದೆ ನಿರ್ವಾಹಕ್ಕೆ ಅತ್ಯಂತ ಕನಿಷ್ಠ ಬೇಕಾದುದನ್ನು ನೀ ಪಡೆಯುವೆ. ನಿನ್ನ ವಾಸಕ್ಕೆ ಅನೇಕ ಪ್ರಾಸಾದಗಳನ್ನು ತೆಗೆದುಕೊಳ್ಳದೆ ಕನಿಷ್ಠ ಬೇಕಾಗುವ ಆಸರೆಯನ್ನು ನೀ ಪಡೆಯುವೆ. ಹಾಗೆಯೇ ಆಹಾರ ಮುಂತಾದುವುಗಳಲ್ಲೂ.

ಇನ್ನು ಇಲ್ಲಿ ನೀವು ನಾವು ಸಭ್ಯತೆಯೆಂದು ತಿಳಿದಿರುವ ಸ್ಥಿತಿ ಹಾಗೂ ನಾನು ಚಿತ್ರಿಸುತ್ತಿರುವ ಪರಮ ಸಂತೋಷದ ಅವಸ್ಥೆ ಹಾಗೂ ವಾಂಛನೀಯ ಪರಿಸ್ಥಿತಿಯ ನಡುವೆ ದಿನವೂ ಘರ್ಷಣೆಯನ್ನು ಕಾಣುವಿರಿ. ತದ್ವಿರುದ್ಧವಾಗಿ ಸಭ್ಯತೆ ಅಥವಾ ಸಂಸ್ಕೃತಿಗಳಿಗೆ ಅಗತ್ಯಗಳನ್ನು ಹೆಚ್ಚಿಸಿಕೊಳ್ಳುವುದೇ ಆಧಾರ. ಒಂದು ಕೋಣೆ ಇದ್ದರೆ ಎರಡು ಮೂರು ಕೋಣೆಗಳನ್ನು ಬಯಸುವಿರಿ, ಹೆಚ್ಚು ಹೆಚ್ಚಿದಂತೆಲ್ಲ ಸಂತೋಷ. ಮನೆ ಹಿಡಿಸುವಷ್ಟು ಕುರ್ಚಿ ಮೇಜು ಬಯಸೀರಿ, ಹೀಗೆಯೇ ಅನಂತವಾಗಿ ಬೆಳೆಯುತ್ತ ಹೋಗುತ್ತದೆ. ಹೀಗೆ ಹೆಚ್ಚು ಹೆಚ್ಚು

ಪಡೆದಂತೆಲ್ಲ ನೀವು ಪ್ರತಿಬಿಂಬಿಸುವ ಸಂಸ್ಕೃತಿ ಉತ್ತಮತರವೆನಿಸೀತು. ಆ ಸಭ್ಯತೆಯ ಪ್ರತಿಪಾದಕರು ಮುಂಡಿಸುವಷ್ಟು ಚೊಕ್ಕವಾಗಿ ನಾ ಬಣ್ಣಿಸಲಾರೆನೇನೋ, ಆದರೂ ನಾ ಅರಿತಂತೆ ನಿಮ್ಮೆದುರು ಇಡುತ್ತಿದೇನೆ.

ಹಾಗಿಲ್ಲದೆ, ಕಡಿಮೆ ಪಡೆದಷ್ಟೂ ಕಡಿಮೆ ಬಯಸೀರಿ ನೀವು, ಹೆಚ್ಚು ಉತ್ತಮವಾಗಿದ್ದೀರಿ. ಯಾವುದಕ್ಕೆ ಉತ್ತಮ ? ಈ ಬದುಕಿನ ಭೋಗಕ್ಕಲ್ಲ, ನೀವಾಗಿಯೇ ನಿಮ್ಮನ್ನು ಮೈ, ಮನ ಹಾಗೂ ಆತ್ಮದಿಂದ ಅರ್ಪಿಸಿಕೊಳ್ಳುವ ನಿಮ್ಮ ಸಹಜೀವಿಗಳ ವೈಯಕ್ತಿಕ ಸೇವೆಯನ್ನು ಸವಿಯಲು. ಈ ದೇಹವೂ ನಿಮ್ಮದಲ್ಲ, ತಾತ್ಕಾಲಿಕವಾಗಿ ನಿಮಗೆ ಕೊಡಲ್ಪಟ್ಟಿದೆ. ನಿಮಗೆ ಅದನ್ನು ಕೊಟ್ಟಾತ ಅದನ್ನು ತೆಗೆದುಕೊಂಡುಬಿಡಬಹುದು.

ಇಂಥ ನಿಶ್ಚಲ ನಂಬುಗೆಯುಳ್ಳ ನಾನು ಭಗವಂತ ಬಯಸಿದಾಗ ಈ ದೇಹವನ್ನೂ ತೊರೆಯಬೇಕಾದೀತೆಂದು ತಿಳಿದು, ಅದು ಇರುವಷ್ಟು ದಿನವೂ ಅದನ್ನು ವಿಕ್ಷಯಕ್ಕಾಗಿ, ಕಾಮತೃಪ್ತಿಗಾಗಿ, ಭೋಗಕ್ಕಾಗಿ ಬಳಸದೆ, ಕೇವಲ ಸೇವೆಗಾಗಿಯೇ—ಎಚ್ಚರವಿರುವ ಎಲ್ಲ ಹೊತ್ತಿನಲ್ಲೂ ಸೇವೆಗಾಗಿಯೇ ಬಳಸುವುದು ನನ್ನ ನಿರಂತರ ಬಯಕೆಯಾಗಿರಬೇಕು. ದೇಹಕ್ಕೇ ಇದು ನಿಜವಾದರೆ ನಾವು ತೊಡುವ ಬಟ್ಟೆ, ಬಳಸುವ ಮತ್ತಿತರ ವಿಷಯುಗಳಿಗೆ ಮತ್ತೆಷ್ಟು ನಿಜವಲ್ಲ ?

ಸ್ವಯಂಸ್ವೀಕೃತ ದಾರಿದ್ರ್ಯದ ವ್ರತವನ್ನು ನಿಜವಾಗಿ ಸಾಧ್ಯವಿದ್ದಷ್ಟು ಪೂರಾ ಪ್ರಮಾಣದಲ್ಲಿ (ಪರಿಪೂರ್ಣಾವಸ್ಥೆ ಮುಟ್ಟುವುದು ಅಸಾಧ್ಯ, ಆದರೆ ಮನುಷ್ಯನಿಗೆ ಶಕ್ಯವಿದ್ದಷ್ಟು ಪೂರಾ ಪ್ರಮಾಣ) ಪಾಲಿಸಿದವರು, ಆ ಅವಸ್ಥೆಯ ಆದರ್ಶಮಟ್ಟವನ್ನು ಮುಟ್ಟಿದವರು ನಿಮ್ಮಲ್ಲಿರುವುದೆಲ್ಲವನ್ನೂ ತೊರೆದುಬಿಟ್ಟಾಗ ನೀವು ಜಗತ್ತಿನ ಎಲ್ಲ ನಿಧಿನಿಕ್ಷೇಪವನ್ನೂ ಪಡೆದಿರುತ್ತೀರೆಂದು ಸಾಕ್ಷಿ ಹೇಳುತ್ತಾರೆ. ಅಂದರೆ, ನಿಜವಾಗಿ ನಿಮಗೆ ಬೇಕಾದುದೆಲ್ಲವನ್ನೂ, ಎಲ್ಲವನ್ನೂ ನೀವು ನಿಜಕ್ಕೂ ಪಡೆಯುವಿರಿ. ಆಹಾರ ಬೇಕಾದಲ್ಲಿ ಆಹಾರ ಬಳಿಗೇ ಬಂದೀತು.

ನಿಮ್ಮಲ್ಲಿ ಬಹುಮಂದಿ ಪ್ರಾರ್ಥನಾಜೀವಿಗಳು, ತಮ್ಮ ಪ್ರಾರ್ಥನೆಗೆ ಉತ್ತರವಾಗಿ ತಮ್ಮ ಆಹಾರವನ್ನೂ, ಎಲ್ಲವನ್ನೂ ಪ್ರಾರ್ಥನೆಗೆ ಉತ್ತರವಾಗಿಯೇ ಪಡೆಯುವರೆಂದು ನಾನು ಎಷ್ಟೋ ಜನ ಕ್ರೈಸ್ತರ ಬಾಯಿಂದ ಕೇಳಿದೇನೆ. ಹಾಗೆಯೇ ನಾ ನಂಬುತ್ತೇನೆ. ನೀವು ನನ್ನೊಡನೆ ಇನ್ನೂ

ಒಂದು ಹೆಜ್ಜೆ ಮುಂದೆ ಬನ್ನಿ. ಲೋಕದಲ್ಲಿ ಎಲ್ಲವನ್ನೂ, ಈ ದೇಹವನ್ನೂ ಇಚ್ಛಾಪೂರ್ವಕವಾಗಿ ತೊರೆಯುವವರು—ಎಂದರೆ ಎಲ್ಲವನ್ನೂ ಬಿಡಲು ಸಿದ್ಧ ಇರುವರು (ಅವರು ತಮ್ಮನ್ನು ತಾವೇ ಕಟುವಾಗಿ, ಉಗ್ರವಾಗಿ ಪರೀಕ್ಷಿಸಿ ಕೊಂಡು ಯಾವಾಗಲೂ ತಮ್ಮ ವಿರೋಧವಾಗಿಯೇ ತೀರ್ಪು ಕೊಟ್ಟುಕೊಳ್ಳ ಬೇಕು), ಈ ನಿಯಮವನ್ನು ಅನುಸರಿಸುವವರು ಎಂದೂ ಕೊರತೆಯನ್ನು ಅನುಭವಿಸರು.

ಮತ್ತೆ ' ಅಗತ್ಯ ' ಎಂಬುದನ್ನು ಅಕ್ಷರಶಃ ಅರ್ಥಮಾಡಿಕೊಳ್ಳಬಾರದು. ಈ ಲೋಕದಲ್ಲಿ ದೇವರೇ ನಾ ಬಲ್ಲ ಕಠಿಣತಮ ಯಜಮಾನ. ನಿಮ್ಮನ್ನು ಪರೀಕ್ಷಿಸಿ ಪರೀಕ್ಷಿಸಿ ನೋಡಿಬಿಡುತ್ತಾನೆ. ನಿಮ್ಮ ನಂಬಿಕೆ ಸೋತಿತು, ನಿಮ್ಮ ಶರೀರ ಸೋತಿತು, ನೀವು ಇನ್ನು ಕುಸಿದಿರಿ ಎಂದೆನಿಸಿದಾಗ ಹೇಗೋ ಏನೋ ಆತ ನಿಮ್ಮ ನೆರವಿಗೆ ಬರುತ್ತಾನೆ. ನಂಬಿಕೆಗೆಡಬೇಡ, ನಿನಗಾಗಿ ನಾನಿಲ್ಲಿ ಸದಾ ಸಿದ್ಧ ಎನ್ನುತ್ತಾನೆ. ಆದರೆ ಅವನ ಷರತ್ತಿನ ಮೇಲೆ, ನಿಮ್ಮಂತೆ ಅಲ್ಲ. ಹೀಗೆ ನನ್ನ ಅನುಭವ. ಆಯತ ವೇಳೆಯಲ್ಲಿ ಆತ ನನ್ನನ್ನು ತೊರೆದ ಒಂದು ನಿದರ್ಶನವೂ ನಿಜಕ್ಕೂ ನನಗೆ ನೆನಪಿಲ್ಲ.೧೨

ನಮ್ಮ ದೇಶದಲ್ಲಿ ಬಡತನಕ್ಕೆ ಒಂದು ಗೌರವವುಂಟು. ಬಡವ ತನ್ನ ಬಡತನಕ್ಕಾಗಿ ನಾಚುವುದಿಲ್ಲ. ಸಿರಿವಂತನ ಅರಮನೆಗಿಂತ ತನ್ನ ಗುಡಿಸಲೇ ಸಾಕು ಅವನಿಗೆ. ಅದರಲ್ಲೇ ಅವನಿಗೆ ಹೆಮ್ಮೆಯೂ ಹೌದು. ಐಹಿಕ ವಸ್ತು ಗಳಲ್ಲಿ ಆತ ಬಡವನಾದರೂ ಆತ್ಮದಲ್ಲಿ ಬಡವನಲ್ಲ. ಸಂತೃಪ್ತಿಯೆ ಅವನ ನಿಧಿ. ಅವನು ಹೀಗೂ ಅಂದುಕೊಂಡಾನು : ' ನಾವೆಲ್ಲರೂ ಸಿರಿವಂತರಾಗಲಾರೆವು, ಅರಮನೆ ಪಡೆಯಲಾರೆವು, ಸಿರಿವಂತರ ಅರಮನೆಗಳನ್ನಾದರೂ ಉರುಳಿಸಿ ನಮ್ಮ ಮಟ್ಟಕ್ಕೆ ತಂದುಬಿಡೋಣವಲ್ಲ.' ಅದು ಅವನಿಗಾಗಲಿ ಬೇರಾರಿಗಾಗಲಿ ಸುಖ-ನೆಮ್ಮದಿ ತಾರದು, ಆ ಬಗೆಯ ಬಡವನಿಗೆ ದೇವರು ನಿಜಕ್ಕೂ ಗೆಳೆಯ ಆಗಲಾರ, ನೆರವಾಗಲಾರ.

ಐಹಿಕ ವಸ್ತುಗಳಲ್ಲಿ ಅಸಮಾನತೆ ಎಂಬ ಅರ್ಥದಲ್ಲಿ ಬಡತನ ಜಗತ್ತಿನ ಎಲ್ಲೆಡೆಯೂ ಇದೆ. ಕೆಲವೊಂದು ಪ್ರಮಾಣದಲ್ಲಿ ಅದು ಅನಿವಾರ್ಯವೇ ಏನೋ, ಏಕೆಂದರೆ ಪ್ರತಿಭೆಯಲ್ಲಾಗಲಿ ಅಗತ್ಯಗಳ ಪ್ರಮಾಣದಲ್ಲಾಗಲಿ ಎಲ್ಲರೂ ಸಮಾನರಲ್ಲವಲ್ಲ. ದೇವರ ಸ್ಥಳವನ್ನು ' ಕುಬೇರ 'ನೇ ಆಕ್ರಮಿಸಿರುವ

ವಿಪುಲ ಐಶ್ವರ್ಯದ ಅಮೆರಿಕದಲ್ಲೂ ಬೇಕಾದಷ್ಟು ಬಡವರಿದಾರೆ. ಷಾ ಆಲಂನ ಬಂಧುಗಳು ಕೆಲವರು ರಂಗೂನಿನ ಬೀದಿಗಳಲ್ಲಿ ಬಿಕ್ಕೆ ಬೇಡುತ್ತಿದ್ದುದನ್ನು ಕವಿ ಮಲಬಾರಿ ಕಂಡ. ಅದನ್ನು ಕುರಿತು ಆತ ಸೊಗಸಾದ ಕವಿತೆ ಬರೆದಿದಾನೆ, ಅದು ನನ್ನ ಹೃದ್ಗತವಾಗಿಬಿಟ್ಟದೆ. ದೇವರೇ ಗೆಳೆಯನೂ ನೆರವೂ ಆಗಿರುವವನೇ ಶ್ರೀಮಂತ—ಎಂದು ಅದರ ಸಾರ.

ಅತ್ಯಂತ ಕಡಿಮೆ ಅಗತ್ಯಗಳಿಂದಲೇ ಸಂತಸಪಡುವ ಒಂದು ಮನುಷ್ಯ ವಿಶೇಷ ಭಾರತದಲ್ಲುಂಟು. ಆತ ಸ್ವಲ್ಪ ಹಿಟ್ಟು, ಒಂದು ಚಿಟಿಕೆ ಉಪ್ಪು, ಕೆಲವು ಮೆಣಸಿನಕಾಯಿಗಳನ್ನು ತನ್ನ ಕೈವಸ್ತ್ರದಲ್ಲಿ ಕಟ್ಟಿ ಒಯ್ಯುತ್ತಾನೆ. ಒಂದು ಲೋಟ ಹಾಗೂ ಬಾವಿಯ ನೀರು ಸೇದಲು ಸಣ್ಣ ಹಗ್ಗವೊಂದು ಬಳಿಯಿರುತ್ತದೆ. ಬೇರೇನೂ ಬೇಡ ಅವನಿಗೆ. ದಿನವೂ ೧೦–೧೨ ಮೈಲು ನಡೆದುಹೋಗುತ್ತಾನೆ. ವಸ್ತ್ರದಲ್ಲೆ ಹಿಟ್ಟು ಕಾದುತ್ತಾನೆ, ಎರಡು ಪುರುಳೆಕಡ್ಡಿ ಆರಿಸಿ ಒಲೆ ಹೂಡುತ್ತಾನೆ, ರೊಟ್ಟಿ ಬೇಯಿಸುತ್ತಾನೆ. ಬಾಟಿ ಎನ್ನುತ್ತಾರೆ ಅದನ್ನು. ನಾ ಸವಿದಿದೇನೆ, ತುಂಬಾ ಸವಿ ಅದು. ಆ ಆಹಾರದಲ್ಲಲ್ಲ ಸವಿ ಇರುವುದು, ಪ್ರಾಮಾಣಿಕ ದುಡಿಮೆ, ಮನಸ್ಸಿನ ತೃಪ್ತಿ ನೀಡುವ ಹಸಿವಿನಲ್ಲಿ. ಅಂಥವನಿಗೆ ದೇವರೇ ಸಂಗಾತಿ, ದೊರೆ ಚಕ್ರವರ್ತಿಗಳಿಗಿಂತ ತಾನು ಹೆಚ್ಚು ಸಿರಿವಂತನೆಂದು ಆತನ ಭಾವನೆ. ಪರರ ಸಿರಿಯನ್ನು ಒಳ ಒಳಗೇ ಆಸೆ ಪಡುವವರಿಗೆ ದೇವರು ಮಿತ್ರನಾಗುವುದಿಲ್ಲ. ಪ್ರತಿಯೊಬ್ಬರೂ ಈ ಉದಾಹರಣೆಯನ್ನು ಅನುಸರಿಸಿ ಅಸೀಮ ನೆಮ್ಮದಿ, ಸುಖ ಅನುಭವಿಸಬಹುದು, ಇತರರಿಗೂ ಅದನ್ನು ಬಿಂಬಿಸಬಹುದು. ಅದರ ಬದಲು ಐಶ್ವರ್ಯಕ್ಕೇ ಜೋತುಬಿದ್ದರೆ ಶೋಷಣೆಗೇ, ಅದಕ್ಕೆ ಯಾವುದೇ ಹೆಸರನ್ನಿಡಿ, ತೊಡಗಬೇಕಾದೀತು. ಆಗಲೂ ಕೋಟೀಶ್ವರರು ಅರ್ಬುದದ ಅಧಿಕಾರಿಗಳಾಗರು. ಸಂತೃಪ್ತಿ ಹಾಗೂ ದೇವರ ಸಂಗತಿಯಲ್ಲೇ ನಿಜವಾದ ಸುಖ ೧೩

## ಅನ್ನದ ಕಾಯಕ

ಮಾನವ ಬದುಕಲು ದುಡಿಯಲೇಬೇಕು ಎಂಬ ನಿಯಮ ಮೊದಲು ನನಗೆ ಮನವರಿಕೆ ಆದುದು ಟಾಲ್‌ಸ್ಟಾಯ್ ಬರೆದ 'ಅನ್ನದ ಕಾಯಕ' ಎಂಬ ಪ್ರಬಂಧವನ್ನೋದಿದಾಗ. ಅದಕ್ಕೂ ಮೊದಲು ರಸ್ಕಿನ್ನನ 'Unto This

Last ' (ಈ ಕಟ್ಟಕಡೆಯವನಿಗೂ) ಎಂಬ ಗ್ರಂಥ ಓದಿದಮೇಲೆ ಆ ತತ್ತ್ವಕ್ಕೆ ಶ್ರದ್ಧೆ ಸಲ್ಲಿಸುತ್ತಿದ್ದೆ. ತನ್ನ ಅನ್ನವನ್ನು ತನ್ನ ಕೈಗಳಿಂದ ದುಡಿದೇ ಗಳಿಸ ಬೇಕೆಂಬ ದಿವ್ಯ ನಿಯಮವನ್ನು ಒತ್ತಿಹೇಳಿದಾತ ರಷ್ಯನ್ ಲೇಖಕ ಟಿ. ಎಂ. ಬೊಂಡರೆಫ್. ಆತನ ವಿಚಾರವನ್ನು ಟಾಲ್‌ಸ್ಟಾಯ್ ವಿಸ್ತಾರವಾಗಿ ಪ್ರಚಾರ ಮಾಡಿದ. ಭಗವದ್‌ಗೀತೆಯ ಮೂರನೆಯ ಅಧ್ಯಾಯದಲ್ಲಿ ಇದೇ ತತ್ತ್ವ ನನ್ನ ಕಣ್ಣಿಗೆ ಕಾಣುತ್ತಿದೆ. ಯಜ್ಞ ಮಾಡದೆ ತಿನ್ನುವವನು ಕಳ್ಳ-ಅನ್ನವನ್ನು ತಿನ್ನುತ್ತಾನೆ. ' ಯಜ್ಞ ' ಎಂಬುದಕ್ಕೆ ಇಲ್ಲಿ ಶರೀರಶ್ರಮ ಅಥವಾ ' ಅನ್ನದ ಕಾಯಕ ' ಎಂದೇ ಅರ್ಥ.

ಬುದ್ಧಿಯೂ ನಮ್ಮನ್ನು ಅದೇ ನಿರ್ಧಾರಕ್ಕೆ ಒಯ್ಯುತ್ತದೆ. ಶರೀರಶ್ರಮ ಮಾಡದವನಿಗೆ ತಿನ್ನಲು ಏನಧಿಕಾರ? ' ನಿನ್ನ ಬೆವರು ಸುರಿಸಿ ಹಿಟ್ಟು ತಿನ್ನು ' ಎನ್ನುತ್ತದೆ ಬೈಬಲ್. ಎಂಥ ಕೋಟೀಶ್ವರನೇ ಆಗಲಿ ತನ್ನ ಹಾಸಿಗೆಯ ಮೇಲೆಯೇ ಬಿದ್ದಿದ್ದು ಯಾರಾದರೂ ತನ್ನ ಬಾಯೊಳಗೇ ಅನ್ನ ಹಾಕುವಂತೆ ಏರ್ಪಾಡುಮಾಡಿಕೊಂಡರೆ, ಹಾಗೆ ಬಹಳ ದಿನ ತಿನ್ನಲಾರ, ಕ್ಷಿಪ್ರವೇ ಬೇಸರ ಗೊಂಡಾನು. ಆದುದರಿಂದ ವ್ಯಾಯಾಮಾದಿಗಳನ್ನು ಮಾಡಿ ಹಸಿವುಂಟು ಮಾಡಿಕೊಂಡಾನು, ತಾನುಣ್ಣುವ ಅನ್ನಕ್ಕೆ ಅಣಿಮಾಡಿಕೊಂಡಾನು. ಬಡವ ನಾಗಲಿ ಭಾಗ್ಯವಂತನಾಗಲಿ ಹೀಗೆ ಶರೀರವ್ಯಾಯಾಮ ಮಾಡಲೇಬೇಕಾಗಿದ್ದರೆ ಅನ್ನಕ್ಕಾಗಿ ಏಕೆ ಉತ್ಪಾದಕವಾಗಿ ಶರೀರಶ್ರಮ ಮಾಡಬಾರದು? ಅನ್ನದ ಕಾಯಕವೇಕೆ ಮಾಡಬಾರದು? ಅಂಗಸಾಧನೆ ಮಾಡು, ಶ್ವಾಸೋಚ್ಛ್ವಾಸದ ಕವಾಯತು ಮಾಡು ಎಂದು ರೈತರಿಗೆ ಹೇಳುತ್ತಾರೆಯೆ? ಈ ಲೋಕದಲ್ಲಿ ಉಳುವ ರೈತರೇ ಹೆಚ್ಚು; ನೂರಕ್ಕೆ ತೊಂಬತ್ತು. ಉಳಿದ ಹತ್ತು ಜನರೂ ಈ ಅಸಂಖ್ಯ ರೈತರ ಮೇಲ್ಪಂಕ್ತಿಯನ್ನೇ ಅನುಸರಿಸಿದರೆ ಲೋಕದಲ್ಲಿ ಎಷ್ಟು ಸುಖ, ಶಾಂತಿ, ಆರೋಗ್ಯವೃದ್ಧಿ ಆದೀತು! ಆ ಜನ ಬೇಸಾಯದಲ್ಲಿ ಪಾಲು ಗೊಂಡರೆ ಬೇಸಾಯದ ಎಷ್ಟೋ ಕಷ್ಟಗಳು ಸುಲಭವಾಗಿ ದೂರವಾದಾವು. ಅನ್ನದ ಕಾಯಕದ (ಶರೀರಶ್ರಮದ) ನಿರಪವಾದ ನಿಯಮವನ್ನು ಎಲ್ಲರೂ ಒಪ್ಪಿದರೆ ಉಚ್ಚ-ನೀಚದ ದುಷ್ಟ ಭೇದ ಮಾಯವಾದೀತು. ಎಲ್ಲ ವರ್ಣ ಗಳವರಿಗೂ ಕಾಯಕ ಸಾಮಾನ್ಯ ನಿಯಮ. ಈಗಂತೂ ಧಣಿ-ದುಡಿಮೆಗಾರರ ನಡುವೆ ವಿಶ್ವಾದ್ಯಂತ ಸಂಘರ್ಷ ಇದೆ, ಬಡವರಿಗೆ ಭಾಗ್ಯವಂತರನ್ನು ಕಂಡರೆ

ಹೊಟ್ಟೆಯುರಿ. ಎಲ್ಲರೂ ಅನ್ನಕ್ಕಾಗಿ ಕಾಯಕ ಮಾಡಿದರೆ ಮೇಲು-ಕೀಳೆಂಬ ಭೇದ ಅಳಿದೀತು; ಆಗಲೂ ಶ್ರೀಮಂತರಿದ್ದಾರು, ಆದರೆ ತಮ್ಮ ಸೊತ್ತಿಗೆ ವಿಶ್ವಸ್ತರಂತೆ, ಟ್ರಸ್ಟಿಗಳಂತೆ ಇದ್ದಾರು; ಮತ್ತು ಅದನ್ನು ಲೋಕಹಿತಕ್ಕಾಗಿ ಬಳಸಿಯಾರು.

ಅಹಿಂಸೆಯ ಪಾಲನೆಗೆ, ಸತ್ಯಾರಾಧನೆಗೆ, ಬ್ರಹ್ಮಚರ್ಯವನ್ನು ಸಹಜವಾಗಿ ಮಾಡಿಕೊಳ್ಳುವ ಪ್ರಯತ್ನಕ್ಕೆ ಶರೀರಶ್ರಮ ವರದಾನವಿದ್ದಂತೆ. ನಿಜವಾಗಿ ನೋಡಿದರೆ, ಈ ಕಾಯಕ ಕೃಷಿಗೇ ಸಂಬಂಧಿಸಿದುದು. ಈಗಿನ ಸ್ಥಿತಿಯಲ್ಲಿ ಎಲ್ಲರೂ ವ್ಯವಸಾಯ ಮಾಡುವಂತಿಲ್ಲ. ಆದುದರಿಂದ ವ್ಯವಸಾಯವನ್ನು ಆದರ್ಶವೆಂದೆಣಿಸಿ ಅದರ ಬದಲು ನೂಲಬಹುದು, ನೇಯಬಹುದು, ಮರಗೆಲಸ ಮಾಡಬಹುದು, ಕಬ್ಬಿಣಗೆಲಸ ಮಾಡಬಹುದು. ಪ್ರತಿಯೊಬ್ಬನೂ ತನಗೆ ತಾನೇ ಭಂಗಿಯಾಗಬೇಕು. ಉಂಡವನು ಶೌಚಕ್ಕೆ ಹೋಗಲೇಬೇಕು. ತನ್ನ ಶೌಚವನ್ನು ತಾನೇ ಬಳಿದೋ ಎತ್ತಿಯೋ ಹಾಕುವ ವ್ಯವಸ್ಥೆಯೇ ಉತ್ತಮ ವ್ಯವಸ್ಥೆ. ಇದು ಸಾಧ್ಯವಲ್ಲದಿದ್ದರೆ ಪ್ರತಿಯೊಂದು ಕುಟುಂಬವೂ ತಮ್ಮ ಶೌಚದ ವ್ಯವಸ್ಥೆ ಮಾಡಿಕೊಳ್ಳಬೇಕು. ಭಂಗಿಗಳದೇ ಒಂದು ಗುಂಪಾಗಿ ಅದನ್ನೇ ಒಂದು ವೃತ್ತಿಯಾಗಿ ಮಾಡಿದ ಸಮಾಜದಲ್ಲಿ ಏನೋ ತೀವ್ರದೋಷವಿದೆಯೆಂದು ನನಗೆ ಕೆಲವು ವರ್ಷಗಳಿಂದ ಅನಿಸುತ್ತಿದೆ. ಆರೋಗ್ಯರಕ್ಷಕವಾದ ಈ ಅತ್ಯಾವಶ್ಯಕ ಕೆಲಸವನ್ನು ನೀಚಾತಿನೀಚವೆಂದು ಯಾವ ಮಹಾರಾಯ ಮೊಟ್ಟಮೊದಲು ನಿರ್ಣಯಿಸಿದನೋ ಇತಿಹಾಸದಿಂದ ತಿಳಿಯುವುದಿಲ್ಲ. ಯಾರೇ ಇರಲಿ ನಮಗೆ ಅವನು ಉಪಕಾರ ಮಾಡಲಿಲ್ಲ. ನಾವೆಲ್ಲರೂ ಭಂಗಿಗಳೇ ಎಂಬ ಭಾವನೆ ಚಿಕ್ಕಂದಿನಿಂದಲೂ ಬೇರೂರಬೇಕು. ಅದಕ್ಕೆ ಸಹಜೋಪಾಯ ಈ ಮಾತನ್ನು ಅರಿತವನು ಪ್ರತಿಯೊಬ್ಬನೂ ಶೌಚವನ್ನು ಬಳಿಯುವ ಕೆಲಸದಿಂದ ತನ್ನ ಪರಿಶ್ರಮವನ್ನು ಮೊದಲಿಡುವುದು. ಹೀಗೆ ಜ್ಞಾನಪೂರ್ವಕ, ವಿಚಾರಪೂರ್ವಕ ಕೈಗೊಂಡ ಭಂಗಿಯ ಕೆಲಸ ಮಾನವಸಮಾನತೆಯ ತತ್ತ್ವವನ್ನು ಸರಿಯಾಗಿ ಅರಿಯಲು ಸಹಾಯಕವಾದೀತು.[೧೪]

ಬುದ್ಧಿಶ್ರಮದಿಂದ ತಮ್ಮ ಅನ್ನ ಗಳಿಸಿಕೊಳ್ಳಬಾರದೇ? ಕೂಡದು. **ಶರೀರದ ಅಗತ್ಯಗಳನ್ನು ಶರೀರವೇ ಪೂರೈಸಬೇಕು. ದೊರೆಯದನ್ನು ದೊರೆಗೆ ಸಲ್ಲಿಸಿಬಿಡು—ಎಂಬುದು ಇಲ್ಲಿ ಚೆನ್ನಾಗಿ ಅನ್ವಯಿಸುತ್ತದೆ.**

ಕೇವಲ ಬುದ್ಧಿಯ, ಮಾನಸಿಕ ಪರಿಶ್ರಮ ಆತ್ಮಕ್ಕಾಗಿ, ಅದರ ತೃಪ್ತಿಯೇ ಅದರ ಪ್ರತಿಫಲ. ಹಣದ ಪ್ರತಿಫಲವನ್ನು ಅದೆಂದೂ ಬಯಸಬಾರದು. ಆದರ್ಶ ರಾಜ್ಯದಲ್ಲಿ ವೈದ್ಯರು, ವಕೀಲರು ಮುಂತಾದವರು ಕೇವಲ ಸಮಾಜದ ಹಿತಕ್ಕಾಗಿಯೇ ದುಡಿದಾರು, ಸ್ವಹಿತಕ್ಕೆ ಅಲ್ಲ. ಅನ್ನದ ಕಾಯಕದ ತತ್ತ್ವಕ್ಕೆ ನಿಷ್ಠೆ ಸಮಾಜರಚನೆಯಲ್ಲಿ ಒಂದು ಸದ್ದಿಲ್ಲದ ಕ್ರಾಂತಿಯನ್ನೇ ತಂದೀತು. ಬದುಕಿನ ಹೋರಾಟವನ್ನು ಪರಸ್ಪರ ಸೇವೆ ಸಲ್ಲಿಸುವ ಹೋರಾಟವಾಗಿ ಪರಿವರ್ತಿಸುವುದರಲ್ಲೇ ಮಾನವನ ವಿಜಯ. ಆಗ ಪಾಶವೀ ನಿಯಮದ ಸ್ಥಳವನ್ನು ಮಾನವೀಯ ನಿಯಮ ಪಡೆದೀತು.

ಅನ್ನದ ಕಾಯಕದ ಧರ್ಮವನ್ನು ಹಾಗೂ ಅದರ ಅಂತರಾರ್ಥವೆಲ್ಲವನ್ನೂ ಸ್ವಸಂತೋಷದಿಂದ ಮನ್ನಿಸಿದರೆ ಹಳ್ಳಿಗಳಿಗೆ ಹಿಂತಿರುಗಬೇಕೆಂದೇ ಅರ್ಥವಾಗುತ್ತದೆ. ಆದರೆ ಇದನ್ನು ಟೀಕಿಸುವವ ಹೇಳಿಯಾನು: "ಭಾರತದ ಕೋಟಿಗಟ್ಟಲೆ ಮಕ್ಕಳು ಇಂದು ಹಳ್ಳಿಗಳಲ್ಲೇ ಇದಾರೆ; ಆದರೆ ಅವರು ಅರೆಹೊಟ್ಟೆ ಉಂಡೇ ಬದುಕಿರುವರಲ್ಲ"—ಎಂದು. ಅಯ್ಯೋ, ಇದು ತೀರಾ ನಿಜ. ಅವರದು ಇಚ್ಛಾಪೂರ್ವಕ ನಿಷ್ಠೆಯಲ್ಲ, ಇದು ಅದೃಷ್ಟವಶಾತ್ ನಮಗೆ ಗೊತ್ತು. ಸಾಧ್ಯವಿದ್ದರೆ ಶರೀರಶ್ರಮವನ್ನು ಅವರು ತಪ್ಪಿಸಿಕೊಂಡಾರು, ಅತಿ ಹತ್ತಿರದ ಪಟ್ಟಣದಲ್ಲಿ ಸ್ಥಳ ಸಿಗುವುದಾದರೆ ಅಲ್ಲಿಗೆ ಓಡಿಬಿಟ್ಟಾರು. ಒಡೆಯನಿಗೆ ಒತ್ತಾಯದ ವಿಧೇಯತೆ ಒಂದು ಬಗೆಯ ದಾಸ್ಯ, ಆದರೆ ತಂದೆಗೆ ಇಷ್ಟು ಪಟ್ಟು ವಿಧೇಯನಾಗಿರುವುದು ಪುತ್ರತ್ವದ ವೈಭವ. ಹಾಗೆಯೇ 'ಅನ್ನದ ಕಾಯಕ'ದ ತತ್ತ್ವಕ್ಕೆ ಬಲಾತ್ಕಾರದ ನಿಷ್ಠೆಯಿಂದ ಬಡತನ, ಬೇನೆ ಬಳಲಿಕೆ, ಅತೃಪ್ತಿ ಹುಟ್ಟುತ್ತವೆ. ಅದೊಂದು ಗುಲಾಮಗಿರಿ. ಅದಕ್ಕೆ ಇಚ್ಛಾಪೂರ್ವಕ ನಿಷ್ಠೆಯಿಂದ ತೃಪ್ತಿ-ಆರೋಗ್ಯ ಲಭಿಸುತ್ತವೆ. ಆರೋಗ್ಯವೇ ನಿಜವಾದ ಭಾಗ್ಯ, ಬೆಳ್ಳಿಬಂಗಾರದ ತುಣುಕುಗಳಲ್ಲ.೧೫

ನನ್ನನ್ನು ತಪ್ಪು ತಿಳಿಯಬೇಡಿ. ಬೌದ್ಧಿಕ ಪರಿಶ್ರಮದ ಬೆಲೆಯನ್ನು ನಾ ಅಲ್ಲಗಳೆಯುವುದಿಲ್ಲ, ಆದರೆ ಎಷ್ಟೇ ಪ್ರಮಾಣದ ಬುದ್ಧಿಶ್ರಮವೂ ನಾವು ಸಮಷ್ಟಿಹಿತಕ್ಕಾಗಿ ಕೊಡಲೆಂದೇ ಹುಟ್ಟಿರುವ ಶರೀರಶ್ರಮಕ್ಕೆ ಸಾಟಿಯಲ್ಲ. ಎಷ್ಟೋ ವೇಳೆ ಬುದ್ಧಿಶ್ರಮ ಶರೀರಶ್ರಮಕ್ಕಿಂತ ಎಷ್ಟೋ ಪಾಲು ಮಿಗಿಲಾದುದಿರಬಹುದು, ಇರುತ್ತದೆ, ಆದರೆ ಎಂದೂ ಅದು ಶರೀರಶ್ರಮದ ಬದಲಾಗಿ ಇರದು,

ನಾವು ತಿನ್ನುವ ಕಾಳುಕಡಿಗಿಂತ ಮಾನಸಿಕ ಆಹಾರ ಎಷ್ಟೋ ಮೇಲಾದು ದಿದ್ದರೂ ಅವನ್ನೇ ತಿನ್ನಲಾದೀತೆ? ನಿಜಕ್ಕೂ ಮಣ್ಣಿನಿಂದಾಗುವ ಪದಾರ್ಥ ಗಳಿಲ್ಲದೆ ಬುದ್ಧಿಜನ್ಯ ವಿಷಯಗಳು ಹುಟ್ಟುವುದೇ ಅಸಾಧ್ಯ.೧೬

**ಪ್ರಶ್ನೆ** — ಕವಿ ರವೀಂದ್ರರು ಅಥವಾ ವಿಜ್ಞಾನಿ ರಾಮನ್ ಶರೀರ ಶ್ರಮದಿಂದಲೇ ತಮ್ಮ ಅನ್ನ ಹುಟ್ಟಿಸಿಕೊಳ್ಳಬೇಕೆಂದು ನಾವೇಕೆ ಒತ್ತಾಯ ಪಡಿಸಬೇಕು? ಹಾಗೆ ಮಾಡುವುದು ವ್ಯರ್ಥವಲ್ಲವೇ? ಬುದ್ಧಿಶ್ರಮ ಮಾಡು ವವರೂ ಶರೀರಶ್ರಮ ಮಾಡುವವರೂ ಸಮವೆಂದು ತಿಳಿಯಬಾರದೆ? ಇಬ್ಬರೂ ಸಮಾಜಕ್ಕೆ ಉಪಯುಕ್ತವಾದ ಕೆಲಸವನ್ನೇ ಮಾಡುವರಲ್ಲ?

**ಉತ್ತರ**—ಬುದ್ಧಿಯ ಕೆಲಸವೂ ಮುಖ್ಯ. ಜೀವನದ ಯೋಜನೆಯಲ್ಲಿ ನಿಸ್ಸಂಶಯವಾದ ಸ್ಥಾನ ಅದಕ್ಕುಂಟು. ನಾನು ಆಗ್ರಹಪಡಿಸುತ್ತಿರುವುದು ದೈಹಿಕಶ್ರಮದ ಅಗತ್ಯವನ್ನು. ಯಾರೂ ಈ ಧರ್ಮಕ್ಕೆ ಹೊರಗಾಗಬಾರದು ಎನ್ನುತ್ತೇನೆ ನಾನು. ಬುದ್ಧಿಶ್ರಮದ ಫಲಿತಾಂಶದ ಗುಣವನ್ನೂ ಶರೀರಶ್ರಮ ಹೆಚ್ಚಿಸುತ್ತದೆ. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ಶರೀರಶ್ರಮವನ್ನೂ ಮಾಡುತ್ತಿದ್ದರು. ಹಾಗಿಲ್ಲದಿದ್ದರೂ ಇಂದಿನ ಕಾಲಕ್ಕೆ ಶರೀರಶ್ರಮ ಅತ್ಯಗತ್ಯ ಎಂದು ಸಿದ್ಧವಾಗಿಬಿಟ್ಟಿದೆ.೧೭

## ದುಡಿಮೆ – ಬಿಡುವಿನ ಸಿದ್ಧಾಂತ

**ಒಬ್ಬ ಮಿತ್ರ** — "ಬಿಡುವಿನ ಪ್ರಶ್ನೆಯನ್ನೇ ನೀವು ಗಣಿಸಿದಂತೆ ತೋರುವುದಿಲ್ಲ. ಮಿತಿಮೀರಿದ ದುಡಿಮೆಯಿಂದಾಗಿ ಬಡವರ್ಗಗಳಿಗೆ ಬೌದ್ಧಿಕ ವಿಚಾರಕ್ಕೆ, ಮನೋರಂಜನೆಗೆ ಬಿಡುವೇ ಸಿಕ್ಕುವುದಿಲ್ಲ. ಅಂಥವರನ್ನು ಇನ್ನೂ ಹೆಚ್ಚು ದುಡಿಯಿರಿ ಎನ್ನುತ್ತಿದೀರಿ ಈಗ ನೀವು."

**ಗಾಂಧೀಜೀ**—"ನಿಜವಾಗಿಯೂ ಹಾಗೇನು? ತಮ್ಮ ಬಲಾತ್ಕಾರದ ಬಿಡುವಿನ ವೇಳೆಯನ್ನು ಹೇಗೆ ಉಪಯೋಗಿಸಬೇಕೆಂದು ತೋರದ ಜನರ ಚಿಂತೆ ನಾ ಮಾಡುತ್ತಿದೇನೆ ಈಗ. ಅವರ ಅನಿವಾರ್ಯ ಆಲಸ್ಯ ಅವರನ್ನು ನಿರ್ಜೀವ ಕಲ್ಲುಗಳ ರಾಶಿಗೆ ಸೇರಿಸಿಬಿಟ್ಟಿದೆ. ಎಷ್ಟು ಜಡತೆ ಬಂದುಬಿಟ್ಟಿದೆ ಎಂದರೆ ಕೆಲವರಂತೂ ಅದನ್ನು ಬಿಟ್ಟೇಳಲೂ ಬಯಸರು."

**ಒಬ್ಬ ಮಿತ್ರ**—"ಬೇಕಾದವರಿಗೆ ಖಂಡಿತ ಉದ್ಯೋಗ ಕೊಡಿ. ಆದರೆ ತಮ್ಮ ಕಾಳನ್ನು ತಾವೇ ಬೀಸಿಕೊಳ್ಳಬೇಕು, ತಮ್ಮ ಬತ್ತವನ್ನು ತಾವೇ ಕುಟ್ಟಿಕೊಳ್ಳಬೇಕು ಎಂದು ಹೇಳಿ ಬೇಸರದ ನಿರ್ಜೀವ ದುಡಿಮೆಗೆ ಹೆಚ್ಚು ಒತ್ತಾಯ ಹಾಕುತ್ತಿದೀರಲ್ಲವೇ?"

**ಗಾಂಧೀಜೀ** — "ಅವರ ಕೈಗಳ ಮೇಲೆ ಭಾರವಾಗಿ ಕೂತಿರುವ ನಿರುದ್ಯೋಗದ ವೇಳೆಗಿಂತ ಈ ಕೆಲಸ ಹೆಚ್ಚು ಬೇಸರವಲ್ಲ. ಅದರಿಂದ ಕೇವಲ ಕೆಲವು ಕಾಸುಗಳನ್ನು ಗಳಿಸುವುದಷ್ಟೇ ಅಲ್ಲ, ತಮ್ಮ ಹಾಗೂ ತಮ್ಮ ದೇಶಬಾಂಧವರ ಆರೋಗ್ಯವನ್ನು ಅದರಿಂದ ಕಾಯ್ದುಕೊಳ್ಳುವೆವೆಂಬುದನ್ನು ಅವರು ಅರಿತರೆ ಆ ಕೆಲಸದ ಬೇಸರವೂ ಕಳೆದೀತು. ಆಧುನಿಕ ಕಾರಖಾನೆಗಳಲ್ಲಿ ದುಡಿಯುವುದಕ್ಕಿಂತ ಈ ಕೆಲಸ ಹೆಚ್ಚು ಬೇಸರ ತರುವಂಥದಲ್ಲ. ವಸ್ತುಸೃಷ್ಟಿಯ ಆನಂದವನ್ನು ಕಸಿಯದ ಎಂಥ ಶ್ರಮದ ಕೆಲಸವಾಗಲಿ ಬೇಸರ ತಾರದು. ದೊಡ್ಡ ಪಾದರಕ್ಷೆಯ ಕಾರಖಾನೆಗೆ ಹೋಗಿ. ಕೆಲವರು ಬರಿಯ ಅಟ್ಟೆಗಳನ್ನೇ ಮಾಡುತ್ತಿರುತ್ತಾರೆ, ಕೆಲವರು ಬರಿಯ ಬಾರು-ಉಂಗುರಗಳನ್ನೇ ಮಾಡುತ್ತಿರುತ್ತಾರೆ, ಉಳಿದವರು ಇತರ ಭಾಗಗಳನ್ನು ತಯಾರಿಸುತ್ತಿರುತ್ತಾರೆ. ಇದು ಬೇಸರದ ಕೆಲಸ, ಅವರು ಬುದ್ಧಿ ಬಳಸದೆ ದುಡಿಯುತ್ತಾರೆ, ಆದರೆ ಇಡೀ ಮೋಜನ್ನು ತಾನೇ ತಯಾರಿಸುವ ಮೋಚಿಯ ಕೆಲಸದಲ್ಲಿ ಬೇಸರಿಕೆ ಇರದು. ಅವನ ಕೆಲಸದಲ್ಲಿ ಅವನ ಕೈಚಳಕ ಕಂಡುಬಂದೀತು, ತಾನೇ ಒಂದು ವಸ್ತು ಸೃಷ್ಟಿಸಿದ ಆನಂದ ಅವನಿಗಿದ್ದೀತು. ಯಾವುದೇ ಕೆಲಸವಾಗಲಿ ಅದನ್ನು ಮಾಡುವ ಭಾವನೆಯನ್ನೇ ಅವಲಂಬಿಸಿರುತ್ತದೆ. ನನಗೆ ಬೇಕಾದ ನೀರನ್ನು ನಾನೇ ಸೇದಬಯಸುವೆ, ನನ್ನ ಕಟ್ಟಿಗೆಯನ್ನು ನಾನೇ ಒಡೆಯಬಯಸುವೆ. ಆದರೆ ನನ್ನ ಕೆಲಸವನ್ನು ಬುದ್ಧಿವಂತಿಕೆಯಿಂದ ಮಾಡಬೇಕು, ಪರರ ಒತ್ತಾಯಕ್ಕಾಗಿ ಮಾಡತಕ್ಕದ್ದಲ್ಲ. ಉದಾತ್ತ ಉದ್ದೇಶ್ಯದಿಂದ ಬುದ್ಧಿಪೂರ್ವಕವಾಗಿ ಮಾಡಿದ ಕೆಲಸವೆಲ್ಲ ಪುನರ್ನಿರ್ಮಾಣವೂ ಆಗುತ್ತದೆ, ಮನೋರಂಜನೆಯೂ ಆಗುತ್ತದೆ."

**ಮಿತ್ರ**—"ಕ್ಷಮಿಸಿ, ದಿನವಿಡೀ ಬರೀ ಶರೀರಶ್ರಮ ಮಾಡಹೇಳುವುದರಿಂದ ಬೌದ್ಧಿಕವಾಗಿ ಅವರನ್ನು ಜಡವಾಗಿಸುವ ಅಪಾಯವಿಲ್ಲವೇ? ಎಷ್ಟು ಹೊತ್ತಿನ ಶರೀರಶ್ರಮ ಬೇಕೆನ್ನುತ್ತೀರಿ ನೀವು?"

**ಗಾಂಧೀಜೀ** — "ಎಂಟು ಘಂಟೆಕಾಲ ದುಡಿಯಲು ಹಿಂಜರಿಯೆ ನಾನು."

**ಮಿತ್ರ**—"ನಿಮ್ಮ ವಿಷಯ ಹೇಳಲಿಲ್ಲ ನಾನು. ಉಳಿದ ಹೊತ್ತಿನಲ್ಲಿ ಮಾಡಲು ಸಾಕಷ್ಟು ಬುದ್ಧಿಸಾಮರ್ಥ್ಯ, ಸೃಷ್ಟಿಪ್ರತಿಭೆ ನಿಮಗಿದೆ. ನಿಮ್ಮ ವಿಷಯ ಬೇರೆ. ಎಂಟು ತಾಸು ನೂಲುವುದರಲ್ಲೇ ಬೇಕಾದರೂ ನೀವು ಆನಂದ ಪಡೆಯಬಲ್ಲಿರಿ."

**ಗಾಂಧೀಜೀ**—"ಇಲ್ಲ, ಎಲ್ಲರೂ ಎಂಟು ತಾಸಿನ ಕೆಲಸದಿಂದ ಆನಂದ ಪಡೆಯಬೇಕೆನ್ನುತ್ತೇನೆ. ಎಲ್ಲವೂ ಕೆಲಸದ ಹಿಂಬದಿಯ ಭಾವನೆಯನ್ನು ಅವಲಂಬಿಸಿರುತ್ತದೆ. ದಿನಕ್ಕೆ ಎಂಟು ಘಂಟೆಗಳ ಪ್ರಾಮಾಣಿಕ, ಚೊಕ್ಕ ದುಡಿಮೆಯ ಬಳಿಕವೂ ಬೌದ್ಧಿಕ ಸಾಧನೆಗೆ ಸಾಕಷ್ಟು ವೇಳೆ ಉಳಿಯುತ್ತದೆ. ಆಲಸ್ಯ-ಜಡತೆಗಳನ್ನು ಕೊನೆಗಾಣಿಸುವುದೇ ನನ್ನ ಗುರಿ. ಭಾರತದ ಪ್ರತಿ ಹಳ್ಳಿಗನೂ ತನ್ನ ಬೆವರು ಸುರಿಸಿ ತಿಂಗಳಿಗೆ ೨೦ ರೂಪಾಯಿ ದುಡಿಯುತ್ತಿರುವ ಎಂದು ಜಗತ್ತಿಗೆ ಹೇಳಬಲ್ಲೆನಾದರೆ ನನಗೆ ಅಪಾರ ಸಂತೃಪ್ತಿ."೧೮

## ಅಧ್ಯಾಯ – ೩

# ಸ್ವದೇಶಿ

ಬಹಳ ವಿಚಾರಮಾಡಿದಮೇಲೆ ಸ್ವದೇಶಿಯ ಅರ್ಥವನ್ನು ಉತ್ತಮವಾಗಿ ವರ್ಣಿಸುವ ವ್ಯಾಖ್ಯೆಗೆ ಬಂದಿದೇನೆ. ನಮ್ಮಿಂದ ದೂರವಿರುವುದನ್ನು ಬಿಟ್ಟು ತೀರಾ ಹತ್ತಿರದ ಸುತ್ತುಮುತ್ತಲಿನಲ್ಲಿ ಆದ ವಸ್ತುಗಳನ್ನು ಬಳಸುವುದು, ಅಲ್ಲಿನ ಜನರ ಸೇವೆಮಾಡುವಂಥ ನಮ್ಮ ಭಾವನೆಯೇ ಸ್ವದೇಶಿ. ಆದುದರಿಂದ ಈ ವ್ಯಾಖ್ಯೆಯನ್ನು ತೃಪ್ತಿಪಡಿಸಲು ಧರ್ಮದ ಮಟ್ಟಿಗೆ ನಾನು ನನ್ನ ಪೂರ್ವಜರಿಂದ ಬಂದ ಧರ್ಮಕ್ಕೆ ಕಟ್ಟುಬೀಳಬೇಕಾಗುತ್ತದೆ. ನನ್ನ ಅತಿನಿಕಟ ಧಾರ್ಮಿಕ ಸನ್ನಿವೇಶವನ್ನು ಉಪಯೋಗಿಸಬೇಕು. ಅದು ದೋಷಯುಕ್ತವೆಂದೆನಿಸಿದರೆ ದೋಷಗಳನ್ನು ನಿವಾರಿಸಿ ಅದಕ್ಕೆ ಸೇವೆಸಲ್ಲಿಸಬೇಕು. ರಾಜಕೀಯ ಕ್ಷೇತ್ರದಲ್ಲಿ ಸ್ವದೇಶೀ ಸಂಸ್ಥೆಗಳ ಉಪಯೋಗವನ್ನೇ ಮಾಡಿಕೊಳ್ಳಬೇಕು, ಅವುಗಳಲ್ಲಿ ಸಿದ್ಧಪಡಿಸಲ್ಪಟ್ಟ ದೋಷಗಳಿದ್ದರೆ ಅವನ್ನು ಸರಿಪಡಿಸಿ ಸೇವೆಸಲ್ಲಿಸಬೇಕು. ಆರ್ಥಿಕ ಕ್ಷೇತ್ರದಲ್ಲಿ ನನ್ನ ಹತ್ತಿರದ ನೆರೆಯವರು ಮಾಡಿದ ವಸ್ತುಗಳನ್ನೇ ಬಳಸಬೇಕು, ಆ ಕೈಗಾರಿಕೆಗಳಲ್ಲಿ ಇರುವ ಲೋಪಗಳನ್ನು ತುಂಬಿ ಅವನ್ನು ಸಕ್ಷಮವೂ, ಸಂಪೂರ್ಣವೂ ಗೊಳಿಸಬೇಕು. ಅಂಥ ಸ್ವದೇಶಿಯನ್ನು ಕೃತಿಗೆ ಇಳಿಸಿದರೆ ಸತ್ಯಯುಗವೇ ಮೂಡೀತು, ನಮ್ಮ ಕಾಲದಲ್ಲೇ ಆ ಸ್ಥಿತಿಯನ್ನು ಮುಟ್ಟಿಯೇವೆಂಬ ನಿರೀಕ್ಷೆಯೇನೂ ಇಲ್ಲ—ಎಂದು ಹೇಳುತ್ತಾರೆ. ಎಷ್ಟೋ ಪೀಳಿಗೆಗಳ ಮೇಲೂ ಪೂರ್ಣಗೊಳ್ಳದಿದ್ದರೂ ಸ್ವದೇಶಿಯನ್ನು ಬಿಟ್ಟುಕೊಡ ಬಾರದೇಕೆ ?

ಆರ್ಥಿಕ ಹಾಗೂ ಔದ್ಯೋಗಿಕ ಕ್ಷೇತ್ರದಲ್ಲಿ ಸ್ವದೇಶೀ ತತ್ತ್ವವನ್ನು ಕೈಬಿಟ್ಟುದರಿಂದಲೇ ನಮ್ಮ ಜನಸ್ತೋಮಕ್ಕೆ ಕಡುಬಡತನ ಒದಗಿದೆ. ಭಾರತದ ಹೊರಗಿನಿಂದ ಒಂದು ವಸ್ತುವನ್ನೂ ಕೊಳ್ಳದಿದ್ದಲ್ಲಿ ನಮ್ಮ ನಾಡು ಹಾಲು-ಜೇನಿನ ಹೊನಲು ಹರಿವ ನಾಡಾಗುತ್ತಿತ್ತು. ಆದರೆ ಸ್ಥಿತಿ ಹಾಗಿಲ್ಲ. ಆಸೆಬುರಕರಾದೆವು, ಇಂಗ್ಲೆಂಡೂ ಹಾಗೆಯೇ ಇತ್ತು. ಭಾರತ–ಇಂಗ್ಲೆಂಡ್‌ಗಳ ನಡುವಣ ಸಂಬಂಧ ಸ್ಪಷ್ಟವಾಗಿ ದೋಷಪೂರ್ಣ.

ಸ್ವದೇಶೀ ತತ್ತ್ವವನ್ನು ಅನುಸರಿಸಿದುದಾದರೆ ನಮ್ಮ ಅಗತ್ಯಗಳನ್ನು ಪೂರೈಸುವ ನೆರೆಯವರನ್ನು ಹುಡುಕುವುದು ನಿಮ್ಮ-ನನ್ನ ಕರ್ತವ್ಯವೇ ಆದೀತು. ಅವರಿಗೆ ಅವನ್ನು ಪೂರೈಸಲು ತಿಳಿಯದಿದ್ದಲ್ಲಿ ಅದನ್ನು ಅವರಿಗೆ ಕಲಿಸಬೇಕಾದೀತು, ಸ್ವಸ್ಥ ಉದ್ಯೋಗದ ಆವಶ್ಯಕತೆ ಇರುವ ನೆರೆಹೊರೆಯ ಜನ ಇದಾರೆಂಬುದು ಇದಕ್ಕೆ ಪೂರ್ವಪಕ್ಷ. ಆಗ ಭಾರತದ ಪ್ರತಿಯೊಂದು ಹಳ್ಳಿಯೂ ಸ್ಥಳದಲ್ಲಿ ತಯಾರಿಸಲಾಗದ ಅಗತ್ಯದ ವಸ್ತುವನ್ನು ಮಾತ್ರ ಇತರ ಹಳ್ಳಿಗಳಿಂದ ವಿನಿಮಯ ಮಾಡಿಕೊಳ್ಳುವಂಥ ಸ್ವಯಂಪೂರ್ಣ ಸ್ವಾವಲಂಬೀ ಹಳ್ಳಿಗಳಾದಾವು. ಇದೆಲ್ಲ ಹುಚ್ಚು ಹವ್ಯಾಸವೆನಿಸಬಹುದು. ದಯಾಪರನಾದ ಮುಸ್ಲಿಂ ಬಂಧು ಕುಡಿಯಲು ಶುದ್ಧ ನೀರು ಹಣಿಸಲು ತಯಾರಿರುವಾಗಲೂ ಗಂಟಲು ಒಣಗಿಸಿಕೊಂಡೇ ಇರುವುದು ಶುದ್ಧ ಹುಚ್ಚುತನ. ಹೀಗಿದ್ದರೂ ಮುಸ್ಲಿಮರ ಮನೆಯಲ್ಲಿ ನೀರು ಕುಡಿಯುವುದಕ್ಕಿಂತ ನೀರಡಿಸಿ ಸಾಯಲೂ ಸಿದ್ಧರಿರುವ ಸಾವಿರಾರು ಹಿಂದೂಗಳಿದಾರೆ. ಈ ಹುಚ್ಚು ಜನಕ್ಕೆ ಭಾರತದಲ್ಲಿ ತಯಾರಾದ ಬಟ್ಟೆಯನ್ನೇ ಧರಿಸಬೇಕು, ಇಲ್ಲಿ ಬೆಳೆದ ಆಹಾರವನ್ನೇ ಉಣ್ಣಬೇಕೆಂದು ಧರ್ಮ ವಿಧಿಸುತ್ತದೆಯೆಂದು ಮನದಟ್ಟಾದರೆ ಅವರು ಬೇರೆ ಬಟ್ಟೆ ತೊಡಲು, ಆಹಾರ ತೆಗೆದುಕೊಳ್ಳಲು ನಿರಾಕರಿಸಲೂ ಬಹುದು.

ಭಾರತ ಅರ್ಥಿಕಕ್ಷೇತ್ರದಲ್ಲಿ ಸ್ವದೇಶೀ ತತ್ತ್ವವನ್ನು ಅನುಸರಿಸಲು ಸಾಧ್ಯ ಇಲ್ಲವೆಂದು ಎಷ್ಟೋ ಸಲ ಹೇಳಲಾಗುತ್ತದೆ. ಈ ಆಕ್ಷೇಪವನ್ನು ಮುಂದು ಮಾಡುವ ಜನ ಸ್ವದೇಶಿಯನ್ನು ಒಂದು ಜೀವನ ನಿಯಮವಾಗಿ ನೋಡುವುದಿಲ್ಲ. ಅದೊಂದು ಕೇವಲ ದೇಶಾಭಿಮಾನದ ಪ್ರಯತ್ನ, ಆತ್ಮನಿಷೇಧದ ಪ್ರಸಂಗ ಬಂದಾಗ ಅದನ್ನು ಅನುಸರಿಸಬೇಕಿಲ್ಲ—ಎಂಬ ಭಾವ ಇವರದು. ಅದರಿಂದಾಗ ಬಹುದಾದ ದೈಹಿಕ-ಭೌತಿಕ ಕಷ್ಟಗಳನ್ನು ಚೂರೂ ಲೆಕ್ಕಿಸದೆ ಪಾಲಿಸಬೇಕಾದ ಧಾರ್ಮಿಕ ವ್ರತ ಇಲ್ಲಿ ನಿರೂಪಿಸಿರುವ ಸ್ವದೇಶೀ ತತ್ತ್ವ. ಅದರ ಪ್ರಕಾರ ಭಾರತದಲ್ಲಿ ತಯಾರಾಗದ ಸೂಜಿ ಅಥವಾ ಗುಂಡುಸೂಜಿಯನ್ನು ಬಿಡುವುದು ಏನೂ ಭೀತಿ ಹುಟ್ಟಿಸಬೇಕಿಲ್ಲ. ಸ್ವದೇಶೀ ವ್ರತಪಾಲಕ ಇಂದು ತಾನು ಅಗತ್ಯ ಎಂದು ತಿಳಿದಿರುವ ನೂರಾರು ವಸ್ತುಗಳನ್ನು ತೊರೆಯುವುದನ್ನು ಕಲಿತಾನು. ಅಸಾಧ್ಯವಾದುದೆಂದು ಹೇಳಿ ಸ್ವದೇಶಿಯನ್ನು ತಳ್ಳಿಹಾಕುವವರು ಎಷ್ಟಾದರೂ ಅದು ನಿರಂತರ ಪ್ರಯತ್ನದಿಂದ ಸಾಧಿಸಬೇಕಾದ ಗುರಿ ಎಂಬುದನ್ನು ಮರೆಯು

ತ್ತಾರೆ. ಸ್ವದೇಶೀ ನಿಯಮವನ್ನು ಕೆಲವೊಂದು ವಸ್ತುಗಳ ಮಟ್ಟಿಗೆ ಪರಿಮಿತಗೊಳಿಸಿ, ನಮ್ಮ ದೇಶದಲ್ಲಿ ಸಿಗದಂಥ ವಸ್ತುಗಳನ್ನು ಬಳಸಲು ತಾತ್ಕಾಲಿಕ ಅವಕಾಶ ಒದಗಿಸಿಕೊಂಡರೂ ಗುರಿ ಸಾಧನೆ ಸಾಧ್ಯ.

ಸ್ವದೇಶಿಯ ವಿರುದ್ಧ ಇನ್ನು ಒಂದೇ ಒಂದು ಆಕ್ಷೇಪವನ್ನು ಪರಿಶೀಲಿಸುವುದು ಉಳಿದಿದೆ. ನಾಗರಿಕ ಜಗತ್ತಿನ ನೀತಿಕಟ್ಟಳೆಗಳ ಸಮರ್ಥನೆ ಇಲ್ಲದ ಸ್ವಾರ್ಥೀ ತತ್ತ್ವ ಸ್ವದೇಶೀ—ಎನ್ನುತ್ತಾರೆ ಈ ಆಕ್ಷೇಪಕಾರರು. ಅವರ ಮಟ್ಟಿಗೆ ಸ್ವದೇಶೀ ವ್ರತದ ಪಾಲನೆ ಬರ್ಬರತೆಗೆ (ಕಾಡುಜೀವನ) ಮರಳಿದಂತೆ ಎಂದೇ. ಈ ವಿಚಾರವನ್ನು ವಿಶದವಾಗಿ ವಿಶ್ಲೇಷಿಸಲಾರೆ. ಆದರೆ ನಮ್ರತೆ ಹಾಗೂ ಪ್ರೇಮದ ನಿಯಮಗಳಿಗೆ ಸುಸಂಗತವಾದ ತತ್ತ್ವ ಸ್ವದೇಶೀ ಒಂದೇ ಎಂಬುದು ನನ್ನ ಆಗ್ರಹ. ನನ್ನ ಮನೆಯ ಸೇವೆಯನ್ನೇ ನಾ ಮಾಡಲಾಗದವನಿರುವಾಗ ಇಡೀ ಹಿಂದೂಸ್ತಾನದ ಸೇವೆಗೆ ಹೊರಡಬಲ್ಲೆನೆಂದು ತಿಳಿಯುವುದು ದುರಹಂಕಾರ. ಮನೆಯ ಸಲುವಾಗಿಯೇ ನನ್ನ ಗಮನವನ್ನು ಕೇಂದ್ರೀಕರಿಸಿ ಅದರ ಮೂಲಕ ಇಡೀ ರಾಷ್ಟ್ರಕ್ಕೆ, ನೀವು ಬಯಸುವುದಾದರೆ ಇಡೀ ಮಾನವಕೋಟಿಗೆ ಸೇವೆಗೈಯುತ್ತಿರುವೆನೆಂದು ತಿಳಿಯಬಹುದು. ಇದು ನಮ್ರತೆ, ಪ್ರೇಮ. ಕೃತಿಯ ಉದ್ದೇಶ್ಯವೇ ಅದರ ಗುಣವನ್ನೂ ನಿರ್ಧರಿಸೀತು. ಇತರರಿಗೆ ನಾನುಂಟು ಮಾಡುವ ನೋವನ್ನು ಲೆಕ್ಕಿಸದೆ ನಾನು ನನ್ನ ಮನೆಯ ಸೇವೆ ಮಾಡಬಹುದು. ಉದಾಹರಣೆಗೆ ಜನರಿಂದ ಹಣ ಸುಲಿಯುವಂಥ ನೌಕರಿಯನ್ನು ನಾ ಹಿಡಿಯಬಹುದು. ಅದರಿಂದ ನಾನು ಹಣವಂತನಾಗಬಲ್ಲೆ, ನನ್ನ ಮನೆಯ ಅನೇಕ ಅಕ್ರಮ ಬೇಡಿಕೆಗಳನ್ನು ಪೂರೈಸಿಕೊಳ್ಳಬಹುದು. ಈ ಸಂದರ್ಭದಲ್ಲಿ ನಾನು ಮನೆಗಾಗಲಿ ರಾಷ್ಟ್ರಕ್ಕಾಗಲಿ ಸೇವೆ ಸಲ್ಲಿಸಿದಂತಲ್ಲ. ಅಥವಾ ನನ್ನ ನಿರ್ವಾಹಕ್ಕಾಗಿ ಮತ್ತು ನನ್ನನ್ನು ನಂಬಿರುವವರ ನಿರ್ವಾಹಕ್ಕಾಗಿ ದುಡಿಯಲೆಂದೇ ದೇವರು ನನಗೆ ಕೈಕಾಲುಗಳನ್ನು ಕೊಟ್ಟಿದಾನೆ— ಎಂದು ಮನಗಾಣಬಹುದು. ಆಗ ಕೂಡಲೇ ನಾನು ನನ್ನ ಬಾಳನ್ನು ಸರಳಗೊಳಿಸುವೆ, ನಾನು ಯಾರನ್ನು ಪ್ರತ್ಯಕ್ಷವಾಗಿ ಮುಟ್ಟಬಲ್ಲೆನೋ ಅವರದನ್ನೂ ಸರಳಗೊಳಿಸುವೆ. ಈ ಸಂದರ್ಭದಲ್ಲಿ ಬೇರಾರಿಗೂ ತೊಂದರೆ ಕೊಡದೆ ಮನೆಗೆ ಸೇವೆಗೈಯುವೆ. ಎಲ್ಲರೂ ಇಂಥ ಬಾಳುವೆ ನಡೆಸಿದರೆ ತತ್‌ಕ್ಷಣದಲ್ಲೇ ಒಂದು ಆದರ್ಶಸ್ಥಿತಿ ಬಂದೀತು. ಆ ಸ್ಥಿತಿಯನ್ನು ಎಲ್ಲರೂ ಏಕಕಾಲದಲ್ಲೇ ತಲುಪರು. ಆ ಸತ್ಯವನ್ನು

ಮನಗಂಡಂಥವರು ಹಲವರು ಅದನ್ನು ಕೃತಿಗಿಳಿಸಿದರೆ ಆ ಸುದಿನದ ಆಗಮನ ವನ್ನು ನಿರೀಕ್ಷಿಸಿ ತ್ವರೆಗೊಳಿಸಬಲ್ಲೆವು ಇತರ ದೇಶಗಳನ್ನು ಬಿಟ್ಟು ಭಾರತಕ್ಕೆ ಸೇವೆಗೈಯುವುದೆಂದು ತೋರುವ ಬಾಳಿನ ಈ ಯೋಜನೆಯ ಪ್ರಕಾರ ನಾನು ಬೇರಾವ ರಾಷ್ಟ್ರಕ್ಕೂ ಹಾನಿಯನ್ನೆಸಗೆ. ದೇಶಾಭಿಮಾನ ವ್ಯಾವರ್ತಕವೂ ಹೌದು, ವ್ಯಾಪಕವೂ ಹೌದು. ತೀರಾ ವಿನಮ್ರನಾಗಿ ನನ್ನ ಜನ್ಮಭೂಮಿಗೆ ನನ್ನ ಗಮನವನ್ನು ಮೀಸಲಿಡುತ್ತೇನೆ—ಹೀಗೆ ಅದು ವ್ಯಾವರ್ತಕ. ನನ್ನ ಸೇವೆ ಯಾವುದಕ್ಕೂ ವಿರುದ್ಧವಲ್ಲ, ಸ್ಪರ್ಧಾತ್ಮಕವಲ್ಲ—ಆದುದರಿಂದ ಆ ರೀತಿ ಅದು ವ್ಯಾಪಕ. ನಿನ್ನದೆಂಬುದನ್ನು ಪರರ ವಸ್ತುವೆಂದು ತಿಳಿ, ಅಂತೆಯೇ ಅದನ್ನು ಬಳಸು—ಎಂಬುದು ಕೇವಲ ನ್ಯಾಯಸೂತ್ರವಷ್ಟೇ ಅಲ್ಲ, ಜೀವನದ ಒಂದು ಭವ್ಯ ಸಿದ್ಧಾಂತವೂ ಹೌದು. ಅಹಿಂಸೆಯ ಅಥವಾ ಪ್ರೇಮತತ್ತ್ವದ ಸರಿಯಾದ ಆಚರಣೆಗೆ ಅದೊಂದು ಪರಿಹಾರಸೂತ್ರ.೧೯

ನಮ್ಮ ದೇಶಭಾಷೆಗಳ ಬಗ್ಗೆ ನಮಗೆ ಆದರವಿಲ್ಲ, ನಮ್ಮ ಬಟ್ಟೆಬರೆ ನಮಗೆ ಬೇಡ, ನಮ್ಮ ಉಡಿಗೆತೊಡಿಗೆ ಅಸಹ್ಯ, ಪವಿತ್ರಶಿಖೆ ಧರಿಸಲು ನಾಚಿಕೆ, ನಮ್ಮ ಊಟ ನಮಗೆ ಅರುಚಿಕರ, ನಮ್ಮ ಹವಾಗುಣ ಸಾಕಷ್ಟು ಒಳ್ಳೆಯದಲ್ಲ, ನಮ್ಮ ಜನ ಕೊಳಕರು, ಸಹವಾಸಕ್ಕೆ ಅಯೋಗ್ಯರು, ನಮ್ಮ ಸಭ್ಯತೆ ದೋಷ ಪೂರ್ಣ, ಒಟ್ಟಿನಲ್ಲಿ ದೇಶೀಯವಾದುದೆಲ್ಲ ಕೆಟ್ಟುದು, ಪರದೇಶಿಯೆಲ್ಲ ಸುಂದರ ಎಂದಾದರೆ 'ಸ್ವರಾಜ್ಯ'ದ ಅರ್ಥ ಏನಾದೀತೆಂಬುದನ್ನು ನಾನರಿಯೆ. ಪರದೇಶೀಯವಾದುದೆಲ್ಲವನ್ನೂ ಅನುಸರಿಸಬೇಕಾಗಿದ್ದಲ್ಲಿ ನಾವು ಬಹುಕಾಲ ವಿದೇಶೀ ಪ್ರಭುತ್ವದ ಅಡಿಯಲ್ಲಿಯೇ ಉಳಿಯಬೇಕಾದೀತು, ಏಕೆಂದರೆ ವಿದೇಶೀ ಸಭ್ಯತೆ ನಮ್ಮ ಜನತೆಯಲ್ಲೆಲ್ಲ ವ್ಯಾಪಿಸಿಲ್ಲವಲ್ಲ. ನಾವು 'ಸ್ವರಾಜ್ಯ'ದ ಮಹತ್ವವನ್ನು ಮನಗಾಣುವವರೆಗೆ ಸ್ವದೇಶಿಯ ಬಗ್ಗೆ ಕೇವಲ ಪ್ರೇಮವಲ್ಲ, ಭಾವಾವೇಶಪೂರಿತ ಭಾವನೆಯೇ ಇರಬೇಕೆನಿಸುತ್ತದೆ ನನಗೆ. ನಮ್ಮ ಪ್ರತಿ ಯೊಂದು ಕೃತಿಗೂ ಸ್ವದೇಶಿಯ ಮುದ್ರೆ ಬಿದ್ದಿರಬೇಕು. ರಾಷ್ಟ್ರೀಯವಾದುದರಲ್ಲಿ ಬಹುಭಾಗ ಒಟ್ಟಿನಲ್ಲಿ ಒಳ್ಳೆಯದು—ಎಂಬ ಗ್ರಹಿಕೆಯ ಆಧಾರದ ಮೇಲೆಯೇ ಸ್ವರಾಜ್ಯದ ನಿರ್ಮಾಣ ಸಾಧ್ಯ. ಈ ಅಭಿಪ್ರಾಯ ಸರಿಯೆಂದಾದರೆ ಸ್ವದೇಶೀ ಆಂದೋಲನವನ್ನು ತೀವ್ರವಾಗಿ ಮುಂದುವರಿಸಬೇಕಾದೀತು. ಸ್ವರಾಜ್ಯ ಚಳುವಳಿಯನ್ನು ನಡೆಸಿರುವ ಪ್ರತಿಯೊಂದು ದೇಶವೂ ಸ್ವದೇಶೀ ಭಾವನೆಯನ್ನು

ಪೂರಾ ಮನಗಂಡಿದೆ. ಸ್ಕಾಟ್ಲೆಂಡಿನ ಮಲೆನಾಡಿಗರು ತಮ್ಮ ಜೀವಕ್ಕೆ ಅಪಾಯವಿದ್ದರೂ ತಮ್ಮ ಗಿಡ್ಡು ಲಂಗದ ಉಡಿಗೆ ಬಿಡರು. ನಾವು ವಿನೋದಕ್ಕೆ ಅವರನ್ನು ಗಿಡ್ಡು ಲಂಗದ ದಳದವರು ಎಂದು ಕರೆಯುತ್ತೇವೆ. ಆ ತೊಡಿಗೆಯ ಹಿಂದಣ ಬಲಕ್ಕೆ ಇಡೀ ಜಗತ್ತೇ ಸಾಕ್ಷಿ ನುಡಿಯುತ್ತದೆ. ಸ್ಕಾಟ್ಲೆಂಡಿನ ಮಲೆನಾಡಿಗರಂತೂ ಅದು ಅನುಕೂಲದ ತೊಡಿಗೆಯಾದರೂ, ಶತ್ರುವಿನ ಏಟಿಗೆ ಸುಲಭವಾಗಿ ಗುರಿಮಾಡುವಂಥದಾದರೂ ಅದನ್ನು ಅವರು ಬಿಡರು. ನಮ್ಮ ದೋಷಗಳನ್ನು ಬಚ್ಚಿಟ್ಟುಕೊಳ್ಳಬೇಕೆಂಬುದು ಈ ವಾದ ಬೆಳೆಸುವ ಉದ್ದೇಶ್ಯ ಅಲ್ಲ, ನಮ್ಮದಕ್ಕಿಂತ ಹೆಚ್ಚು ಇಷ್ಟವಲ್ಲದುದಾದರೂ ರಾಷ್ಟ್ರೀಯವಾದುದನ್ನು, ನಮ್ಮ ಸಭ್ಯತೆಯಲ್ಲಿ ಇಲ್ಲದುದನ್ನು ನಮ್ಮ ಯೋಗ್ಯ ಪ್ರಯತ್ನದಿಂದ ಪೂರೈಸಿ ಕೊಳ್ಳಬಹುದೆಂದೇ ಇದರ ಅರ್ಥ.೨೦

ಸ್ವದೇಶಿಗೆ ನನ್ನ ವ್ಯಾಖ್ಯೆ ಸುಪರಿಚಿತ. ನಿಕಟತಮ ನೆರೆಯವನನ್ನು ಬಲಿಗೊಟ್ಟು ದೂರದ ನೆಂಟನ ಸೇವೆ ಮಾಡತಕ್ಕದ್ದಲ್ಲ. ಅದು ಎಂದೂ ಪ್ರತೀಕಾರಾತ್ಮಕವಾದುದಲ್ಲ, ದಂಡನೆಯ ತೆರನೂ ಅಲ್ಲ. ಯಾವ ಅರ್ಥದಲ್ಲೂ ಅದು ಸಂಕುಚಿತವಲ್ಲ, ಏಕೆಂದರೆ ನನ್ನ (ವಿಕಾಸಕ್ಕೆ) ಬೆಳವಣಿಗೆಗೆ ಅಗತ್ಯ ವಾದುದನ್ನು ಜಗತ್ತಿನ ಎಲ್ಲೆಡೆಯಿಂದಲೂ ನಾ ಕೊಳ್ಳುತ್ತೇನೆ. ಎಷ್ಟೇ ಚೆನ್ನಾದುದಿರಲಿ, ಸುಂದರವಾದುದಿರಲಿ ನನ್ನ ಬೆಳವಣಿಗೆಗೆ ಬಾಧಕವೆಂದು ತೋರಿದರೆ, ನನ್ನ ಮೊದಲ ಗಮನಕ್ಕೆ ಅರ್ಹರೆಂದು ನಿಸರ್ಗಸಿದ್ಧವಾಗಿ ನಿರ್ಮಿಸಲ್ಪಟ್ಟಿರುವವರಿಗೆ ಘಾತುಕವಾದುದಾದರೆ ಯಾರಿಂದಲೂ ಏನನ್ನೂ ನಾ ಕೊಳ್ಳಲಾರೆ. ಜಗತ್ತಿನ ಎಲ್ಲ ಕಡೆಯಿಂದಲೂ ಪ್ರಯೋಜನಕರವಾದ ಸ್ವಸ್ಥಸಾಹಿತ್ಯವನ್ನು ನಾ ಕೊಳ್ಳುತ್ತೇನೆ. ಶಸ್ತ್ರಚಿಕಿತ್ಸೆಯ ಉಪಕರಣಗಳನ್ನು ಇಂಗ್ಲೆಂಡಿನಿಂದ, ಗುಂಡುಸೂಜಿ ಪೆನ್ಸಿಲುಗಳನ್ನು ಆಸ್ಟ್ರಿಯದಿಂದ ಮತ್ತು ಗಡಿಯಾರಗಳನ್ನು ಸ್ವಿಡ್ಜರ್ಲೆಂಡಿನಿಂದ ಕೊಳ್ಳುತ್ತೇನೆ. ಆದರೆ ಇಂಗ್ಲೆಂಡಿ ನಿಂದಾಗಲಿ ಜಪಾನಿನಿಂದಾಗಲಿ ಅಥವಾ ಜಗತ್ತಿನ ಯಾವುದೇ ದೇಶದಿಂದಾಗಲಿ ಒಂದು ಅಂಗುಲ ಅತಿ ಉತ್ತಮ ಹತ್ತಿಬಟ್ಟೆಯನ್ನೂ ನಾ ಕೊಳ್ಳುವುದಿಲ್ಲ, ಏಕೆಂದರೆ ಅದು ಕೋಟಿಗಟ್ಟಲೆ ಭಾರತೀಯರಿಗೆ ಘಾತವುಂಟುಮಾಡಿದೆ, ಹೆಚ್ಚು ಹೆಚ್ಚು ಮಾಡುತ್ತಿದೆ, ಭಾರತದಲ್ಲಿ ಕೈನೂಲಿನಿಂದಾದ ಬಟ್ಟೆಗಿಂತ ವಿದೇಶೀ ವಸ್ತ್ರ ಉತ್ಕೃಷ್ಟವಾದುದಿದ್ದರೂ ಸಹ ಭಾರತದ ಕೋಟ್ಯಂತರ ಬಡ,

ದಿವಾಳಿ ಜನತೆ ನೂತು, ನೇದು ತಯಾರಿಸಿದ ಅರಿವೆಯನ್ನು ಕೊಳ್ಳಲು ನಿರಾಕರಿಸುವುದು ಪಾಪಕರವೆಂದು ನನ್ನೆಣಿಕೆ. ಆದುದರಿಂದ ನನ್ನ ಸ್ವದೇಶಿಗೆ ಕೈಯಿಂದಾದ ಖಾದಿಯೇ ಕೇಂದ್ರಬಿಂದು, ಭಾರತದಲ್ಲಿ ತಯಾರಾಗಬಲ್ಲ, ತಯಾರಾಗುತ್ತಿರುವ ಎಲ್ಲ ಬಟ್ಟೆಗೂ ಅದು ವಿಸ್ತರಿಸಲ್ಪಡುತ್ತದೆ. ನನ್ನ ರಾಷ್ಟ್ರ ಪ್ರೇಮ ನನ್ನ ಸ್ವದೇಶಿಯಷ್ಟೇ ವಿಶಾಲ. ಇಡೀ ಜಗತ್ತಿಗೇ ಲಾಭವಾಗಲೆಂದು ನಾನು ಭಾರತದ ಅಭ್ಯುದಯವನ್ನು ಬಯಸುತ್ತೇನೆ. ಇತರ ದೇಶಗಳ ವಿನಾಶದಮೇಲೆ ಭಾರತ ಏಳಬೇಕೆಂದು ನನ್ನ ಬಯಕೆಯಲ್ಲ. ಆದುದರಿಂದ ಭಾರತ ಶಕ್ತಿಶಾಲಿಯೂ ಸಮರ್ಥವೂ ಆದುದಾದರೆ ಜಗತ್ತಿಗೆ ಅದು ತನ್ನ ಕಲೆಯ ನಿಧಿಯನ್ನೂ ಆರೋಗ್ಯಕಾರಕ ಮಸಾಲೆ(ಸಾಂಬಾರದ)ವಸ್ತುಗಳನ್ನೂ ಕೊಟ್ಟೀತು, ಭಾರತಕ್ಕೆ ಹೆಚ್ಚಿನ ಆರ್ಥಿಕ ಲಾಭ ತಂದುಕೊಟ್ಟರೂ ಅಫೀಮ ನ್ನಾಗಲಿ ಮಾದಕ ದ್ರಾವಕಗಳನ್ನಾಗಲಿ ಅದು ಜಗತ್ತಿಗೆ ಕೊಡದು ೨೧

ತನ್ನ ನೆರೆಯವನಿಗೆ ಮನುಷ್ಯನ ಪ್ರಥಮ ಕರ್ತವ್ಯ ಮೀಸಲು. ವಿದೇಶೀ ಯನ ದ್ವೇಷ, ಸ್ವರಾಷ್ಟ್ರೀಯರ ಬಗ್ಗೆ ಪಕ್ಷಪಾತ ಇದರಲ್ಲಿ ಅಡಕವಾಗಿಲ್ಲ. ನಮ್ಮ ಸೇವೆಯ ಸಾಮರ್ಥ್ಯಕ್ಕಂತೂ ಪರಿಮಿತಿಗಳಿದ್ದೇ ಇವೆ. ನಮ್ಮ ನೆರೆಯವನ ಸೇವೆಗೈಯುವುದೂ ಸ್ವಲ್ಪ ಕಷ್ಟದಿಂದಲೇ. ನಮ್ಮಲ್ಲಿ ಪ್ರತಿ ಯೊಬ್ಬರೂ ನಮ್ಮ ನೆರೆಯವನಿಗೆ ನಮ್ಮ ಕರ್ತವ್ಯವನ್ನು ಸರಿಯಾಗಿ ಸಲ್ಲಿಸಿದೆ ವಾದರೆ ಜಗತ್ತಿನಲ್ಲಿ ಸಹಾಯದ ಅಗತ್ಯವುಳ್ಳವರು ಯಾರೂ ಲಕ್ಷಿಸಲ್ಪಡದೆ ಉಳಿಯುವುದಿಲ್ಲ. ಆದುದರಿಂದ ತನ್ನ ನೆರೆಯವನ ಸೇವೆಗೈಯುವವ ಇಡೀ ಜಗತ್ತಿನ ಸೇವೆಯನ್ನೇ ಗೈಯುವ. ತನ್ನವರು–ಪರರು ಎಂಬ ಭೇದಕ್ಕೆ ನಿಜವಾಗಿ ಅವಕಾಶವೆ ಇಲ್ಲ ಸ್ವದೇಶಿಯಲ್ಲಿ. ನೆರೆಯವನಿಗೆ ಸೇವೆಸಲ್ಲಿಸುವುದೇ ಲೋಕದ ಸೇವೆ. ಲೋಕಸೇವೆಯ ಮಾರ್ಗ ಅದೊಂದೇ. ಇಡೀ ಜಗತ್ತೇ ತನ್ನ ಮನೆ ಎಂದು ತಿಳಿದವನಿಗೆ ತನ್ನ ಸ್ಥಳ ಬಿಡದೆ ವಿಶ್ವದ ಸೇವೆ ಮಾಡುವ ಸಾಮರ್ಥ್ಯ ಇರಬೇಕು. ಈ ಶಕ್ತಿಯನ್ನು ಆತ ತನ್ನ ನೆರೆಯವನ ಸೇವೆಯ ಮೂಲಕವೇ ಬಳಸಬಲ್ಲ. ಟಾಲ್‌ಸ್ಟಾಯ್ ಇನ್ನೂ ಮುಂದೆ ಹೋಗುತ್ತಾನೆ: ಇತರರ ಹೆಗಲ ಮೇಲೆ ನಾವು ಸವಾರಿ ಮಾಡುತ್ತಿದೇವೆ, ಅಲ್ಲಿಂದ ಕೆಳಗಿಳಿದು ಬಿಟ್ಟರೇ ಸಾಕು—ಎನ್ನುತ್ತಾನೆ ಆತ. ಅದೇ ಮಾತನ್ನು ಹೇಳುವ ಇನ್ನೊಂದು ಬಗೆ ಇದು. ತನ್ನ ಸೇವೆಯನ್ನೇ ಮಾಡಿಕೊಳ್ಳದೆ ಯಾವನೂ ಇತರರ ಸೇವೆ

ಮಾಡಲಾರ — ಇತರರ ಸೇವೆಗೈಯದೆ ತನ್ನ ಸ್ವಂತ ಹಿತ ಸಾಧಿಸಲು ಯತ್ನಿಸುವವ ತನಗೂ ಲೋಕಕ್ಕೂ ಹಾನಿ ಉಂಟುಮಾಡುತ್ತಾನೆ. ಕಾರಣ ಸ್ಪಷ್ಟವಿದೆ. ಸಮಸ್ತ ಜೀವರಾಶಿಯೂ ಒಬ್ಬರಿನ್ನೊಬ್ಬರ ಅಂಶ, ಒಬ್ಬನ ಯಾವುದೇ ಕೃತಿ ಒಳ್ಳೆಯ ಅಥವಾ ಕೆಟ್ಟ ಪ್ರಭಾವವನ್ನು ಇಡೀ ಜಗತ್ತಿನ ಮೇಲೆ ಬೀರಬೇಕು. ಸಂಕುಚಿತ ದೃಷ್ಟಿಯ ನಮಗೆ ಇದು ಗೋಚರವಾಗದು. ಒಬ್ಬ ವ್ಯಕ್ತಿಯ ಕೃತಿ ಜಗತ್ತಿನ ಮೇಲೆ ಉಂಟುಮಾಡುವ ಪರಿಣಾಮ ತೀರಾ ಕ್ಷುಲ್ಲಕ, ಅಗಣನೀಯವಿರಬಹುದು. ಆದರೆ ಅದರ ಪ್ರಭಾವವಂತೂ ಇದ್ದೇ ಇರುತ್ತದೆ, ಆ ಸತ್ಯದ ಅರಿವು, ಎಚ್ಚರ ನಮ್ಮ ಹೊಣೆಯನ್ನು ತಿಳಿಯುವಂತೆ ಮಾಡುತ್ತದೆ.

ಆದುದರಿಂದ ಸ್ವದೇಶೀ ಪರದೇಶೀಯನಿಗೆ ಯಾವುದೇ ಹಾನಿಯನ್ನು ಒಳಗೊಳ್ಳದು. ಆದರೂ ಸ್ವದೇಶೀ ಎಲ್ಲೆಡೆಗೂ ಪಸರಿಸಲಾರದು, ಸ್ವಾಭಾವಿಕವಾಗಿಯೇ ಅದು ಅಶಕ್ಯ. ಇಡೀ ಲೋಕದ ಸೇವೆ ಮಾಡುವ ಯತ್ನದಲ್ಲಿ ಜಗತ್ತಿಗೂ ಸೇವೆಸಲ್ಲಿಸಲಾರ, ನೆರೆಯವನಿಗೂ ಸೇವೆಸಲ್ಲಿಸಲಾರ. ನೆರೆಯವನಿಗೆ ಸೇವೆಸಲ್ಲಿಸುವಾಗ ಪರಿಣಾಮತಃ ಜಗತ್ತಿಗೇ ಸೇವೆಯನ್ನು ಸಲ್ಲಿಸುತ್ತಾನೆ. ತನ್ನ ನೆರೆಯವನ ಸೇವೆಗೈದಾತನಿಗೆ ಮಾತ್ರ 'ಎಲ್ಲರೂ ನನ್ನ ಸ್ವಜನರೇ' ಎಂದು ಹೇಳಿಕೊಳ್ಳುವ ಹಕ್ಕುಂಟು. 'ಎಲ್ಲರೂ ನನ್ನವರೇ' ಎಂದು ಹೇಳಿ ನೆರೆಯವನನ್ನು ಅಲಕ್ಷಿಸಿ ಸ್ವಭೋಗದಲ್ಲಿ ನಿರತನಾದವನು ತನ್ನ ಮಟ್ಟಿಗೆ ಮಾತ್ರ ಬದುಕಿದ್ದಾನು.

ಕೆಲ ಸಜ್ಜನರು ತಮ್ಮ ಊರನ್ನೇ ಬಿಟ್ಟು ಜಗದಾದ್ಯಂತ ಸಂಚರಿಸಿ ತಮ್ಮ ನೆರೆಯವರಲ್ಲದವರ ಸೇವೆಗೈಯುವುದನ್ನು ನಾವು ಕಾಣುತ್ತೇವೆ. ಅವರೇನೂ ತಪ್ಪೆಸಗರು. ಸ್ವದೇಶೀ ನಿಯಮಕ್ಕೆ ಅವರದೇನೂ ಅಪವಾದರೂಪವಲ್ಲ. ಅವರ ಸೇವೆಯ ಸಾಮರ್ಥ್ಯ ಮಾತ್ರ ಹೆಚ್ಚು. ಒಬ್ಬನಿಗೆ ತನ್ನ ಪಕ್ಕದ ಮನೆಯವನೇ ನೆರೆಯವ, ಇನ್ನೊಬ್ಬನಿಗೆ ಇಡೀ ಹಳ್ಳಿಯೇ ನೆರೆ; ಮತ್ತೊಬ್ಬನಿಗೆ ಸುತ್ತಲಿನ ಹತ್ತೂ ಹಳ್ಳಿಗಳೂ ಅವನ ನೆರೆ. ಹೀಗೆ ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಅವರವರ ಸೇವೆ. ಸಾಮಾನ್ಯ ಮನುಷ್ಯ ಅಸಾಮಾನ್ಯ ಕೆಲಸ ಮಾಡಲಾರ. ಅವನನ್ನು ದೃಷ್ಟಿಯಲ್ಲಿಟ್ಟುಕೊಂಡೇ ವ್ಯಾಖ್ಯೆಗಳನ್ನು ಮಾಡಲಾಗುತ್ತದೆ, **ಅವುಗಳ ಭಾವಕ್ಕೆ ವಿರುದ್ಧವಲ್ಲದುದೆಲ್ಲವನ್ನೂ ಅವು ಒಳಗೊಂಡಿರುತ್ತವೆ.**

ಸ್ವದೇಶಿಯ ನಿಯಮ ಪಾಲಿಸುವಾಗ ಸಾಮಾನ್ಯ ಮನುಷ್ಯ ಬೇರಾರಿಗೂ ತಾನು ಸೇವೆ ಸಲ್ಲಿಸುತ್ತಿರುವುದಾಗಿ ತಿಳಿಯುವುದಿಲ್ಲ. ತನಗೆ ಅನುಕೂಲ, ಆದಕಾರಣ ತನ್ನ ನೆರೆಯ ಉತ್ಪಾದಕನ ಬಳಿ ವ್ಯವಹರಿಸುತ್ತಾನೆ. ಇದು ಅನಾನುಕೂಲವೂ ಆಗಬಹುದಾದ ಸಂದರ್ಭ ಬರಬಹುದು. ಸ್ವದೇಶೀ ಜೀವನನಿಯಮವೆಂದು ಅರಿತವ ಅಂಥ ಸಂದರ್ಭಗಳಲ್ಲಿಯೂ ಅದನ್ನು ಪಾಲಿಸುತ್ತಾನೆ. ಭಾರತದಲ್ಲಿ ತಯಾರಾಗುವ ವಸ್ತುಗಳ ಗುಣದ ಬಗ್ಗೆ ಇಂದು ನಮ್ಮಲ್ಲಿ ಎಷ್ಟೋ ಜನರಿಗೆ ತೃಪ್ತಿ ಇಲ್ಲ, ವಿದೇಶೀ ವಸ್ತುಗಳನ್ನು ಕೊಳ್ಳುವ ಸೆಳವೂ ಉಂಟಾಗುತ್ತದೆ. ಆದುದರಿಂದ ಸ್ವದೇಶೀ ಕೇವಲ ನಮ್ಮ ಅನುಕೂಲವನ್ನು ಮಾತ್ರ ಪೂರೈಸದು, ಅದೊಂದು ಜೀವನನಿಯಮ—ಎಂದು ಹೇಳಬೇಕಾದುದು ಅಗತ್ಯ. ವಿದೇಶೀಯನನ್ನು ದ್ವೇಷಿಸುವುದಕ್ಕೂ ಸ್ವದೇಶಿಗೂ ಯಾವುದೂ ಸಂಬಂಧವಿಲ್ಲ. ಇತರರಿಗೆ ಕೇಡು ಬಯಸುವುದು, ಎಸಗುವುದು ಎಂದೂ ಯಾರಿಗೂ ಧರ್ಮವಾಗದು.

ಸ್ವದೇಶಿಯ ಸಂಕೇತವಾಗಿ (ಪ್ರತಿಮಾರೂಪವಾಗಿ) ಖಾದಿಯ ಕಲ್ಪನೆ, ಏಕೆಂದರೆ ಅದನ್ನು ತೊರೆದು ಭಾರತ ಹೇಯ ಅಪರಾಧವೊಂದನ್ನು ಎಸಗಿದೆ, ಅದರಿಂದಾಗಿ ತನ್ನ ಸಹಜ ಧರ್ಮದ ಆಚರಣೆಯನ್ನು ತ್ಯಜಿಸಿದೆ.

ಖಾದಿ ಮತ್ತು ನೂಲುವ ರಾಟೆಯ ಮಹತ್ವ ನನಗೆ ಮೊಟ್ಟಮೊದಲು ೧೯೦೮ರಲ್ಲಿ ಅರಿವಾಯಿತು, ಆಗ ನನಗೆ ರಾಟೆಯ ಕಲ್ಪನೆಯೇ ಇರಲಿಲ್ಲ, ರಾಟೆಗೂ ಮಗ್ಗಕ್ಕೂ ಇರುವ ವ್ಯತ್ಯಾಸವೂ ನನಗೆ ಗೊತ್ತಿರಲಿಲ್ಲ. ಭಾರತದ ಹಳ್ಳಿಗಳ ಸ್ಥಿತಿಗತಿಯ ವಿಷಯದಲ್ಲಿಯೂ ನನ್ನ ಕಲ್ಪನೆ ಮಸಕುಮಸಕಾಗಿತ್ತು, ಆದರೂ ನೂಲುವ ರಾಟೆಯ ನಾಶವೇ ಅವುಗಳ ದಿವಾಳಿತನದ ಮುಖ್ಯಕಾರಣ ಎಂಬುದನ್ನು ಸ್ಪಷ್ಟವಾಗಿ ಕಂಡುಕೊಂಡೆ. ಭಾರತಕ್ಕೆ ಮರಳಿದಾಗ ಅದನ್ನು ಪುನರುದ್ಧರಿಸಲು ಯತ್ನಿಸಬೇಕೆಂದುಕೊಂಡೆ.೨೨

ಸ್ವದೇಶಿ ಈ ಯುಗದ ಮಹಾವ್ರತ. ಪ್ರಕೃತಿಯ ನಿಯಮಗಳಂತೆಯೇ ಆತ್ಮದ ನಿಯಮಗಳಿಗೂ ಯಾವ ಶಾಸನವೂ ಅಗತ್ಯವಿಲ್ಲ, ಅವು ಸ್ವಯಂಭೂ, ಸ್ವಯಂಪ್ರವರ್ತಿತ. ಅಜ್ಞಾನದಿಂದಲೋ, ಬೇರೆ ಕಾರಣದಿಂದಲೋ ಮನುಷ್ಯ ಈ ಧರ್ಮಗಳನ್ನು ಎಷ್ಟೋ ಸಾರಿ ಅಸಡ್ಡೆಮಾಡುತಾನೆ, ಉಲ್ಲಂಘಿಸುತ್ತಾನೆ.

ಸ್ವದೇಶಿ ಮನುಷ್ಯನ ಮೂಲ ಸ್ವಭಾವದಲ್ಲಿ ಅಡಕವಾಗಿರುವ ನಿಯಮ, ಆದರೆ ಅದು ಇಂದು ಮರೆತುಹೋಗಿದೆ.

ಅದರ ಕಟ್ಟಕಡೆಯ ಆಧ್ಯಾತ್ಮಿಕ ಅರ್ಥ, ಸಮಸ್ತ ಸ್ಥೂಲ ಸಂಬಂಧ ಗಳಿಂದಲೂ ಆತ್ಯಂತಿಕ ಮುಕ್ತಿ, ದೇಹವೂ ಆತ್ಮಕ್ಕೆ ಪರದೇಶಿಯೇ. ಬೇರೆ ಆತ್ಮದೊಡನೆ ಏಕರೂಪವಾಗಲು ಈ ದೇಹ ಅಡ್ಡಿ. ಆತ್ಮದ ದಾರಿಯಲ್ಲಿ ಇದು ಅಡಚಣೆ, ಆತಂಕ. ಸಮಸ್ತ ಜೀವರಾಶಿಯೊಡನೆ ಐಕ್ಯವನ್ನು ಸಾಧಿಸುತ್ತ ಸ್ವದೇಶೀ ಧರ್ಮವನ್ನು ಅರಿತು ಅನುಸರಿಸುವ ಸಾಧಕ ದೇಹವನ್ನೂ ತ್ಯಜಿಸುತ್ತಾನೆ, ದೇಹಮುಕ್ತಿಯನ್ನೂ ಪಡೆಯಲೆಳಸುತ್ತಾನೆ.

ಸ್ವದೇಶಿಗೆ ಈ ಅರ್ಥ ಸರಿಯೆಂದರೆ ನಮ್ಮ ಹತ್ತಿರದ ನೆರೆಹೊರೆಯವರ ಸೇವೆಯಲ್ಲಿ ನಿರತರಾಗಬೇಕಾದುದೇ ನಮ್ಮ ಪ್ರಥಮ ಧರ್ಮವೆಂಬುದು ಸುಲಭ ವಾಗಿ ತಿಳಿದೀತು. ನೆರೆಹೊರೆಯವರಿಗೆ ಸೇವೆ ಮಾಡುವಾಗ ದೂರದಲ್ಲಿರು ವವರನ್ನು ಕೈಬಿಟ್ಟಂತಾಯಿತು, ಅವರಿಗೆ ಹಾನಿಯಾಯಿತು ಎನಿಸುವ ಸಂಭವ ಇದೆ. ಇದು ಬರೀ ಆಭಾಸ. ನೆರೆಯವರಿಗೆ ಎಸಗಿದ ಶುದ್ಧಸೇವೆ ಸ್ವಾಭಾವಿಕ ವಾಗಿಯೇ ದೂರದವರಿಗೆ ಅಪಕಾರವಾಗಿ ಪರಿಣಮಿಸದು, ತದ್ವಿರುದ್ಧವೇ ಆದೀತು. 'ಯಥಾ ಪಿಂಡೇ ತಥಾ ಬ್ರಹ್ಮಾಂಡೇ' — ಇದು ಸೋಲರಿಯದ ತತ್ತ್ವ. ಅದನ್ನು ಚೆನ್ನಾಗಿ ಮನದಟ್ಟು ಮಾಡಿಟ್ಟುಕೊಳ್ಳಬೇಕು. ಇದಕ್ಕೆ ವಿರುದ್ಧವಾಗಿ 'ದೂರದ ದೃಶ್ಯ'ಕ್ಕೆ ಮರುಳಾಗಿ ಪ್ರಪಂಚದ ಒಂದು ಮೂಲೆ ಯಿಂದ ಇನ್ನೊಂದು ಮೂಲೆಗೆ ಹೋದರೆ ಆತನ ಆಕಾಂಕ್ಷೆಯಂತೂ ಈಡೇರದು, ಜತೆಗೆ ಆತ ತನ್ನ ನೆರೆಯವರಿಗೆ ತನ್ನ ಕರ್ತವ್ಯ ಸಲ್ಲಿಸಿದಂತೆಯೂ ಆಗದು. ನಾನಿರುವೆಡೆ ನನ್ನ ನೆರೆಹೊರೆಯಲ್ಲಿ ಕೆಲಜನರಿದಾರೆ, ನನ್ನ ಬಂಧುಬಳಗ, ನನ್ನನ್ನು ನಂಬಿದವರು ಕೆಲವರು. ಸ್ವಾಭಾವಿಕವಾಗಿ ಅವರು ನನ್ನಿಂದ ಆಸರೆ, ಆಧಾರ ಪಡೆಯಲು ತಮಗೊಂದು ಹಕ್ಕಿದೆಯೆಂದು ಭಾವಿಸುತ್ತಾರೆ. ಅವರಿಗೆ ಆ ಹಕ್ಕು ಉಂಟು. ಅವರನ್ನೆಲ್ಲ ಇದ್ದಕ್ಕಿದ್ದಂತೆಯೇ ಬಿಟ್ಟು ದೂರದವರ ಸೇವೆಗೆ ನಾ ಹೊರಟೆನೆನ್ನಿ. ನನ್ನ ಆ ನಿರ್ಧಾರದಿಂದ ನನ್ನ ನೆರೆಹೊರೆಯ, ಅವಲಂಬಿತರ ಆ ಸಣ್ಣ ಜಗತ್ತನ್ನು ತಲೆಕೆಳಗು ಮಾಡೀತು, ದೂರದವರಿಗೆ ನನ್ನ ಅನಪೇಕ್ಷಿತ ಸೇವೆಸಲ್ಲುವುದಂತೂ ಇರಲಿ, ಆ ಹೊಸ ಸ್ಥಳದ ವಾತಾವರಣ ಕೆಡುವ ಸಂಭವವೇ ಹೆಚ್ಚು. ಹೀಗೆ ನನ್ನ ಹತ್ತಿರದ ನೆರೆಹೊರೆಯವರನ್ನೂ

ನಿಂದಾರ್ಹವಾಗಿ ಅಲಕ್ಷ್ಯ ಮಾಡುತ್ತೇನೆ, ಯಾರಿಗೆ ಸೇವೆ ಮಾಡಬಯಸು ವೆನೋ ಅವರಿಗೆ ಅಪಕಾರವನ್ನೇ ಎಸಗಿಯೇನು, ಸ್ವದೇಶೀ ವ್ರತಭಂಗದ ಪ್ರಥಮ ಫಲ ಇವು.

ಇಂಥ ಎಷ್ಟೋ ದೃಷ್ಟಾಂತಗಳನ್ನು ಕೊಡಬಹುದು. ಅಂತಲೇ ಗೀತೆ: 'ಸ್ವಧರ್ಮೇ ನಿಧನಂ ಶ್ರೇಯಃ, ಪರಧರ್ಮೋ ಭಯಾವಹಃ' ಎಂದು ಹೇಳುತ್ತದೆ. ಭೌತಿಕ ಸನ್ನಿವೇಶಕ್ಕೆ ಇದನ್ನು ಅನ್ವಯಿಸಿದರೆ ಸ್ವದೇಶೀ ನಿಯಮ ನಿಷ್ಪನ್ನವಾಗುತ್ತದೆ. ಸ್ವಧರ್ಮಕ್ಕೆ ಗೀತೆ ಹೇಳಿದ ಮಾತೇ ಸ್ವದೇಶಿಗೂ ಅನ್ವಯಿಸುತ್ತದೆ. ಸ್ವದೇಶಿ ನಮ್ಮ ನಿಕಟ ವಾತಾವರಣಕ್ಕೆ ಅನ್ವಯಿಸುವ ಸ್ವಧರ್ಮ.

ಸ್ವದೇಶೀ ತತ್ತ್ವವನ್ನು ತಪ್ಪಾಗಿ ಅರ್ಥಮಾಡಿಕೊಂಡಾಗಲೆ ಎಲ್ಲಾ ಗೊಂದಲ. ನನ್ನ ಕುಟುಂಬದ ಪೋಷಣೆಗಾಗಿ ಒಳ್ಳೆಯ, ಕೆಟ್ಟ — ಎಲ್ಲ ಮಾರ್ಗದಿಂದಲೂ ಹಣ ಗಳಿಸತೊಡಗಿದೆನೆಂದರೆ ಅದು ಸ್ವದೇಶೀ ತತ್ತ್ವದ ಭಂಗವಾದೀತು. ಕುಟುಂಬಕ್ಕಾಗಿ ನಾನು ಋಜುಮಾರ್ಗದಿಂದ ನ್ಯಾಯವಾಗಿ ಮಾಡಬೇಕಾದುದಕ್ಕಿಂತ ಹೆಚ್ಚನ್ನು ಮಾಡಬಾರದು—ಎನ್ನುತ್ತದೆ ಸ್ವದೇಶಿಯ ನಿಯಮ. ಅದನ್ನು ಮಾಡುವ ಪ್ರಯತ್ನದಲ್ಲಿ ನನಗೆ ವಿಶ್ವಧರ್ಮದ ನಿಯಮ ಅರಿವಾದೀತು. ಸ್ವದೇಶೀ ವ್ರತದ ಪಾಲನೆ ಯಾರಿಗೂ ಕೆಡಕುಂಟುಮಾಡದು, ಹಾಗೇನಾದರೂ ಹಾನಿಯಾದರೆ ನಾವು ಹಿಡಿದುದು ಸ್ವಧರ್ಮವಲ್ಲ, ಅಹಂಕಾರ ವಾದೀತು.

ಸ್ವದೇಶೀ ವ್ರತದ ದೀಕ್ಷೆ ತೊಟ್ಟವ ವಿಶ್ವದ ಸೇವೆಗಾಗಿ ತನ್ನ ಕುಟುಂಬ ವನ್ನು ಬಲಿದಾನ ಕೊಡಲೂ ಬೇಕಾಗಬಹುದು. ಅಂಥ ಆತ್ಮಾರ್ಪಣ ಕೃತಿ ಕುಟುಂಬಕ್ಕೆ ಎಸಗಿದ ಅತ್ಯುನ್ನತ ಸೇವೆ ಎಂದೆನಿಸೀತು. "ತನ್ನನ್ನು ತಾನು ಉಳಿಸಿಕೊಂಡವನು ತನ್ನ ಜೀವ ಕಳೆದುಕೊಂಡಂತೆ, ಪ್ರಭುವಿಗಾಗಿ ಜೀವ ತೆತ್ತವನು ಅದನ್ನು ಪಡೆದಂತೆ"—ವ್ಯಕ್ತಿಗೆ ಅನ್ವಯಿಸುವಂತೆ ಕುಟುಂಬಕ್ಕೂ ಅನ್ವಯಿಸುತ್ತದೆ. ಇನ್ನೊಂದು ನಿದರ್ಶನ: ನಮ್ಮ ಊರಿಗೆ ಪ್ಲೇಗ್ ರೋಗ ಬಂತು. ರೋಗ ತಗುಲಿದವರ ಸೇವೆಗೈಯುತ್ತಾ ನಾನು, ನನ್ನ ಹೆಂಡತಿ ಮಕ್ಕಳು ಎಲ್ಲರೂ ರೋಗಕ್ಕೆ ತುತ್ತಾಗಿ ಸತ್ತೆವೆನ್ನಿ. ಅದರಿಂದ ನಾನು ನನ್ನ ಕುಟುಂಬವನ್ನು ಕೊಂದಂತಾಗಲಿಲ್ಲ, ತದ್ವಿರುದ್ಧ ಕುಟುಂಬದ ಮಿತ್ರನಂತೆ

ವರ್ತಿಸಿದಂತಾಯಿತು. ಸ್ವದೇಶಿಯಲ್ಲಿ ಸ್ವಾರ್ಥಕ್ಕೆ ಎಡೆಯಿಲ್ಲ. ಇದ್ದರೂ ಅದು ಅತ್ಯುನ್ನತ ಬಗೆಯ ಸ್ವಾರ್ಥ, ಪರಮಾರ್ಥದಿಂದ ಅದು ಬೇರೆಯಲ್ಲ. ಅತ್ಯಂತ ಶುದ್ಧ ಸ್ವದೇಶೀ ವಿಶ್ವಸೇವೆಯ ಪರಾಕಾಷ್ಠೆ.

ಈ ವಾದಸರಣಿಯನ್ನು ಅನುಸರಿಸಿಯೇ ಸಮಾಜಕ್ಕೆ ಅನ್ವಯಿಸಿದಂಥ ಸ್ವದೇಶೀ ತತ್ತ್ವದ ಅತ್ಯಗತ್ಯ, ಅತಿಮುಖ್ಯ ಉಪಸಿದ್ಧಾಂತವಾಗಿಯೇ ನಾನು ಖಾದಿಯನ್ನು ಕಂಡುಕೊಂಡೆ. 'ಈ ದೇಶದ ಕೋಟಿಗಟ್ಟಲೆ ಜನರಿಗೆ ಇಂದು ಬೇಕಾದುದು, ಅವರು ಎಲ್ಲರೂ ಸುಲಭವಾಗಿ ಅರ್ಥಮಾಡಿಕೊಳ್ಳುವಂಥದು, ತಿಳಿಯಬಲ್ಲಂಥದು, ಸುಲಭವಾಗಿ ನಡೆಸಬಹುದಾದುದು ಹಾಗೂ ಅರೆಹೊಟ್ಟೆ ಉಣ್ಣುವ ಕೋಟ್ಯಂತರ ಜನರನ್ನು ಬದುಕಿಸಬಲ್ಲುದು ಯಾವುದು ?—ಎಂದು ಕೇಳಿಕೊಂಡೆ. ಉತ್ತರ ಬಂತು: ಖಾದಿ ಅಥವಾ ರಾಟೆಯನ್ನು ಸರ್ವತ್ರ ಗೊಳಿಸುವುದೊಂದೇ ಈ ಎಲ್ಲ ಬೇಡಿಕೆಗಳನ್ನು ಪೂರೈಸಬಲ್ಲುದು.

ಖಾದಿಯ ಮೂಲಕ ನಾವು ಸ್ವದೇಶೀ ಧರ್ಮವನ್ನು ಪಾಲಿಸಿದರೆ ಸ್ವದೇಶದ ಅಥವಾ ಪರದೇಶದ ಗಿರಣಿಗಳವರಿಗೆ ಹಾನಿಯಾದೀತೆಂದು ಯಾರೂ ಭಾವಿಸದಿರಲಿ. ಕಳ್ಳ ತಾನು ಕದ್ದ ಪದಾರ್ಥವನ್ನು ಹಿಂದಕ್ಕೆ ಕೊಟ್ಟರೆ, ಕದಿಯದಂತೆ ಅವನನ್ನು ಪ್ರೇರೇಪಿಸಿದರೆ ಅವನಿಗೇನೂ ನಷ್ಟವಾಗದು, ಲಾಭವೇ ಆಯಿತು ಅವನಿಗೆ. ಒಂದು ಸಂದರ್ಭವಲ್ಲಿ ಬುದ್ಧಿಪೂರ್ವಕವಾಗಿ, ಇನ್ನೊಂದರಲ್ಲಿ ಅರಿವಿಲ್ಲದೆಯೇ. ಹಾಗೆಯೇ ಹೆಂಡ ಕುಡಿಯುವವರು ಹೆಂಡ ವನ್ನು, ಅಫೀಮು ತಿನ್ನುವವರು ಅಫೀಮನ್ನು ಬಿಟ್ಟರೆ ಹೆಂಡದಂಗಡಿಯವನಿಗೆ, ಅಫೀಮಿನ ಅಂಗಡಿಯವನಿಗೆ ನಷ್ಟವೇನೂ ಇಲ್ಲ, ನಿಜವಾದ ಅರ್ಥದಲ್ಲಿ ಅವರಿಗೆ ಲಾಭವೇ. ಈ ಪಾಪದ ಸಂಪಾದನೆ ನಾಶವಾದರೆ ಅವನಿಗಾಗಲಿ ಜಗತ್ತಿಗಾಗಲಿ ಕಿಂಚಿತ್ತೂ ನಷ್ಟವಿಲ್ಲ, ಶುದ್ಧ ಲಾಭವೇ.

ಹೇಗೋ ಒಂದೆಳೆ ದಾರ ನೂತು ಖಾದಿಬಟ್ಟೆ ತೊಟ್ಟರೆ ಸ್ವದೇಶೀ ವ್ರತದ ಆದಿ–ಅಂತ್ಯ ಆಯಿತೆಂದು ತಿಳಿಯುವುದು ಭಾರಿ ಭ್ರಮೆ. ಸಾಮಾಜಿಕ ಸ್ವದೇಶೀ ಧರ್ಮಕ್ಕೆ ಖಾದಿ ಮೊದಲ ಅನಿವಾರ್ಯ ಮೆಟ್ಟಲು. ಬಟ್ಟೆ ಮಾತ್ರ ಖಾದಿ ತೊಟ್ಟು ಉಳಿದೆಲ್ಲ ರುಚಿಯ ವಿಷಯದಲ್ಲೂ ಪರದೇಶಿಯಲ್ಲೇ ಮುಳುಗುವವರು ಅನೇಕರು. ಅವರನ್ನು ಸ್ವದೇಶೀಧರ್ಮಪಾಲಕರೆನ್ನಲಾಗುವುದಿಲ್ಲ. ಅವರು 'ಷೋಕಿ' ಜನ. ಸ್ವದೇಶೀನಿಷ್ಠ ತನ್ನ ನೆರೆಹೊರೆಯನ್ನು ಎಚ್ಚರದಿಂದ

ನಿರೀಕ್ಷಿಸಿ, ಸಾಧ್ಯವಿದ್ದೆಡೆ ನೆರೆಯುವರಿಗೆ ತನ್ನ ನೆರವು ಕೊಟ್ಟು ಅವರು ಕೈಯಿಂದ ಮಾಡಿದ ಪದಾರ್ಥಗಳನ್ನೇ ಕೊಂಡು (ಇತರೆಡೆ ತಯಾರಾದ ವಸ್ತುಗಳಿಗಿಂತ ಗುಣದಲ್ಲಿ ಕಡಿಮೆಯಿದ್ದು, ಬೆಲೆಯಲ್ಲಿ ಹೆಚ್ಚು ತುಟ್ಟಿಯಾಗಿದ್ದರೂ ಸಹ) ಉಪಯೋಗಿಸುತ್ತಾನೆ. ಅವುಗಳಲ್ಲಿ ಇರುವ ದೋಷವನ್ನು ನಿವಾರಿಸಲು ಯತ್ನಿಸಿಯಾನು, ಆದರೆ ಆ ದೋಷಗಳ ದೆಸೆಯಿಂದ ವಿದೇಶೀ ವಸ್ತುಗಳನ್ನು ಕೊಂಡು ಸ್ವದೇಶಿಯನ್ನು ಕೈಬಿಡ.

ಇತರ ಒಳ್ಳೆಯ ವಸ್ತುಗಳಂತೆಯೇ ಸ್ವದೇಶಿಯೂ ಆವುಟವಾಗಿಬಿಟ್ಟರೆ ನಾಶವಾದೀತು. ಆ ಅಪಾಯದಿಂದ ಎಚ್ಚರವಾಗಿರಬೇಕು. ಪರದೇಶದ್ದಾದ ಮಾತ್ರಕ್ಕೇ ಅದನ್ನು ಬಿಡುವುದು, ಸ್ವದೇಶದಲ್ಲಿ ತಯಾರಾಗಲಾಗದ ಅಥವಾ ಬಹುಕಷ್ಟಸಾಧ್ಯವಾದ ಪದಾರ್ಥಗಳನ್ನು ಪರದೇಶದ ಮೇಲಣ ದ್ವೇಷದಿಂದ ಸ್ವದೇಶದಲ್ಲಿ ಮಾಡುತ್ತ ಕೂಡುವುದು ಧರ್ಮವಲ್ಲ, ರಾಷ್ಟ್ರದ ಹಣ-ಕಾಲಗಳ ಅಪವ್ಯಯ, ಅಪರಾಧ, ಸ್ವದೇಶೀಧರ್ಮದ ನಿಷೇಧ. ನಿಜವಾದ ಸ್ವದೇಶೀನಿಷ್ಠ ಪರದೇಶೀಯರನ್ನು ದ್ವೇಷಿಸಲಾರ, ಜಗತ್ತಿನಲ್ಲಿ ಯಾರನ್ನೂ ಹಗೆತನದ ಭಾವದಿಂದ ಕಾಣಲಾರ. ಸ್ವದೇಶೀ ಹಿಂಸಾಧರ್ಮವಲ್ಲ. ನಿಸ್ವಾರ್ಥ ಸೇವೆಯ ತತ್ತ್ವ ಅದು, ಅತಿಶುದ್ಧ ಅಹಿಂಸೆ, ಪ್ರೇಮದಲ್ಲಿ ಹುಟ್ಟಿಬಂದ ಧರ್ಮ.೨೩

ಸ್ವದೇಶಿಯೂ ಸತ್ಯಾಗ್ರಹವೃತ್ತಿ ಹಾಗೂ ಕಾರ್ಯಕ್ರಮದ ಫಲವಲ್ಲವೆ? ಹೌದು, ನಿಸ್ಸಂಶಯವಾಗಿ. ಸ್ವದೇಶೀ ಕೆಲಸವೇ ಎಲ್ಲಕ್ಕೂ ಮಿಗಿಲಾದ ನಿರ್ಮಾಣದ ಕೆಲಸ. ಅದರಲ್ಲಿ ಅಷ್ಟಾಗಿ ಭಾಷಣಕ್ಕೆ ಅವಕಾಶವಿಲ್ಲ, ದೃಢವಾದ ಕೆಲಸವೇ ಬೇಕು ಅದಕ್ಕೆ. ಭಾಷಣ-ಪ್ರದರ್ಶನಗಳಿಂದ ವರ್ಷಕ್ಕೆ ಐವತ್ತು ಕೋಟಿ ರೂಪಾಯಿಗಳನ್ನು ಉಳಿಸುವುದು ಸಾಧ್ಯವಿಲ್ಲ. ವರ್ಷವರ್ಷವೂ ಹೊರಗೆ ಹರಿಯುವ ಹಣಕ್ಕಿಂತ ಹೆಚ್ಚಾದುದು ಇದೆ ಇದರಲ್ಲಿ. ಗಿರಣಿ ಉದ್ಯಮದೊಡನೆ ಸಂಬಂಧವುಳ್ಳವರೆಲ್ಲರಿಗೂ ಗಿರಣಿಗಳಲ್ಲಿ ದುಡಿಯುತ್ತಿರುವ ಹೆಂಗಸರು ಅವರು ತುತ್ತಾಗಬಾರದಂಥ ಆಮಿಷ, ಆಪತ್ತುಗಳಿಗೆ ಈಡಾಗಿರುವರೆಂಬುದು ಗೊತ್ತು. ಮನೆಯಲ್ಲಿ ಕೆಲಸ ಸಿಗದೆ ಎಷ್ಟೋ ಜನ ಹೆಂಗಸರು ರಸ್ತೆ ರಿಪೇರಿಯ ಕೆಲಸಕ್ಕೆ ಬರುತ್ತಾರೆ. ಈ ಕೆಲಸ ಎಂಥದೆಂಬುದನ್ನು ಬಲ್ಲವರಿಗೆ ಮಾತ್ರ ಈ ಕೆಲಸದ ಆಪತ್ತುಗಳು ಗೊತ್ತು. ಅವರಿಗೆ ರಾಟೆಯನ್ನು ಕೊಡಿ, ಆ ರಾಟೆಯ ಬಳಿ ಕುಳಿತು ನೂಲುವುದನ್ನು ಬಿಟ್ಟು ಯಾವ ಹೆಂಗಸೂ

ಬೇರಾವ ಕೆಲಸವನ್ನೂ ಮಾಡಬಯಸುವುದಿಲ್ಲ. ಸ್ವದೇಶಿಯೆಂದರೆ ಬೇಸಾಯ ಮಾತ್ರ ಬಿಟ್ಟು ದ್ವಿತೀಯ ಮಹತ್ವದ ಉದ್ಯೋಗದಿಂದ ಸಂಪತ್ತಿನ ಸಮಾನ ಹಂಚಿಕೆ ಎಂದರ್ಥ. ಅದು ಬೇಸಾಯಕ್ಕೆ ಪೂರಕ, ಆದುದರಿಂದ ಬೆಳೆಯುತ್ತಾ ಇರುವ ಬಡತನದ ಸಮಸ್ಯೆಯನ್ನು ಪರಿಹರಿಸಲು ಸಹಾಯವಾಗುತ್ತದೆ. ಅಂತಲೇ ಸ್ವದೇಶಿ ನಮ್ಮ ಕಾಮಧೇನು, ನಮ್ಮ ಅಗತ್ಯಗಳನ್ನೆಲ್ಲ ಪೂರೈಸುತ್ತದೆ, ನಮ್ಮ ಎಷ್ಟೋ ಕಠಿಣ ಸಮಸ್ಯೆಗಳನ್ನು ಬಿಡಿಸುತ್ತದೆ. ನಮ್ಮ ಗೌರವ ಕಾಯುವ ಉದ್ಯೋಗ, ಉಪಜೀವನ ಕಲ್ಪಿಸುವ ಕಸಬು, ಅದು ನಮ್ಮ ಧರ್ಮ.

ಈ ಪರಮಗುರಿಯ ಸಾಧನೆ ಹೇಗೆ? ಉತ್ತರ ಸುಲಭ. ಈ ಸಮಸ್ಯೆಯ ಮಹತ್ವ ಮನಗಂಡವರು ಕೆಳಕಂಡ ಒಂದು ಅಥವಾ ಎಲ್ಲ ನಿಟ್ಟಿನಲ್ಲಿ ಕೆಲಸ ಮಾಡತೊಡಗಬೇಕು :

೧. ಗಂಡಸಾಗಲಿ ಹೆಂಗಸಾಗಲಿ ಸ್ವತಃ ನೂಲುವುದನ್ನು ಕಲಿಯಬೇಕು. ಹಣ ಬೇಕಿದ್ದರೆ ನಿಮ್ಮ ದುಡಿಮೆಗೆ ಹಣವನ್ನು ಪಡೆಯಿರಿ, ಅಥವಾ ದಿನವೂ ನಿಮ್ಮ ದುಡಿಮೆಯಲ್ಲಿ ಒಂದು ಘಂಟೆಕಾಲದ ಶ್ರಮದ ಫಲವನ್ನು ದೇಶಕ್ಕೆ ದಾನ ಕೊಡಿ.

೨. ಮನಸ್ಸಿನ ಹರ್ಷಕ್ಕಾಗಲಿ, ನಿರ್ವಾಹಕ್ಕಾಗಲಿ ಸ್ವತಃ ನೇಯಿಗೆ ಕಲಿಯಿರಿ.

೩. ಇಂದಿನ ಮಗ್ಗ ಹಾಗೂ ರಾಟೆಗಳನ್ನು ಸುಧಾರಿಸಲು ತೊಡಗಿ. ನೀವು ಶ್ರೀಮಂತರಾಗಿದ್ದಲ್ಲಿ ಅದನ್ನು ಮಾಡುವವರಿಗೆ ಹಣ ಕೊಡಿ.

೪. ಸ್ವದೇಶೀ ವ್ರತ ತೊಡಿ, ಕೈಯಿಂದ ನೂತ, ಕೈಯಿಂದ ನೇಯ್ದ ಬಟ್ಟೆಗೇ ಪ್ರೋತ್ಸಾಹ ಕೊಡಿ.

೫. ನಿಮ್ಮ ಗೆಳೆಯರಿಗೂ ಈ ಬಟ್ಟೆಯನ್ನೇ ತೊಡಿಸಿ, ನಿಮ್ಮ ಬಡ ಭಗಿನಿಯರು ತಯಾರಿಸಿದ ನೂಲಿನಿಂದಾದ ಖಾದಿಯಲ್ಲಿ ಹೆಚ್ಚಿನ ಕಲೆ-ಮಾನವೀಯತೆ ಗಳಿವೆಯೆಂದು ನಂಬಿ.

೬. ನೀವು ತಾಯಿಯಾಗಿದ್ದರೆ ಶುದ್ಧವಾದ, ರಾಷ್ಟ್ರೀಯ ಸಂಸ್ಕೃತಿಯನ್ನು ನಿಮ್ಮ ಮಕ್ಕಳಿಗೆ ಕಲಿಸಿ, ಕೋಟಿಗಟ್ಟಲೆ ಜನರಿಗೂ ಸಿಗುವಂಥ, ಸುಲಭವಾಗಿ

ತಯಾರುಮಾಡಬಹುದಾದ ಸುಂದರ ಖಾದಿ ಬಟ್ಟೆಗಳನ್ನೇ ಅವರಿಗೆ ತೊಡಿಸಿ.

ಆಗ ಸ್ವದೇಶಿ ಅತ್ಯಂತ ಸಮರಸದಿಂದ ಕೆಲಮಾಡುವ ಅಂಗಗಳುಳ್ಳ ಪರಿಪೂರ್ಣ ವ್ಯವಸ್ಥೆಯ ನಿರ್ಮಾಣವೆಂದಾದೀತು. ಅಂಥ ವ್ಯವಸ್ಥೆಯನ್ನು ನಿರ್ಮಿಸುವಲ್ಲಿ ನಾವು ಯಶಸ್ವಿಯಾದರೆ ಸ್ವದೇಶಿಯ ಸಫಲತೆಯಂತೂ ಕಟ್ಟಿಟ್ಟದ್ದು, ಅಷ್ಟೇ ಅಲ್ಲ, ನಿಜವಾದ ಸ್ವರಾಜ್ಯವೂ ತಾನಾಗಿಯೇ ಬಂದೀತು.೨೪

ಸ್ವದೇಶಿಗೆ 'ನಿಜವಾದ' ಎಂಬ ವಿಶೇಷಣವನ್ನು ಜೋಡಿಸಬೇಕಾಗಿ ಬರುವುದಾದರೆ "ಖೋಟಾ ಸ್ವದೇಶಿಯೂ ಇದೆಯೆ?" ಎಂದು ಟೀಕಾಕಾರ ಕೇಳಿಯಾನು. ದುರ್ಭಾಗ್ಯವಶದಿಂದ 'ಹೌದು' ಎನ್ನಬೇಕಾಗಿದೆ. ಸ್ವದೇಶೀ ಬಂಡವಾಳದೊಡನೆ ವಿದೇಶೀ ಬಂಡವಾಳ ಬೆರೆತರೆ, ವಿದೇಶೀ ಪ್ರತಿಭೆ-ಕೌಶಲಗಳೊಡನೆ ಸ್ವದೇಶೀ ಪ್ರತಿಭೆ-ಕೌಶಲಗಳು ಬೆರೆತರೆ ಅಂಥ ಉದ್ಯಮವು ಸ್ವದೇಶಿಯೆ? ಇನ್ನಿತರ ಪ್ರಶ್ನೆಗಳೂ ಇವೆ. ಈಚೆ ಒಂದು ದಿನ ಮಂತ್ರಿಯೊಬ್ಬರಿಗೆ ಕೊಟ್ಟ ವ್ಯಾಖ್ಯೆಯನ್ನೇ ಪುನರುಚ್ಚರಿಸುತ್ತೇನೆ. 'ನಮ್ಮ ಜನಕೋಟಿಯ ಹಿತಕ್ಕೆ ಅಧೀನವಾದುದಾಗಿದ್ದರೆ, ಆ ಉದ್ಯಮವಲ್ಲಿ ತೊಡಗಿರುವ ಬಂಡವಾಳ-ಕೌಶಲಗಳು ವಿದೇಶೀಯವಾಗಿದ್ದರೂ ಪರಿಣಾಮಕಾರಿಯಾಗಿ ಭಾರತೀಯ ಹಿಡಿತದಲ್ಲಿದ್ದರೆ ಅಲ್ಲಿ ತಯಾರಾದ ವಸ್ತು ಸ್ವದೇಶೀ ಎಂದೇ ಹೇಳುತ್ತೇನೆ.' ಆದುದರಿಂದ ಚರಖಾ ಸಂಘದ ವ್ಯಾಖ್ಯೆಯಂತೆ ಆದ ಖಾದಿ ತನ್ನ ಉದ್ಯಮಕ್ಕೆ ಬಂಡವಾಳ ಹಾಗೂ ತಜ್ಞರನ್ನು ವಿದೇಶೀಯರನ್ನಾಗಿ ಪಡೆದಿದ್ದರೂ ಭಾರತೀಯ ಮಂಡಲಿಗೆ ಒಳಪಟ್ಟಿದ್ದಲ್ಲಿ ನಿಜವಾದ ಸ್ವದೇಶಿಯೇ ಆಗಿದ್ದೀತು. ತದ್ವಿಪರೀತವಾಗಿ ಬಾಟಾ ಕಂಪೆನಿಯ ರಬ್ಬರಿನ ಅಥವಾ ಇತರ ಬಗೆಯ ಪಾದರಕ್ಷೆಗಳು ಭಾರತದ ಕಾರ್ಮಿಕರಿಂದಲೇ ತಯಾರಾಗಿ, ಭಾರತದಲ್ಲಿಯೇ ಆ ಕಂಪೆನಿಗೆ ಬಂಡವಾಳ ದೊರೆತಿದ್ದರೂ ಸಹ ಪರದೇಶೀಯವೇ. ತಯಾರಿಕೆಗಾರರು ಇಬ್ಬಗೆಯಿಂದ ವಿದೇಶೀಯರು, ಹಿಡಿತವೂ ವಿದೇಶೀಯರದು, ತಯಾರಾದ ವಸ್ತು ಎಷ್ಟೇ ಅಗ್ಗವಾಗಿದ್ದರೂ ಬಹುಮಟ್ಟಿಗೆ ಹಳ್ಳಿಯ ಚಮ್ಮಾರನನ್ನೂ, ಪೂರ್ತಿಯಾಗಿ ಹಳ್ಳಿಯ ಮೋಚಿಯನ್ನೂ ತೊಡೆದುಹಾಕಿಬಿಡುತ್ತದೆ. ಆಗಲೇ

ಬಿಹಾರದ ಮೋಚಿಗಳು ಅಸ್ಪಷ್ಟ ಪೈಪೋಟಿಯನ್ನು ಅನುಭವಿಸಹತ್ತಿದಾರೆ. ಬಾಟಾ ಪಾದರಕ್ಷೆ ಯೂರೋಪನ್ನು ಉಳಿಸೀತು; ನಮ್ಮ ಹಳ್ಳಿಯ ಮೋಚಿಗೂ ಚಮ್ಮಾರನಿಗೂ ಸಾವು ತಂದೀತು. ನಾನು ಎರಡೂ ಮಾರ್ಮಿಕ ನಿದರ್ಶನ ಗಳನ್ನು ಕೊಟ್ಟಿದೇನೆ, ಎರಡೂ ಅಂಶತಃ ಕಾಲ್ಪನಿಕ. ಏಕೆಂದರೆ ಚರಖಾ ಸಂಘದಲ್ಲಿ ಬಂಡವಾಳ ಪೂರಾ ಸ್ವದೇಶದ್ದೇ, ಕೌಶಲವೆಲ್ಲವೂ ಅಷ್ಟೇ. ಆದರೆ ಹಳ್ಳಿಯ ರಾಟೆಯನ್ನು ಮೀರಿಸುವಂಥ ಚರಖಾವನ್ನು ಕೊಡಬಲ್ಲಂಥ ಯಂತ್ರ ಶಿಲ್ಪಕೌಶಲವನ್ನು ಪಾಶ್ಚಾತ್ಯರಿಂದ ಪಡೆಯಲು ಹಂಬಲಿಸುತ್ತೇನೆ. ಸ್ವದೇಶೀ ಕುಶಲರು ಈಗ ಸಾಧಿಸಿರುವ ಪ್ರಗತಿ ಯಾವ ದೃಷ್ಟಿಯಿಂದಲೂ ತಿರಸ್ಕಾರಾರ್ಹ ಅಲ್ಲವೆಂಬ ಅಂಶವಂತೂ ನನ್ನಲ್ಲಿ ಬೇರೂರಿದೆ. ಇದು ವಿಷಯಾಂತರ. ಜನತೆಗೆ ಮಾರ್ಗದರ್ಶಕರಾದ, ಅವರ ಸೇವೆಗೈಯುವ ಮಂತ್ರಿಗಳು ನಿಜ ಹಾಗೂ ಖೋಟಾ ಸ್ವದೇಶಿಗಳ ನಡುವೆ ಇರುವ ಅಂತರವನ್ನು ಅರಿಯುವ ಅಭ್ಯಾಸ ಪಡೆದುಕೊಂಡಾರೆಂದು ಮಾತ್ರ ಖಂಡಿತ ಆಶಿಸುತ್ತೇನೆ.-೨೫

**ಪ್ರಶ್ನೆ**—ಬಟ್ಟೆಯಲ್ಲದೆ ಇತರ ವಿದೇಶೀ ವಸ್ತುಗಳನ್ನು ಭಾರತ ಆಮದು ಮಾಡಿಕೊಳ್ಳುವ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು? ಕೂಡಲೇ ಬಹಿಷ್ಕರಿಸಬೇಕೆನ್ನಬಹುದಾದ ವಿದೇಶೀ ವಸ್ತುಗಳಿವೆಯೆ? ಭವಿಷ್ಯದಲ್ಲಿ ಭಾರತದ ವಿದೇಶೀ ವ್ಯಾಪಾರದ ಲಕ್ಷಣ ಎಂಥದಿರಬೇಕೆನ್ನುವಿರಿ?

**ಉತ್ತರ**—ಬಟ್ಟೆಯ ಹೊರತು ಉಳಿದ ವಿದೇಶೀವಸ್ತುಗಳ ವ್ಯಾಪಾರದ ವಿಷಯದಲ್ಲಿ ನಾನು ಹೆಚ್ಚುಕಡಿಮೆ ಉದಾಸೀನ. ಕೇವಲ ವಿದೇಶದವು ಎಂಬ ಕಾರಣದಿಂದಲೇ ಎಲ್ಲ ವಿದೇಶೀ ವಸ್ತುಗಳ ಬಹಿಷ್ಕಾರವನ್ನು ನಾನು ಎಂದೂ ಪ್ರತಿಪಾದಿಸಿಲ್ಲ. ಸ್ವದೇಶದ ಹಿತಕ್ಕೆ ಹಾನಿಕರವೆಂದು ಸಿದ್ಧವಾಗುವ ವಸ್ತುಗಳ ಆಮದಿಗೆ ಪೂರ್ಣ ಬಹಿಷ್ಕಾರ ನನ್ನ ಆರ್ಥಿಕ ಸಿದ್ಧಾಂತ. ನಮ್ಮ ದೇಶವೇ ಸಾಕಷ್ಟು ಒದಗಿಸಬಲ್ಲ ವಸ್ತುವನ್ನು ಯಾವ ಸಂದರ್ಭದಲ್ಲಿಯೂ ನಾವು ಆಮದು ಮಾಡಿಕೊಳ್ಳಬೇಕಾಗಿಲ್ಲ. ಆಸ್ಟ್ರೇಲಿಯದ ಗೋಧಿ ಉತ್ತಮ ವಾದುದೆಂದು ತರಿಸಿಕೊಳ್ಳುವುದು ಪಾಪವೆಂದು ನನ್ನೆಣಿಕೆ, ಆದರೆ ಸ್ಕಾಟ್ಲೆಂಡಿ ನಿಂದ ಓಟ್‌ಮೀಲ್‌ನ್ನು ತರಿಸಿಕೊಳ್ಳಲೇಬೇಕೆಂಬ ಅಗತ್ಯ ಉಂಟಾದಲ್ಲಿ ಅದನ್ನು ತರಿಸಲು ನಾನು ಸ್ವಲ್ಪವೂ ಹಿಂಜರಿಯೆ, ಏಕೆಂದರೆ ಅದು ಭಾರತದಲ್ಲಿ

ಬೆಳೆಯುವುದಿಲ್ಲ. ಎಂದರೆ ದ್ವೇಷ ಅಥವಾ ಮತ್ಸರಭಾವನೆಯಿಂದ ಯಾವೊಂದು ವಿದೇಶೀ ವಸ್ತುವನ್ನೂ ಬಹಿಷ್ಕರಿಸೆ. ಇನ್ನೊಂದು ವಿರುದ್ಧ ದೃಷ್ಟಾಂತ ತೆಗೆದು ಕೊಳ್ಳಿ: ಭಾರತದಲ್ಲಿ ಸಾಕಷ್ಟು ಚರ್ಮ ಉತ್ಪತ್ತಿಯಾಗುತ್ತದೆ, ಆದಕಾರಣ ಅದರಿಂದ ಆದ ಪಾದರಕ್ಷೆಗಳನ್ನೇ ಧರಿಸುವುದು ನನ್ನ ಕರ್ತವ್ಯ — ಅದು ತುಟ್ಟಿ ಇದ್ದರೂ ಸಹ, ಅಗ್ಗವಾದ ವಿದೇಶೀ ಪಾದರಕ್ಷೆಗಳಿಗಿಂತ ಕಡಿಮೆ ದರ್ಜೆಯದಿದ್ದರೂ ಸಹ. ಹಾಗೆಯೇ ಕಾಕಂಬಿ, ಸಕ್ಕರೆ ಭಾರತದಲ್ಲೇ ನಮಗೆ ಸಾಕಷ್ಟು ತಯಾರಾಗುತ್ತಿದ್ದರೆ ಅವನ್ನು ಹೊರಗಿನಿಂದ ತರಿಸುವುದನ್ನು ನಾನು ಖಂಡಿಸಿಯೇನು. ಆದುದರಿಂದ ಭಾರತಕ್ಕೆ ಹೊರಗಿನಿಂದ ತರಿಸಬಾರದೆಂಬ ವಸ್ತುಗಳ ಪಟ್ಟಿಯನ್ನೇ ಕೊಡುವುದು ಅಶಕ್ಯವೆಂಬುದು ಇದರಿಂದ ಸ್ಪಷ್ಟ. ಅಂಥ ಸಂದರ್ಭದಲ್ಲಿ ನಾವು ಅನುಸರಿಸಬೇಕಾದ ದಿಗ್ದರ್ಶಕ ತತ್ತ್ವಗಳನ್ನು ಮಾತ್ರ ನಿರ್ದೇಶಿಸಿದೇನೆ. ನಮ್ಮ ದೇಶದ ಉತ್ಪಾದನ ಸ್ಥಿತಿ ಹೀಗೆಯೇ ಇರುವವರೆಗೆ ಈ ತತ್ತ್ವ ಭವಿಷ್ಯತ್ತಿಗೂ ಅನ್ವಯಿಸುತ್ತದೆ.[೨೬]

## ಆಧುನಿಕ ಅರ್ಥಶಾಸ್ತ್ರಿಗಳ ಅಮಾನುಷ ಸಿದ್ಧಾಂತ

**ಪ್ರಶ್ನೆ**—ಅತ್ಯುತ್ತಮವಾದ, ಅತಿ ಅಗ್ಗವಾದ ಮಾರುಕಟ್ಟೆಯಲ್ಲೇ ಕೊಳ್ಳ ಬೇಕು ಎಂಬ ಆರ್ಥಿಕ ಸಿದ್ಧಾಂತ ತಪ್ಪೇ?

**ಉತ್ತರ**—ಆಧುನಿಕ ಅರ್ಥಶಾಸ್ತ್ರಿಗಳು ವಿಧಿಸಿರುವ ಅತ್ಯಂತ ಅಮಾನುಷ ಸಿದ್ಧಾಂತಗಳಲ್ಲಿ ಇದೊಂದು. ಅಂಥ ಕುತ್ಸಿತ ಪರಿಗಣನೆಯಿಂದ ಮಾನವ ಸಂಬಂಧಗಳನ್ನು ನಾವು ಯಾವಾಗಲೂ ನಿಯಮನಗೊಳಿಸೆವು. ಇಂಗ್ಲಿಷಿನವ ಅಗ್ಗವಾದ ಇಟಾಲಿಯನ್ ಕೂಲಿಗಾರರನ್ನು ಬಿಟ್ಟು ಇಂಗ್ಲಿಷ್ ಗಣಿಕೂಲಿಗಾರ ನಿಗೆ ನ್ಯಾಯವಾಗಿಯೇ ಹೆಚ್ಚು ಕೊಟ್ಟಾನು. ಅಗ್ಗದ ದುಡಿಮೆಗಾರರನ್ನು ಇಂಗ್ಲೆಂಡಿಗೆ ತರುವ ಪ್ರಯತ್ನ ಕ್ರಾಂತಿಯನ್ನೇ ಉಂಟುಮಾಡೀತು. ಹೆಚ್ಚು ವೇತನ ಕೊಡುತ್ತಿರುವ ನಂಬಿಕಸ್ಥ ಸೇವಕನ ಬದಲು ಅಗ್ಗವಾಗಿ ಸಿಗುವ ಹೆಚ್ಚು ಸಮರ್ಥನೂ, ಮೊದಲಿನವನಷ್ಟೆ ನಂಬಿಕಸ್ಥನೂ ಆದವನನ್ನು ತೆಗೆದುಕೊಂಡು ಮೊದಲಿನವನನ್ನು ವಜಾ ಮಾಡುವುದು ಪಾಪಕರ. ನೀತಿಯ, ಭಾವನೆಯ ಪರಿಗಣನೆಗಳನ್ನು ದುರ್ಲಕ್ಷಿಸುವ ಅರ್ಥಶಾಸ್ತ್ರ ಜೀವಂತವಾಗಿ ಕಂಡರೂ ಸಜೀವ

ವಸ್ತುಗಳಲ್ಲ; ಜೀವವಿರಹಿತವಾದ ಮೇಣದ ಗೊಂಬೆಗಳಂತೆ. ಪ್ರತಿಯೊಂದು ಆಯತ ವೇಳೆಯಲ್ಲಿಯೂ ಈ ನವೀನ ಅರ್ಥನಿಯಮಗಳು ಮುರಿದುಬಿದ್ದಿವೆ. ಅವನ್ನು ಅಂಗೀಕರಿಸುವ ರಾಷ್ಟ್ರಗಳಿಗೂ ವ್ಯಕ್ತಿಗಳಿಗೂ ವಿನಾಶವೇ ಕಟ್ಟಿಟ್ಟದ್ದು. ಧರ್ಮದ ವಿಧಿಪ್ರಕಾರ ತಯಾರಾದ ಆಹಾರಕ್ಕೆ ಹೆಚ್ಚು ಬೆಲೆಕೊಡುವ ಮುಸಲ್ಮಾನನ ಅಥವಾ ಶಾಸ್ತ್ರೋಕ್ತವಾಗಿ ಶುದ್ಧವಾಗಿ ತಯಾರಿಸದ ಅನ್ನವನ್ನು ಮುಟ್ಟೆನೆನ್ನುವ ಹಿಂದೂವಿನ ಆತ್ಮನಿಷೇಧದಲ್ಲಿ ಉದಾತ್ತವಾದುದೇನೋ ಇದೆ. ಇಂಗ್ಲೆಂಡ್ ಮತ್ತು ಜಪಾನಿನ ಅಗ್ಗದ ಮಾರುಕಟ್ಟೆಗಳಲ್ಲಿ ಕೊಂಡುಕೊಳ್ಳಲು ಪ್ರಾರಂಭಿಸಿದಾಗಲೇ ನಾವು ಸೋತೆವು. ನಮ್ಮ ನೆರೆಯವರು ತಮ್ಮ ಕುಟೀರಗಳಲ್ಲಿ ತಯಾರಿಸಿದ ಅರಿವೆಗಳನ್ನು ಕೊಳ್ಳುವ ಧಾರ್ಮಿಕ ಅಗತ್ಯವನ್ನು ಮನಗಂಡಾಗಲೇ ನಾವು ಪುನರುಜ್ಜೀವನಗೊಂಡೇವು.[೨೭]

## ಅಧ್ಯಾಯ – ೪

# ಖಾದಿ, ಗ್ರಾಮಉದ್ಯೋಗಗಳು

೧೯೦೮ರಲ್ಲಿ ನಾನು ರಾಟೆಯನ್ನು ಲಂಡನ್ನಿನಲ್ಲಿ ಕಂಡುಕೊಂಡೆ. ದಕ್ಷಿಣ ಆಫ್ರಿಕದಿಂದ ಅಲ್ಲಿಗೆ ಒಂದು ನಿಯೋಗಗೋಷ್ಠಿಯನ್ನು ಕರೆದುಕೊಂಡು ಹೋಗಿದ್ದೆ. ಆಗ ಹಲವರು ಶ್ರದ್ಧಾಳು ಭಾರತೀಯ ವಿದ್ಯಾರ್ಥಿಗಳು ಮತ್ತು ಇತರರೊಡನೆ ನಿಕಟ ಸಂಪರ್ಕ ಬಂತು. ಭಾರತದ ಸ್ಥಿತಿ ಕುರಿತು ದೀರ್ಘ ಸಂಭಾಷಣೆಗಳು ನಡೆದುವು, ಆಗ ಇದ್ದಕ್ಕಿದ್ದಂತೆ ಥಟಕ್ಕನೆ ಚರಖಾ ಇಲ್ಲದೆ ಸ್ವರಾಜ್ಯವಿಲ್ಲ ಎಂದು ನನಗೆ ಹೊಳೆಯಿತು. ಕೂಡಲೇ ಪ್ರತಿಯೊಬ್ಬರೂ ನೂಲಲೇಬೇಕು ಎಂದೆನಿಸಿತು. ಆದರೆ ಆಗ ನನಗೆ ಮಗ್ಗಕ್ಕೂ ರಾಟೆಗೂ ಇದ್ದ ವ್ಯತ್ಯಾಸ ಗೊತ್ತಿರಲಿಲ್ಲ, 'ಹಿಂದ್ ಸ್ವರಾಜ್ಯ'ದಲ್ಲಿ ರಾಟೆ ಎಂಬ ಅರ್ಥದಲ್ಲಿ ಮಗ್ಗ ಎಂಬ ಪದವನ್ನೇ ಬಳಸಿದೇನೆ.

ಮನಸ್ಸಿಗೆ ೧೯೦೮ರಲ್ಲಿ ರಾಟೆ ಹೊಳೆಯಿತಾದರೂ, ಅದು ಕಾರ್ಯಕಾರಿ ಆದುದು ೧೯೧೮ರಲ್ಲಿ, ಅದೂ ಮೂರು ವರ್ಷಗಳ ತಾಳ್ಮೆಯ ಹಾಗೂ ಕಠಿಣ ಪರಿಶ್ರಮದ ಫಲವಾಗಿ. ಮೊಟ್ಟಮೊದಲಾಗಿ ಖಾದಿಯ ವ್ರತ ತೊಟ್ಟುದು ೧೯೧೯ರಲ್ಲಿ. ಕಾಂಗ್ರೆಸ್ಸಿನ ಕಾರ್ಯಕ್ರಮದಲ್ಲಿ ರಾಟೆ ಸ್ಥಾನ ಪಡೆದುದು ೧೯೨೧ರಲ್ಲಿ. ಅಲ್ಲಿಂದ ಈಚಿನ ಆ ಚಳುವಳಿಯ ಚರಿತ್ರೆ ತೆರೆದ ಪುಸ್ತಕವೇ, ಅದರಲ್ಲಿ ತೊಡಗಿರುವ ಎರಡು ಸಾವಿರಕ್ಕೂ ಮಿಕ್ಕಷ್ಟು ಸಂಘಟಕರು ಹಾಗೂ ಅದು ಬಾಳಿನ ಆಶಾಕಿರಣವಾಗಿ ಪರಿಣಮಿಸಿರುವ ಸುಮಾರು ಎಪ್ಪತ್ತು ಸಾವಿರ ಮಂದಿ ನೂಲುವವರು ಅದನ್ನು ಇನ್ನೂ ಬರೆಯುತ್ತಲೇ ಇದಾರೆ.೨೮

೧೯೧೫ರಲ್ಲಿ ನಾನು ಮೊದಲು ನೇಕಾರನಾದೆ. ನೇಕಾರನಾದ ಬಳಿಕ ನೂಲುವವನಾದೆ. ವಿದೇಶೀ ನೂಲನ್ನೂ, ನಮ್ಮ ಗಿರಣಿಗಳ ನೂಲನ್ನೂ ಈ ಕೈಗಳಿಂದಲೇ ನೇಯ್ದಿದೇನೆ. ನನ್ನ ಕೈಮಗ್ಗದಲ್ಲಿ ಕುಳಿತುಕೊಂಡಿದ್ದಾಗ ಗಿರಣಿಗಳೇ ತಮ್ಮ ನೂಲನ್ನು ನೇಯ್ದುಕೊಳ್ಳುವಷ್ಟು ಸಂಘಟಿತವಿರುವಾಗ ನಾನು, ಸಾವಿರಾರು, ಲಕ್ಷಾಂತರ ಕೈಮಗ್ಗದ ನೇಕಾರರು ಎಲ್ಲಿಗೆ ಪಾರ ಎಂದು

ಯೋಚಿಸಿದೆ. ಈ ಚಿಂತೆಮಾಡುತ್ತಿದ್ದಾಗ ಹೊಟ್ಟೆಗಿಲ್ಲದೆ ಬಳಲುವ ಕೋಟ್ಯಂತರ ಹಳ್ಳಿಗಾಡಿನ ಸೋದರಿಯರಿಗಾಗಿ ನನ್ನ ಹೃದಯ ಮರುಗಿತು, ನೇಯುತ್ತಾ ಇದ್ದಂತೆಯೇ ಈ ಸೋದರಿಯರ ಸ್ಥಿತಿ ಕುರಿತು ಚಿಂತಿಸಿದೆ. ದುಃಖಿಯಾದೆ, ವ್ಯಾಕುಲಗೊಂಡೆ. ಸಂಗಡಿಗರೊಡಗೂಡಿ ರಾಟೆಯಲ್ಲಿ ನೂಲುವುದನ್ನು ಕಲಿಸ ಬಲ್ಲವರಿಗಾಗಿ ಕ್ರಮವಾಗಿ ಹುಡುಕಾಡಿದೆವು. ಕೈಯಿಂದ ನೂಲುವ ಕ್ರಿಯೆ ನಡೆಯುತ್ತಿರುವ ಒಂದು ಹಳ್ಳಿಯಾದರೂ ಇದೆಯೇ ಎಂಬುದನ್ನೂ ನೋಡ ತೊಡಗಿದೆ. ಪಂಜಾಬಿನಲ್ಲಿ ನೂಲುತ್ತಿದ್ದ ಕೆಲವು ಸೋದರಿಯರು ಇದ್ದರು ಎಂಬ ವಿಷಯ ಏನೂ ಗೊತ್ತಿರಲಿಲ್ಲ. ನಿರಾಶೆ ಕವಿಯುತ್ತಿದ್ದಂತೆಯೇ ಗುಜರಾತಿನ ಒಬ್ಬ ಧೀರ ವಿಧವೆಯ ಆಶ್ರಯ ದೊರೆಯಿತು. ಅಸ್ಪೃಶ್ಯರ ಸೇವೆಯಲ್ಲಿ ಆಕೆ ನಿರತಳಾಗಿದ್ದಳು. ನನ್ನ ಈ ಆಳವಾದ ದುಃಖವನ್ನು ಈ ಸೋದರಿಯೊಡನೆ ತೋಡಿಕೊಂಡೆ. ಗುಜರಾತಿನ ಮೂಲೆ ಮೂಲೆಯಲ್ಲೂ ಸಂಚರಿಸಿ ನೂಲುವ ಕಲೆಯನ್ನು ಉಳಿಸಿಕೊಂಡಿದ್ದ ಸೋದರಿಯರನ್ನು ಪತ್ತೆ ಹಚ್ಚುವತನಕ ವಿರಮಿಸಬಾರದೆಂದು ಆಕೆಗೆ ಹೊರಿಸಿದೆ. ಗುಜರಾತಿನ ಬೀಜಾಪುರದಲ್ಲಿ ತಾವು ನೂತ ನೂಲನ್ನು ಕೊಳ್ಳುವುದಿದ್ದಲ್ಲಿ ನೂಲುವೆವು ಎಂದ ಕೆಲವು ಮುಸ್ಲಿಂ ಸೋದರಿಯರನ್ನು ಆಕೆಯೇ ಹುಡುಕಿದಳು. ಆ ಕ್ಷಣದಿಂದ ಈಗ ೧೫ ಸಾವಿರ ಭಾರತೀಯ ಗ್ರಾಮಗಳನ್ನಾವರಿಸಿರುವ ಮಹಾನವೋದಯ ಪ್ರಾರಂಭವಾಯಿತು. ಈ ಪರಿಶೋಧನೆಯ ಬಳಿಕ ನನ್ನ ಆಶ್ರಮದಲ್ಲಿ ಒಂದು ಎಳೆ ವಿದೇಶೀ ಅಥವಾ ಗಿರಣಿಯ ನೂಲನ್ನು ಸಹ ನೇಯುವುದಿಲ್ಲವೆಂದು ನಿಶ್ಚಯಿಸಿದೆ.೨೯

ಭಾರತದ ಆರ್ಥಿಕ, ನೈತಿಕ ಪುನರುತ್ಥಾನಕ್ಕೆ ಕೈಯಲ್ಲಿ ನೂಲುವುದು ಮತ್ತು ನೇಯುವುದು ಅತಿದೊಡ್ಡ ಕಾಣಿಕೆ ಸಲ್ಲಿಸೀತೆಂಬಲ್ಲಿ ನನಗೆ ನಿಸ್ಸಂಶಯ. ಬೇಸಾಯಕ್ಕೆ ಪೂರಕವಾಗಬಲ್ಲ ಸರಳ ಉದ್ಯೋಗವೊಂದು ನಮ್ಮ ಜನಕೋಟಿಗೆ ಬೇಕು. ಕೆಲವು ಕಾಲದ ಹಿಂದೆ ನೂಲುವುದು ಆ ಉದ್ಯೋಗವಾಗಿತ್ತು, ಕೋಟಿಗಟ್ಟಲೆ ಜನರಿಗೆ ಉಪವಾಸ ತಪ್ಪಿಸಬೇಕಾಗಿದ್ದಲ್ಲಿ ಮತ್ತೆ ನೂಲುವ ಉದ್ಯೋಗವನ್ನು ಅವರ ಮನೆಗಳಲ್ಲಿ ಆಚರಣೆಗೆ ತರಬೇಕು, ಪ್ರತಿ ಹಳ್ಳಿಗೂ ಸ್ವಂತ ನೇಕಾರರು ಮತ್ತೆ ಬರಬೇಕು.೩೦

ಭಾರತದ ದಟ್ಟದಾರಿದ್ರ್ಯ, ತತ್ಫಲವಾದ ನಿರುದ್ಯೋಗ ತಪ್ಪಿಸಬಹುದಾದರೆ ಅತ್ಯಂತ ವಿಸ್ತೃತ ಯಂತ್ರಕ್ಕೂ 'ಅಸ್ತು' ಎನ್ನುತ್ತೇನೆ ನಾನು. ಕೈಯಿಂದ

ನೂಲುವುದು ಬಡತನವನ್ನು ತೊಡೆದು ದುಡಿಮೆ ಹಾಗೂ ಸಂಪತ್ತುಗಳ ಬರಗಾಲವನ್ನು ಇಲ್ಲದಂತಾಗಿಸುವ ಏಕಮಾತ್ರ ಸಿದ್ಧ ಉಪಾಯವೆಂದು ಅದನ್ನು ಸೂಚಿಸಿದೇನೆ. ರಾಟೆಯೇ ಒಂದು ಅಮೂಲ್ಯ ಯಂತ್ರ, ಭಾರತದ ವಿಶೇಷ ಸ್ಥಿತಿಗತಿಯನ್ನನುಲಕ್ಷಿಸಿ ಅದರಲ್ಲಿಯೂ ಸುಧಾರಣೆ ಮಾಡಲು ಯತ್ನಿಸಿದೇನೆ. ಭಾರತ ಹಾಗೂ ಮಾನವಕುಲದ ಪ್ರೇಮಿಯ ಎದುರು ಇರುವ ಒಂದೇ ಒಂದು ಸಮಸ್ಯೆ: ಭಾರತದ ಕಂಗಾಲತನ–ಬವಣೆಗಳ ನಿವಾರಣೆಗೆ ವ್ಯಾವಹಾರಿಕ ಮಾರ್ಗ ಹುಡುಕುವ ಉತ್ತಮ ವಿಧಾನ ಯಾವುದು—ಎಂಬುದೇ.

ಭಾರತೀಯನ ಎಲುಬಿನ ಹಂದರದ ಚಿತ್ರವನ್ನು ಕಲ್ಪಿಸಿಕೊಳ್ಳುವುದಾದರೆ ತಮ್ಮ ಹೊಲಗಳಲ್ಲಿ ದುಡಿವ, ವರ್ಷದಲ್ಲಿ ಕನಿಷ್ಠ ನಾಲ್ಕು ತಿಂಗಳುಗಳಂತೂ ಯಾವ ಉದ್ಯೋಗವೂ ಇಲ್ಲದ, ನಿತ್ಯೋಪವಾಸದ ಅಂಚಿನಲ್ಲೇ ಜೀವಿಸುತ್ತಾ ಇರುವ ಶೇಕಡಾ ಎಂಬತ್ತು ಭಾಗದ ಜನರನ್ನು ಕುರಿತು ಚಿಂತಿಸಬೇಕು. ಇದೇ ಸಾಮಾನ್ಯ ಸ್ಥಿತಿ. ಆಗಾಗ ಎರಗುವ ಬರಗಳಂತೂ ಈ ನಿರ್ಬಂಧದ ಆಲಸ್ಯವನ್ನು ಹೇರಳವಾಗಿ ಹೆಚ್ಚಿಸುತ್ತವೆ. ಈ ಹೆಣ್ಣುಗಂಡುಗಳು ತಮ್ಮ ಕುಟೀರಗಳಲ್ಲೇ ಸುಲಭವಾಗಿ ಮಾಡಬಹುದಾದ, ತಮ್ಮ ಅಲ್ಪ ಆದಾಯಕ್ಕೆ ನಾಲ್ಕು ಕಾಸು ಕೊಡಬಲ್ಲ ಸುಲಭ ಉದ್ಯೋಗ ಯಾವುದು ? ಕೈಯಿಂದ ನೂಲುವುದಲ್ಲದೆ ಮತ್ತಾವುದೂ ಅಲ್ಲ ಎಂಬ ಬಗೆಗೆ ಯಾರಿಗಾದರೂ ಇನ್ನೂ ಸಂದೇಹವುಂಟೆ ?೩೧

ನೂಲುವ ಕ್ರಿಯೆ :

೧. ವಿರಾಮವಿದ್ದು ನಾಲ್ಕು ಕಾಸು ಬೇಕೆನ್ನುವವರಿಗೆ ಸಿದ್ಧ ಉದ್ಯೋಗ ಕೊಡುತ್ತದೆ;

೨. ಸಾವಿರಾರು ಜನರಿಗೆ ಗೊತ್ತು ;

೩. ಕಲಿಯಲು ಸುಲಭ ;

೪. ಏನೂ ಬಂಡವಾಳವೇ ಬೇಕಿಲ್ಲ ;

೫. ರಾಟೆಯನ್ನು ಸುಲಭವಾಗಿ, ಅಗ್ಗವಾಗಿ ತಯಾರಿಸಬಹುದು. ಹೆಂಚಿನ ತುಣುಕು, ಬಿದಿರು ಕಡ್ಡಿಗಳಿಂದಲೂ ನೂಲಬಹುದೆಂಬುದು ನಮ್ಮಲ್ಲಿ ಎಷ್ಟೋ ಮಂದಿಗೆ ತಿಳಿಯದು ;

೬. ಜನರಿಗೆ ತಿರಸ್ಕಾರವಿಲ್ಲದ ಕೆಲಸ ;
೭. ಬರಗಾಲದ, ಅಭಾವದ ವೇಳೆಗಳಲ್ಲಿ ತತ್‌ಕ್ಷಣದ ಪರಿಹಾರ ನೀಡುತ್ತದೆ;
೮. ವಿದೇಶೀ ಬಟ್ಟೆ ಕೊಳ್ಳುವುದರಿಂದ ಭಾರತದಾಚೆ ಹರಿಯುವ ಹಣದ ಹೊಳೆಯನ್ನು ಇದೊಂದೇ ನಿಲ್ಲಿಸಬಲ್ಲುದು ;
೯. ಹೀಗೆ ಉಳಿಸಿದ ಕೋಟಿಗಟ್ಟಲೆ ಹಣವನ್ನು ಅರ್ಹರಾದ ಬಡವರಲ್ಲಿ ತಾನಾಗಿಯೇ ಹಂಚುತ್ತದೆ ;
೧೦. ಅಲ್ಪ ಯಶಸ್ಸೂ ಜನತೆಗೆ ತತ್ಕಾಲದ ಲಾಭ ;
೧೧. ಜನರಲ್ಲಿ ಪರಸ್ಪರ ಸಹಕಾರ ಸಾಧಿಸುವ ಅತಿಪ್ರಬಲ ಸಾಧನ.[೩೨]

ಜನಕೋಟಿಗೆ ತಗುಲಿರುವ ರೋಗ ಹಣದ ಬರವಲ್ಲ, ದುಡಿಮೆಯ ಬರ. ದುಡಿಮೆಯೇ ಧನ. ಜನಕೋಟಿಗೆ ಅವರ ಗುಡಿಸಲಲ್ಲೇ ಮಾನಪೂರ್ಣ ದುಡಿಮೆ ಒದಗಿಸುವವ ಅವರಿಗೆ ಅನ್ನಬಟ್ಟೆ ಕೊಡುತ್ತಾನೆ, ಹಣ ಕೊಟ್ಟಂತೆಯೇ ಅದು. ಚರಖಾ ಅಂಥ ದುಡಿಮೆ ನೀಡುತ್ತದೆ. ಇದಕ್ಕೂ ಉತ್ತಮತರ ಸಾಧನ ಸಿಗುವವರೆಗೆ ಇದೇ ಇರಬೇಕು.[೩೩]

ನಮ್ಮ ದೇಶದಲ್ಲಿ ತಲೆಯೊಂದಕ್ಕೆ ದಿನಕ್ಕೆ ಸಿಗುವ ಆದಾಯ ಎಷ್ಟು ಗೊತ್ತೇ ? ಒಂದೂವರೆ ಆಣೆಯೆಂದು ನಮ್ಮ ಅರ್ಥಶಾಸ್ತ್ರಿಗಳು ಹೇಳುತ್ತಾರೆ, ಅದೂ ತಪ್ಪು. ನದಿ ಒಂದೆಡೆ ಆರಡಿ ಆಳವಿದೆ, ಒಂದೆಡೆ ಎರಡಡಿ ಆಳವಿದೆ ಎಂದು ಸರಾಸರಿ ಆಳ ನಾಲ್ಕಡಿಯೆಂದು ಲೆಕ್ಕಹಾಕಿ ಅದನ್ನು ಕಂಡುಹಿಡಿಯ ಹೊರಟರೆ ಮುಳುಗಿಹೋದಾನು. ಈ ಸರಾಸರಿ ಆದಾಯದಲ್ಲಿ ಬಡವನ ಆದಾಯ, ವೈಸ್ರಾಯ್ ಮತ್ತು ಕೋಟೀಶ್ವರರ ಆದಾಯಗಳ ಅಂಕಿಗಳೂ ಸೇರಿವೆ. ಆದುದರಿಂದ ನಿಜವಾದ ಆದಾಯ ತಲೆಯೊಂದಕ್ಕೆ ಕೇವಲ ಮೂರು ಬಿಲ್ಲೆ ಇದ್ದೀತು. ಚರಖಾದ ಸಹಾಯದಿಂದ ಆ ಆದಾಯಕ್ಕೆ ಇನ್ನು ಮೂರು ಬಿಲ್ಲೆಗಳನ್ನು ಕೂಡಿಸಬಲ್ಲೆನಾದರೆ ಅದನ್ನು 'ಕಾಮಧೇನು' ಎಂದು ಕರೆದರೆ ಏನು ತಪ್ಪು ? ಭಾರತದಲ್ಲಿ ಬಡತನವೇ ಇಲ್ಲ, ಕೆಲವು ಕಾಸುಗಳೂ ಇಲ್ಲದೆ ದಿನವೂ ಉಪವಾಸ ಬೀಳುವ ಜನ ಇಲ್ಲ ಎಂದು ಯಾರಾದರೂ ನನಗೆ ಮನಗಾಣಿಸಿಕೊಟ್ಟಿದಾದರೆ ನನ್ನ ತಪ್ಪನ್ನು ಒಪ್ಪಿಕೊಂಡು ರಾಟೆಯನ್ನು ನಾಶ ಮಾಡಲೂ ಸಿದ್ಧ.[೩೪]

ವರ್ಷದಲ್ಲಿ ನಾಲ್ಕು ತಿಂಗಳಂತೂ ನಮ್ಮ ದುಡಿಮೆಗಾರ ಜನಕೋಟಿಗೆ ಕೆಲಸವಿಲ್ಲದ ಕಾರಣ ಭಯಂಕರ ನಿರ್ಬಂಧದ ನಿರುದ್ಯೋಗವಿದೆಯೆಂಬುದು ನಾವು ಮನಗಾಣಬೇಕಾದ ಮುಖ್ಯ ಸತ್ಯ. ಈ ಕೋಟಿಗಟ್ಟಲೆ ಜನರಿಗೆ ಅವರ ಬಿಡುವಿನ ವೇಳೆಯನ್ನು ಸದುಪಯೋಗಗೊಳಿಸುವ ಕೆಲಸ ನೀಡುವುದರಲ್ಲಿ ಇನ್ನು ಕ್ಷಣವೂ ವಿಳಂಬಮಾಡತಕ್ಕದ್ದಲ್ಲ. ಇನ್ನೊಂದು ಸತ್ಯ : ಈ ನಾಡಿನ ಪ್ರಜೆಯ ಸರಾಸರಿ ದೈನಿಕ ಆದಾಯ ಏಳು ಬಿಲ್ಲೆಯಾದರೆ — (ಇಂದಿನ ವಿನಿಮಯದ ಬೆಲೆಯಂತೆ ಇಂಗ್ಲೆಂಡಿನ ಎರಡು ಪೆನ್ನಿಗೂ ಕಡಿಮೆ) ದುಡಿಮೆ ಗಾರನ ನಿಜವಾದ ಆದಾಯ ಅದಕ್ಕೂ ಕಡಿಮೆ ಇರಬೇಕು—ಅವರ ಆದಾಯಕ್ಕೆ ಹೆಚ್ಚಿನ ಬಂಡವಾಳ ವೆಚ್ಚವಿಲ್ಲದೆ ಎರಡು ಬಿಲ್ಲೆ ಹೆಚ್ಚು ಸೇರಿಸುವವ ಅವರ ಆದಾಯವನ್ನು ಸಾಕಷ್ಟು ವೈಭವಪೂರ್ಣವಾಗಿ ಹೆಚ್ಚಿಸುತ್ತಾನೆ, ಆ ಜನ-ಕೋಟಿಯ ಹೃದಯದಲ್ಲಿ ಬತ್ತುತ್ತಿರುವ ಆಸೆಯನ್ನು ಉಜ್ಜೀವನಗೊಳಿಸಿಯೂ ಗೊಳಿಸುತ್ತಾನೆ. ೨೫

ರಾಟೆ ಸಾಕಷ್ಟು ಕಾಸು ಕೊಡದು—ಎಂಬುದು ಟೀಕಾಕಾರರ ಏಕಮಾತ್ರ ಆಕ್ಷೇಪ. ಅದು ಒಂದೇ ಬಿಲ್ಲೆ ಕೊಟ್ಟರೂ ಸರಿಯೆ. ದಿನವೊಂದಕ್ಕೆ ಸರಾಸರಿ ಆದಾಯ ಅಮೆರಿಕದ ಮನುಷ್ಯನಿಗೆ ಹದಿನಾಲ್ಕು ರೂಪಾಯಿಗಳು, ಇಂಗ್ಲಿಷಿನವನಿಗೆ ಆರು ರೂಪಾಯಿಗಳೂ ಇರುವಾಗ ನಮ್ಮ ಸರಾಸರಿ ಆದಾಯವಾದ ಆರು ಬಿಲ್ಲೆಗೆ ಒಂದು ಬಿಲ್ಲೆ ಸೇರಿಸಿದರೂ ಅದು ಲಾಭದಾಯಕವೇ. ಶೂನ್ಯ ಇರುವೆಡೆ ಅಲ್ಪವನ್ನಾದರೂ ಹುಟ್ಟಿಸುವ ಪ್ರಯತ್ನವೇ ಈ ರಾಟೆಯದು. ಚರಖಾದ ಮೂಲಕ ರಾಷ್ಟ್ರಕ್ಕೆ ಅರವತ್ತು ಕೋಟಿ ರೂಪಾಯಿಗಳನ್ನು ಉಳಿಸುವುದಾದರೆ–ಅಷ್ಟು ಉಳಿಸಿಯೇ ಉಳಿಸಬಲ್ಲೆವು–ಆ ದೊಡ್ಡ ಮೊತ್ತವನ್ನು ನಮ್ಮ ರಾಷ್ಟ್ರೀಯ ಆದಾಯಕ್ಕೆ ಸೇರಿಸುತ್ತೇವೆ. ಈ ಕ್ರಿಯೆಯ ಮೂಲಕ ನಾವು ಹಳ್ಳಿಗಳನ್ನು ತಾನಾಗಿಯೇ ಸಂಘಟಿಸುತ್ತೇವೆ. ಈ ಹಣವೆಲ್ಲವನ್ನೂ ದೇಶದ ಬಡವರಲ್ಲಿ ಹಂಚುತ್ತೇವೆ, ನ್ಯಾಯಪೂರ್ಣವಾದ, ಹತ್ತಿರ ಹತ್ತಿರ ಸಮವಾದ ಸಂಪತ್ತಿನ ಹಂಚಿಕೆಯ ಯೋಜನೆ ಇದು. ಅಂಥ ಹಂಚಿಕೆಯ ನೈತಿಕ ಮೂಲ್ಯವನ್ನು ಇದಕ್ಕೆ ಸೇರಿಸಿ, ಚರಖಾದ ವಾದ ಅಪ್ರತಿಹತವಾಗಿಬಿಡುತ್ತದೆ. ೨೬

ಒಂದಾದಮೇಲೊಂದು ಉದ್ಯೋಗಗಳೆಲ್ಲವನ್ನೂ ಪರಿಶೀಲಿಸಿದ ಬಳಿಕ ಕೋಟ್ಯಂತರ ಜನರಿಗೆ ವ್ಯಾಪಕ ಉದ್ಯೋಗ ನೂಲುವುದಲ್ಲದೆ ಮತ್ತೊಂದಲ್ಲ

ಎಂಬ ತಡೆಯಲಾಗದ ತೀರ್ಮಾನಕ್ಕೆ ಬರಲೇ ಬೇಕು. ಅಂದರೆ ಇತರ ಉದ್ಯೋಗಗಳಿಗೆ ಎಡೆಯಿಲ್ಲ ಅಥವಾ ನಿರರ್ಥಕವೆಂದೇನೂ ಅಲ್ಲ. ವ್ಯಕ್ತಿ ದೃಷ್ಟಿಯಿಂದ ಬೇರಾವುದೇ ಉದ್ಯೋಗ ನೂಲುವುದಕ್ಕಿಂತ ಹೆಚ್ಚು ಲಾಭ ದಾಯಕವಿದ್ದೀತು. ಗಡಿಯಾರಗಳನ್ನು ಮಾಡುವುದು ಅತ್ಯಂತ ಲಾಭಕರ, ಆಕರ್ಷಕ ಕೆಲಸ. ಆದರೆ ಅದರಲ್ಲಿ ಎಷ್ಟು ಜನ ತೊಡಗಿಯಾರು? ಹಳ್ಳಿಗಳ ಕೋಟಿಗಟ್ಟಲೆ ಜನರಿಗೆ ಅದರಿಂದ ಏನು ಪ್ರಯೋಜನ? ಆದರೆ ಹಳ್ಳಿಗರು ತಮ್ಮ ಮನೆಗಳನ್ನು ಪುನರ್ನಿರ್ಮಿಸುವುದಾದರೆ, ತಮ್ಮ ಪೂರ್ವಜರಂತೆ ಬದುಕ ತೊಡಗಿದರೆ, ತಮ್ಮ ಬಿಡುವಿನ ವೇಳೆಯನ್ನು ಸದುಪಯೋಗಗೊಳಿಸಲು ಪ್ರಾರಂಭಿಸುವುದಾದರೆ ಇತರ ಎಲ್ಲ ಉದ್ಯೋಗಗಳೂ ತಾವಾಗಿಯೇ ಮತ್ತೆ ಹುಟ್ಟಿ ಬಂದಾವು. ಆರಿಸಿಕೊಳ್ಳಲು ಜನರ ಮುಂದೆ ಉದ್ಯೋಗಗಳ ಅವರ್ಗೀಕೃತ ಪಟ್ಟಿಯೇ ಇದೆ, ಆದರೆ ಎಲ್ಲರಿಗೂ ಸಾಧ್ಯವಾದ ಒಂದೇ ಒಂದು ಉದ್ಯೋಗವೂ ನಮ್ಮ ಬಳಿ ಇದೆ, ಆಗ ಪ್ರಗತಿಯೇ ಸಾಧ್ಯವಾಗದು. ಎಲ್ಲರೂ ತಮ್ಮ ಮುಂದಿರುವ ಆ ಏಕೈಕ ಉದ್ಯೋಗವನ್ನು ಆರಿಸಿಕೊಳ್ಳದಿರಬಹುದು. ಬೇರಾವುದೇ ಉದ್ಯೋಗವನ್ನು ಅವಲಂಬಿಸಬಯಸುವವರು ಖಂಡಿತವಾಗಿ ಅವಲಂಬಿಸಲಿ. ಆದರೆ ರಾಷ್ಟ್ರದ ಶಕ್ತಿಸಾಮರ್ಥ್ಯವನ್ನೆಲ್ಲ ಈಗ ಎಲ್ಲರೂ ಅವಲಂಬಿಸಬಹುದಾದಂಥ ನೂಲುವ ಉದ್ಯೋಗಕ್ಕೇ ಕೇಂದ್ರೀಕರಿಸಬೇಕು. ಬಹುಮಂದಿ ವಿಶಾಲ ಜನಸ್ತೋಮಕ್ಕಂತೂ ಬೇರಾವ ಉದ್ಯೋಗವೂ ಇಲ್ಲವೇ ಇಲ್ಲ.೩೭

ರಾಟೆ ಜನಕೋಟಿಯ ಪ್ರತ್ಯಾಶೆಯ ಸಂಕೇತ. ಚರಖಾವನ್ನು ಕಳೆದು ಕೊಂಡಾಗಲೇ ನಮ್ಮ ಜನ ತಮ್ಮ ಸ್ವಾತಂತ್ರ್ಯವನ್ನೂ ಕಳೆದುಕೊಂಡರು. ರಾಟೆ ಬೇಸಾಯಕ್ಕೆ ಪೂರಕವಾಗಿತ್ತು, ಅದಕ್ಕೆ ಗೌರವ ಕೊಟ್ಟಿತ್ತು. ವಿಧವೆಗದು ಸಂಗಾತಿ–ಶಾಂತಿದಾತ. ಹಳ್ಳಿಗರನ್ನು ಆಲಸ್ಯದಿಂದ ಅದು ಕಾಯಿತು. ರಾಟೆ ತತ್ಸಂಬಂಧವಾದ ಹಿಂಜುವುದು, ಹಂಜಿಮಾಡುವುದು, ಉನಿಕೆಮಾಡುವುದು, ಬಣ್ಣ ಕೊಡುವುದು, ನೇಯ್ಗೆ—ಈ ಎಲ್ಲ ಹಿಂದಿನ ಮುಂದಿನ ಕೆಲಸಗಳನ್ನೆಲ್ಲ ಒಳಗೊಂಡಿದೆ. ಈ ಕೆಲಸಗಳು ಹಳ್ಳಿಯ ಬಡಗಿ–ಕಮ್ಮಾರರಿಗೆ ಕೈತುಂಬ ಕೆಲಸ ಕೊಡುತ್ತಿದ್ದುವು. ರಾಟೆ ಏಳುಲಕ್ಷ ಹಳ್ಳಿಗಳನ್ನೂ ಸ್ವಯಂಪೂರ್ಣ ಗೊಳಿಸಿತ್ತು. ರಾಟೆ ಮಾಯವಾದಮೇಲೆ ಎಣ್ಣೆಗಾಣವೇ ಮುಂತಾದ ಎಲ್ಲ

ಹಳ್ಳಿಯ ಉದ್ಯೋಗಗಳೂ ಹೋಗಿಬಿಟ್ಟುವು. ಹಳ್ಳಿಗಳ ವಿವಿಧ ಕಸಬುಗಳು ಸೂರೆಯಾದುವು. ಹಳ್ಳಿಗಳಲ್ಲಿದ್ದ ನಿರ್ಮಾಣ ಪ್ರತಿಭೆ—ಅವುಗಳು ತಂದಿದ್ದ ಅಲ್ಪ ಸಂಪತ್ತೂ ಕಾಣೆಯಾದುವು.

ಗ್ರಾಮ ಉದ್ಯೋಗಗಳು ನಷ್ಟಗೊಂಡ ಇತರ ದೇಶಗಳ ಉದಾಹರಣೆಗಳಿಂದ ನಮಗೆ ಉಪಯೋಗವಿಲ್ಲ. ಅಲ್ಲಿನ ಹಳ್ಳಿಗರಿಗೆ ಬೇರೆ ಪರಿಹಾರ ರೂಪದ ಅನುಕೂಲಗಳಿದ್ದುವು. ಭಾರತದ ಹಳ್ಳಿಗರಿಗೆ ಅವಾವುವೂ ಇರಲಿಲ್ಲ. ಪಶ್ಚಿಮದ ಯಾಂತ್ರೀಕೃತ ರಾಷ್ಟ್ರಗಳು ಇತರ ದೇಶಗಳನ್ನು ಶೋಷಿಸುತ್ತಿವೆ. ಭಾರತವಾದರೋ ಸ್ವತಃ ಶೋಷಿತ ರಾಷ್ಟ್ರ. ಆದುದರಿಂದ ರಾಟೆಯ ಪುನರುಜ್ಜೀವನವೇ ಅತ್ಯಂತ ಸಹಜ ಸೂಚನೆ, ಅದರಿಂದಲೇ ನಾಡಿನ ಅಭ್ಯುದಯ. ೩೮

ರಾಟೆ ವಣಿಕ್ ಸಮರದ ಸಂಕೇತವಲ್ಲ—ವ್ಯಾಪಾರೀ ಶಾಂತಿಯ ಚಿಹ್ನೆ. ಜಗತ್ತಿನ ಇತರ ರಾಷ್ಟ್ರಗಳ ವಿರುದ್ಧ ದ್ವೇಷದ ಸಂದೇಶ ಅದರದಲ್ಲ, ಸೌಹಾರ್ದ ಸ್ವಾವಲಂಬನೆಗಳೇ ಅದರ ಸಂದೇಶ. ಜಗತ್ತಿನ ಶಾಂತಿಗೆ ಬೆದರಿಕೆ ಹಾಕುವ, ಲೋಕದ ಸಂಪನ್ಮೂಲಗಳನ್ನು ಸೂರೆಮಾಡುವ ನೌಕಾದಳದ ಸಂರಕ್ಷಣೆ ಅದಕ್ಕೆ ಬೇಕಿಲ್ಲ. ತಮ್ಮ ಆಹಾರದ ಅಡಿಗೆಯನ್ನು ತಮ್ಮ ಮನೆಗಳಲ್ಲೇ ಮಾಡಿಕೊಳ್ಳುವಂತೆಯೇ ತಮ್ಮ ವಸ್ತ್ರಕ್ಕೆ ಬೇಕಾದ ನೂಲನ್ನು ತಮ್ಮ ಮನೆಯಲ್ಲೆ ನೂಲುವ ಧಾರ್ಮಿಕ ಸಂಕಲ್ಪಶಕ್ತಿ ಅದಕ್ಕೆ ಬೇಕು. ನನ್ನ ಎಷ್ಟೋ ಲೋಪದೋಷಗಳಿಗಾಗಿ ಭವಿಷ್ಯತ್ ಪೀಳಿಗೆ ನನ್ನನ್ನು ಶಪಿಸಬಹುದು. ಆದರೆ ರಾಟೆಯ ಪುನರುದ್ಧಾರಕ್ಕಾಗಿ ಅದರ ನಲ್ಹರಕೆಗೆ ನಾ ಪಾತ್ರನಾದೇನೆಂಬ ವಿಶ್ವಾಸ ನನಗಿದೆ. ನನ್ನ ಸರ್ವಸ್ವವನ್ನೂ ಅದಕ್ಕಾಗಿ ಪಣತೊಡುವೆ. ಏಕೆಂದರೆ ರಾಟೆಯ ಒಂದೊಂದು ತಿರುವೂ ಶಾಂತಿ, ಸೌಹಾರ್ದ, ಪ್ರೇಮತಂತುವನ್ನು ನೂಲುತ್ತದೆ. ೩೯

ಖಾದಿ ಮತ್ತು ಇತರ ಗ್ರಾಮ ಉದ್ಯೋಗಗಳನ್ನು ಪುನರುಜ್ಜೀವನಗೊಳಿಸಿದರೆ ಸರಳತೆ–ಕೌಟುಂಬಿಕತೆಗಳ ಆದರ್ಶಗಳನ್ನು ಜನತೆಯ ಹೃದಯಾ-ವಿಷ್ಟಗೊಳಿಸಿ ರಾಷ್ಟ್ರೀಯ ಜೀವನವನ್ನು ಪುನರ್ನಿರ್ಮಿಸಿರುವ ವಿಧಾನವನ್ನು ಕಂಡುಕೊಳ್ಳುವೆವೆಂದು ನನ್ನ ಹೇಳಿಕೆ. ಆಗ ಜಗತ್ತಿನ ದುರ್ಬಲ ಜನಾಂಗಗಳ ಶೋಷಣೆಯಿಂದ ನಿರ್ಮಿತವಾದ ಸಾಮ್ರಾಜ್ಯಶಾಹಿಯ ಸುಳಿಗೆ ಸೆಳೆಯಲ್ಪಡೆವು, ನೌಕಾಬಲ, ವಿಮಾನದಳಗಳಿಂದ ಸಂರಕ್ಷಿತವಾಗಿದ್ದು ಶಾಂತಜೀವನವನ್ನು

ದುಸ್ಸಾಧ್ಯಗೊಳಿಸಿರುವ ಭ್ರಾಂತ ಭೌತವಾದೀ ನಾಗರಿಕತೆಯನ್ನು ಅಂಗೀಕರಿಸು ವುದರಿಂದ ಪಾರಾದೇವು. ತದ್ವಿರುದ್ಧ ಸಾಮ್ರಾಜ್ಯಶಾಹಿ ಪರಿಷ್ಕೃತವಾಗಿ ಜಗತ್ತಿನ ದುರ್ಬಲ ರಾಷ್ಟ್ರಗಳನ್ನೂ ಜನಾಂಗಗಳನ್ನೂ ಪಾಶವೀಶಕ್ತಿಗೆ ಬದಲಾಗಿ ಆತ್ಮಬಲಿದಾನದ ಹಾದಿಯಿಂದ ಸಂರಕ್ಷಿಸುವ ಹಾಗೂ ತಮ್ಮ ಅತ್ಯುತ್ತಮ ಪ್ರತಿಭೆಯನ್ನು ಜಗತ್ತಿಗೆ ನೀಡುವ ಸಲುವಾಗಿ ಒಂದಾಗುವ ಸರ್ವರಾಷ್ಟ್ರ ಕೂಟವಾಗಿ ಪರಿವರ್ತಿತವಾದೀತು. ರಾಟೆ ಸಂಪೂರ್ಣವಾಗಿ ಯಶಸ್ವಿಯಾದ ಮೇಲೇ ಅಂಥ ಪರಿವರ್ತನೆ ಬಂದೀತು. ಭಾರತ ಎಲ್ಲ ಸೆಳೆತಗಳನ್ನೂ ನಿರೋಧಿಸಿಕೊಂಡು ತನ್ನ ಪ್ರಧಾನ ಅಗತ್ಯಗಳಾದ ಅನ್ನಬಟ್ಟೆಗಳ ವಿಷಯದಲ್ಲಿ ಸ್ವಯಂಪೂರ್ಣವಾಗಿಬಿಟ್ಟರೆ ಈ ಸಂದೇಶವನ್ನು ಸಾರಲು ಯೋಗ್ಯ ಸಾಧನ ವಾದೀತು.೪೦

"ಅಮೆರಿಕಕ್ಕೆ ಚರಖಾದ ಸಂದೇಶವುಂಟೆ? ಅದು ಅಣುಬಾಂಬಿಗೆ ಪ್ರತ್ಯಸ್ತ್ರವಾಗಬಲ್ಲುದೇ?" ಎಂದು ಕೇಳಿದರು 'ನ್ಯೂಯಾರ್ಕ್ ಪೋಸ್ಟ್' ಪತ್ರಿಕೆಯ ಶ್ರೀ ಆಂಡ್ರ್ಯೂ ಫ್ರೀಮನ್.

"ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ, ಇಡೀ ಜಗತ್ತಿಗೆ ರಾಟೆಯ ಸಂದೇಶ ಉಂಟೇ ಉಂಟು. ಆದರೆ ಭಾರತ ರಾಟೆಯನ್ನು ತನ್ನದೆಂದು ಅಂಗೀಕರಿ ಸಿರುವುದನ್ನು ತೋರಿಸುವವರೆಗೆ ಅದು ಸಾಧ್ಯವಿಲ್ಲ—ಭಾರತವಾದರೋ ಇನ್ನೂ ಹಾಗೆ ಅಂಗೀಕರಿಸಿಲ್ಲ. ಭಾರತದ, ಜಗತ್ತಿನ ಉಳಿವು ರಾಟೆಯಲ್ಲೇ ಅಡಕ ವಾಗಿದೆ. ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಭಾರತವೇನಾದರೂ ಯಂತ್ರದ ಗುಲಾಮವಾಗುವುದಾದರೆ ಜಗತ್ತನ್ನು ದೇವರೇ ಕಾಪಾಡಬೇಕೆನ್ನುತ್ತೇನೆ."

ಮುಂದುವರೆದು ಗಾಂಧೀಜೀ, "ಭಾರತಕ್ಕೆ ಜಗತ್ತಿನಲ್ಲಿ ಸೌಹಾರ್ದ-ಶಾಂತಿ ಸ್ಥಾಪಿಸುವ ಇನ್ನೂ ಉದಾತ್ತತರ ದೀಕ್ಷೆ ಇದೆ. ಕೇವಲ ಸಮ್ಮೇಳನಗಳ ಮೂಲಕ ಶಾಂತಿಸ್ಥಾಪನೆಯಾಗದು. ಸಮ್ಮೇಳನಗಳು ನಡೆಯುತ್ತಿದ್ದಂತೆಯೇ ಶಾಂತಿಭಂಗವಾಗುತ್ತಿರುವುದನ್ನು ನಾವು ನೋಡುತ್ತೇವೆ" ಎಂದರು.

"ಸಾಕಷ್ಟು ಬುದ್ಧಿವಂತ ಮನುಷ್ಯನಾಗಿ, ಅಮೆರಿಕದವನಾಗಿ ನಾನು ಇಷ್ಟನ್ನು ಹೇಳಬಲ್ಲೆ: ನೂಲುವವರನ್ನು ಐಲುಗಳೆಂದು ಅನೇಕ ಮಂದಿ ಅಮೆರಿಕನರು ಕರೆದಾರು. ಆದರೂ ಈ ವಿಷಯದಲ್ಲಿ ತೀವ್ರವಾಗಿ ಯೋಚಿಸು

ತ್ತಿರುವವರು ಕಡಿಮೆಯೇ. ಮಾನವ ನಾಗರೀಕತೆಯನ್ನು ವಿನಾಶದಿಂದ ಉಳಿಸುವ ಯಾವುದಾದರೊಂದು ಉಪಾಯ ಹುಡುಕಲೇಬೇಕು. ಜೀವನವನ್ನು ಸರಳವಾಗಿಸಲೇಬೇಕು"—ಎಂದು ಹೇಳಿದರು ಫ್ರೀಮನ್.

"ಮಾನವ ವ್ಯಕ್ತಿತ್ವವನ್ನು ಭರಿಸುವ ಹಾದಿಯೂ ಇಲ್ಲ" ಎಂದು ಉತ್ತರವಿತ್ತರು ಗಾಂಧೀಜೀ: "'ಈ ಕಟ್ಟಕಡೆಯವನಿಗೂ' (ಅಂಟು ದಿಸ್ ಲಾಸ್ಟ್) ಎಂಬ ಶಬ್ದವೃಂದದಲ್ಲಿ ಅಡಕವಾಗಿರುವ ವಿಚಾರಕ್ಕೆ ನಾ ಬದ್ಧ. ಆ ಪುಸ್ತಕ ನನ್ನ ಜೀವನವನ್ನೇ ತಿರುಗಿಸಿಬಿಟ್ಟಿತು. ಜಗತ್ತು ನಮ್ಮ ಬಗ್ಗೆ ನಡೆದುಕೊಳ್ಳಬಯಸುವಂತೆ ನಾವೂ ಆ ಕಟ್ಟಕಡೆಯವನ ವಿಷಯದಲ್ಲಿಯೂ ನಡೆದುಕೊಳ್ಳಬೇಕು. ಎಲ್ಲರಿಗೂ ಸಮಾನ ಅವಕಾಶ ಇರಬೇಕು. ಅವಕಾಶ ಸಿಕ್ಕಿದಲ್ಲಿ ಪ್ರತಿ ಮನುಷ್ಯನಿಗೂ ಒಂದೇ ಬಗೆಯ ಆಧ್ಯಾತ್ಮಿಕ ವಿಕಾಸ ಶಕ್ಯ. ಅದೇ ರಾಟಿಯ ಸಂದೇಶ."

"ಅಮೆರಿಕನರೂ ರಾಟಿ ಹಿಡಿಯಬೇಕೆನ್ನುವಿರಾ?" ಎಂದು ಅವರು ಕೇಳಿದರು.

"ಹೌದು" ಎಂದರು ಗಾಂಧೀಜೀ: "ಅದು ಇಲ್ಲಿ ಭದ್ರವಾಗಿ ನೆಲೆಗೊಳ್ಳುವ ಮುನ್ನ ಯಾರಾದರೂ ಅಲ್ಲಿ ಅದನ್ನು ಬಳಸಿಯಾರೋ ಇಲ್ಲವೋ ನಾನರಿಯೆ. ಭಾರತ ತನ್ನ ಬಟ್ಟೆಗಾಗಿ ಅದನ್ನು ಅಂಗೀಕರಿಸಿದಲ್ಲಿ ನಾನು ಜಗತ್ತಿಗೆ ಹೇಳಲೇಬೇಕಾಗಿ ಬರುವುದಿಲ್ಲ. ಜಗತ್ತು ತಾನಾಗಿಯೇ ಅದನ್ನು ಅಂಗೀಕರಿಸೀತು. ಇಂದು ಭಾರತದ ಮೇಲೆ ಪಾಶ್ಚಾತ್ಯರ ಯಂತ್ರಗಳ ಬಿರುಸಾದ ದಾಳಿಯೇ ನಡೆಯುತ್ತಿದೆ, ಅದನ್ನು ಯಶಸ್ವಿಯಾಗಿ ತಡೆದು ನಿಲ್ಲಬೇಕಾದರೆ ಪವಾಡವನ್ನೇ ಮೆರೆಸಬೇಕಾದೀತು. ಇಂದಂತೂ ಲಕ್ಷಣಗಳೆಲ್ಲ ವಿರುದ್ಧ ದಿಕ್ಕಿನಲ್ಲಿಯೇ ಇವೆಯೆಂದು ನಾನು ಒಪ್ಪಿಕೊಳ್ಳಲೇಬೇಕು."

"ನೀವೇನೂ ಆಸೆ ಕಳೆದುಕೊಂಡಿಲ್ಲವಲ್ಲ?"

"ಸಾಧ್ಯವಿಲ್ಲ, ನಾವು ಅರಿತಿರುವುದಕ್ಕಿಂತ ಹೆಚ್ಚಾಗಿ ನಮ್ಮೊಡನೆ ಇರುವ ಆ ಸಜೀವ ಚೇತನದಲ್ಲಿ ನಮ್ಮ ನಂಬುಗೆ ಇರುವನಕ ನಿರಾಶೆ ಸಾಧ್ಯವಿಲ್ಲ."೪೧

# ಖಾದಿಯ ಅರ್ಥಶಾಸ್ತ್ರ

## ಖಾದಿ ಆರ್ಥಿಕವಾಗಿ ಸುದೃಢವೇ ?

ಜಪಾನಿನಲ್ಲಿ ತಯಾರಾದ ಫೆಂಟ್ ಬಟ್ಟೆ ಅಥವಾ ಭಾರತದ ಗಿರಣಿಗಳ ಬಟ್ಟೆಯೊಡನೆಯೂ ಸಹ ಖಾದಿ ಬೆಲೆಯಲ್ಲಿ ಸ್ಪರ್ಧಿಸೀತೇ ಎಂದು ಈ ಪ್ರಶ್ನೆಯ ಅರ್ಥವಾದರೆ ದೃಢವಾದ 'ನಕಾರ'ವೇ ಅದಕ್ಕೆ ಉತ್ತರ. ದುಡಿಮೆಯನ್ನು ಉಳಿಸುವ ಯಂತ್ರಬಲವನ್ನುಳಿದು ಮನುಷ್ಯಬಲದಿಂದಾದ ಎಲ್ಲ ಪದಾರ್ಥಗಳಿಗೂ ಈ ನಕಾರ ಅನ್ವಯವಾಗಬೇಕಾದೀತು. ಭಾರತದ ಕಾರ್ಖಾನೆಗಳಲ್ಲಿ ತಯಾರಾದ ವಸ್ತುಗಳಿಗೂ ಇದೇ ಮಾತು ಹೇಳಬೇಕಾಗಬಹುದು. ಕಾರ್ಖಾನೆಗಳಲ್ಲಿ ತಯಾರಾದ ಬಟ್ಟೆ, ಕಬ್ಬಿಣ, ಸಕ್ಕರೆ ಇವೆಲ್ಲವೂ ವಿದೇಶೀ ಪೈಪೋಟಿಯನ್ನು ಎದುರಿಸಬೇಕಾದರೆ ಒಂದಲ್ಲ ಒಂದು ಬಗೆಯಲ್ಲಿ ಪ್ರಭುತ್ವದ ನೆರವನ್ನು ಪಡೆಯಲೇ ಬೇಕಾದೀತು. ಪ್ರಶ್ನೆಯನ್ನು ಆ ರೀತಿ ಇಡುವುದೇ ತಪ್ಪು. ಬಹಿರಂಗ ಮಾರುಕಟ್ಟೆಯಲ್ಲಿ ಹೆಚ್ಚು ಸಂಘಟಿತವಾದ ಉದ್ಯಮವು ಕಡಿಮೆ ಸಂಘಟಿತವಾದ ಉದ್ಯಮವನ್ನು ಹೊಡೆದೋಡಿಸಲು ಸದಾ ಸಮರ್ಥವೇ ಇರುತ್ತದೆ. ಅದರಲ್ಲೂ ಅನೇಕ ದೇಶಗಳ ಬೆಂಬಲ, ಅಪರಿಮಿತ ಬಂಡವಾಳದ ಬಲ ಹಾಗೂ ತಾತ್ಕಾಲಿಕವಾಗಿ ನಷ್ಟಕ್ಕೇ ತನ್ನ ವಸ್ತುಗಳನ್ನು ಮಾರುವ ಸಾಮರ್ಥ್ಯ ಇರುವಾಗಲಂತೂ ಕೇಳುವುದೇ ಬೇಡ. ಈ ದೇಶದ ಉದ್ಯಮಗಳ ದುರಂತ ಅವಸ್ಥೆ ಹೀಗಿದೆ.

ಅನಿರ್ಬಂಧಿತ ವಿದೇಶೀ ಪೈಪೋಟಿಗೆ ತುತ್ತಾಗುವ ಯಾವುದೇ ರಾಷ್ಟ್ರ ಹೊಟ್ಟೆಗಿಲ್ಲದ ಸ್ಥಿತಿಗೆ ಇಳಿದೀತು, ವಿದೇಶೀಯರು ಇಷ್ಟಪಟ್ಟರೆ ಪರತಂತ್ರವೂ ಆದೀತು. ಇದಕ್ಕೆ ಶಾಂತಿಯುತ 'ಬೇಧನ' ಎನ್ನುತ್ತಾರೆ. ಒಂದು ಹೆಜ್ಜೆ ಮುಂದೆ ಹೋದರೆ ಸಾಕು, ಕೈಯಿಂದಾದ ವಸ್ತುಗಳ ಹಾಗೂ ಯಂತ್ರನಿರ್ಮಿತ ವಸ್ತುಗಳ ನಡುವಣ ಪೈಪೋಟಿಯು ಪರಿಣಾಮವೂ ಇದೇ ಆದೀತೆಂದು ಅರಿವಾಗುತ್ತದೆ. ನಮ್ಮ ಕಣ್ಣೆದುರಿಗೇ ಈ ವಿಧಾನ ನಡೆಯುತ್ತಲೇ ಇದೆ. ಸಣ್ಣ ಹಿಟ್ಟಿನ ಗಿರಣಿಗಳು ಬೀಸುವ ಕಲ್ಲನ್ನು ಓಡಿಸಿವೆ, ಸಕ್ಕರೆ ಕಾರ್ಖಾನೆಗಳು ಹಳ್ಳಿಯ ಆಲೆಮನೆಗಳನ್ನು ಮುಚ್ಚಿಸುತ್ತಿವೆ, ಹೀಗೆ ಹಳ್ಳಿಯ ಪರಿಶ್ರಮಶಕ್ತಿಯ ಈ ವಿಧದ ಉಚ್ಚಾಟನೆ ಹಳ್ಳಿಗರನ್ನು ದರಿದ್ರರನ್ನಾಗಿಸುತ್ತಿದೆ, ಧನಿಕರನ್ನು ಮತ್ತಷ್ಟು

ಧನಿಕರನ್ನಾಗಿಸುತ್ತಿದೆ. ಈ ಕ್ರಮ ಹೀಗೇ ಸಾಕಷ್ಟು ಕಾಲ ಮುಂದುವರಿದರೆ ಹೆಚ್ಚು ಶ್ರಮವಿಲ್ಲದೆ ಹಳ್ಳಿಗಳು ಹಾಳಾಗುತ್ತವೆ. ಇದಕ್ಕಿಂತ ಹೆಚ್ಚು ಕುಶಲ ವಾದ, ಹೆಚ್ಚು ಲಾಭದಾಯಕವಾದ ಗ್ರಾಮವಿನಾಶದ ಕ್ರಮವನ್ನು ಯಾವ ಚೆಂಘಿಸ್‌ಖಾನನೂ ಯೋಜಿಸಲು ಸಾಧ್ಯವಿಲ್ಲ. ಹಳ್ಳಿಗರು ತಾವಾಗಿಯೇ ಅರಿವಿಲ್ಲದೆಯೇ ಖಂಡಿತವಾಗಿ ತಮ್ಮ ವಿನಾಶಕ್ಕೆ ತಾವೇ ಕಾರಣರಾಗುತ್ತಿದಾರೆ, ಇದೇ ದುರಂತ. ಬೇಸಾಯವೂ ಸಹ ಲಾಭಕರವಾಗದಂತಾಗಿಬಿಟ್ಟಿದೆ, ಇಲ್ಲಿಗೆ ಅವರ ದುಃಖದ ಕತೆಯ ಪೂರ್ತಿ. ಕೆಲವು ಬೆಳೆಗಳಲ್ಲಂತೂ ಬಿತ್ತಿದ ಬೀಜದ ಬೆಲೆಯೂ ಹುಟ್ಟುತ್ತಿಲ್ಲ.

ಈ ಎಲ್ಲ ಭಯಂಕರ ಒಪ್ಪಿಗೆಯ ಬಳಿಕವೂ ಖಾದಿಯೊಂದೇ ಆರ್ಥಿಕ ಕಾರ್ಯಕ್ರಮವೆಂದು ನಾ ಹೇಳುವುದರ ಅರ್ಥವೇನು? ಪ್ರಸ್ತಾಪವನ್ನು ಪೂರಾ ಮಂಡಿಸುತ್ತೇನೆ:

“ಗಂಡಸಾಗಲಿ ಹೆಂಗಸಾಗಲಿ ಭಾರತದ ಲಕ್ಷಾಂತರ ಹಳ್ಳಿಗಳ ಹದಿನಾರು ವರ್ಷಕ್ಕೆ ಮೀರಿದ ಪ್ರತಿಯೊಬ್ಬ ದೃಢಕಾಯ ಮನುಷ್ಯನಿಗೂ ಹೊಲದಲ್ಲೋ, ಮನೆಯಲ್ಲೋ ಅಥವಾ ಕಾರ್ಖಾನೆಯಲ್ಲೋ ಕೆಲಸ ಕೊಡುವ ಹಾಗೂ ಸಾಕಷ್ಟು ಪ್ರತಿಫಲ ಸಿಗುವಂತೆ ಮಾಡುವ ಉತ್ತಮತರ ವಿಧಾನವೊಂದನ್ನು ಯೋಜಿಸಬೇಕು, ಅಥವಾ ಹಳ್ಳಿಗಾಡಿನವರಿಗೆಲ್ಲ ಆವಶ್ಯಕವಾದ ಹಾಗೂ ಅವರ ಹಕ್ಕಾದ ಕ್ರಮಬದ್ಧ ಜೀವನದ ಸುಖಸೌಕರ್ಯಗಳನ್ನು ಕೊಡಲೋಸುಗ ಹಳ್ಳಿಗಳನ್ನೆಲ್ಲ ನಿರ್ನಾಮ ಮಾಡಿ ಅವುಗಳ ಸ್ಥಳದಲ್ಲಿ ಸಾಕಷ್ಟು ನಗರಗಳನ್ನು ನಿರ್ಮಿಸಬೇಕು; ಅಲ್ಲಿನ ತನಕ ಭಾರತದ ಲಕ್ಷಾಂತರ ಹಳ್ಳಿಗಳಿಗೆ ಖಾದಿಯೊಂದೇ ನಿಜವಾದ ಆರ್ಥಿಕವಾಗಿ ದೃಢ ಕಾರ್ಯಕ್ರಮ.” ಇದರ ಅರ್ಥ ಇಷ್ಟೆ: ನಾವು ಯೋಚಿಸಬಹುದಾದಷ್ಟು ಕಾಲಕ್ಕೂ ಖಾದಿಯೇ ನಿಲ್ಲಬೇಕಾದೀತು.

ನಮ್ಮ ಹಳ್ಳಿಗಳ ಲಕ್ಷಾಂತರ ಜನ ದಿನದಿನಕ್ಕೂ ಕಡುಬಡವರಾಗುತ್ತಿದಾರೆ. ಹಳ್ಳಿಗೆ ಹೋಗಿ ನೋಡುವವರಿಗೆಲ್ಲ ಇದು ತಿಳಿದೀತು. ತಜ್ಞರ ಹೇಳಿಕೆಯೂ ಇದನ್ನು ಸಾಕಷ್ಟು ಸಿದ್ಧಮಾಡುತ್ತದೆ. ಅಂಥ ಲಕ್ಷಾವಧಿ ಜನರಿಗೆ ಕೆಲಸ ಒದಗಿಸುವುದು — ಮಜೂರಿ ಕೊಡುವುದೇ ಇಂದಿನ ಅತ್ಯವಸರದ ಸಮಸ್ಯೆ. ಜನ ಆರ್ಥಿಕವಾಗಿ, ಮಾನಸಿಕವಾಗಿ, ನೈತಿಕವಾಗಿ ಹೆಚ್ಚು ಹೆಚ್ಚು ಬಡವರಾಗುತ್ತಿದಾರೆ. ದುಡಿಯಲು, ಯೋಚಿಸಲು, ಬದುಕಲೂ ಸಹ ಇಚ್ಛೆ

ಯನ್ನೇ ಅವರು ಕಳೆದುಕೊಳ್ಳತೊಡಗಿದಾರೆ. ಅವರ ಬದುಕು ಜೀವಂತ ಸಾವು. ಖಾದಿ ಅವರಿಗೆ ದುಡಿಮೆಯನ್ನು, ಉಪಕರಣವನ್ನು ಹಾಗೂ ಅವರು ತಯಾರಿಸುವ ವಸ್ತುವಿಗೆ ಸಿದ್ಧವಾದ ಪೇಟೆಯನ್ನು ಅವರಿಗೆ ನೀಡುತ್ತದೆ. ನಿನ್ನೆ ನಿಟ್ಟುಸಿರಾಶೆ ಇದ್ದೆಡೆ ಇಂದು ಅದು ಅವರಿಗೆ ಆಸೆ ಮೂಡಿಸುತ್ತದೆ.

"ಅಂಥ ಆಶಾದಾಯಕ ಕಾರ್ಯವಾಗಿದ್ದರೆ ಖಾದಿಯದೇಕೆ ಇಷ್ಟು ಅಲ್ಪ ಪ್ರಗತಿ?" ಎಂದು ಕೇಳುತ್ತಾರೆ ಶಂಕಾಗ್ರಸ್ತರು. ಉತ್ತರ: ಲಕ್ಷಾಂತರ ಜನರ ದೃಷ್ಟಿಯಿಂದ ಖಾದಿ ಸಾಧಿಸಿರುವ ಪ್ರಗತಿ ಅಲ್ಪವೆನಿಸಿದರೂ ಇತರ ಒಂದೊಂದು ಉದ್ಯೋಗಕ್ಕೂ ಹೋಲಿಸಿದರೆ ಅತಿವ್ಯಾಪಕವಾಗಿದೆ. ಅತ್ಯಂತ ಹೆಚ್ಚು ಮಂದಿ ಕೂಲಿಗಾರರಿಗೆ ಅತ್ಯಂತ ಹೆಚ್ಚು ಹಣವನ್ನು ಕೂಲಿಯಾಗಿ ವರ್ಷಂಪ್ರತಿ ಹಂಚುತ್ತದೆ, ವ್ಯವಸ್ಥಾವೆಚ್ಚ ತೀರಾ ಕಡಿಮೆ, ಒಂದೊಂದು ಕಾಸೂ ಜನರಲ್ಲೇ ಹಂಚಿಹೋಗುತ್ತದೆ. ಅಖಿಲಭಾರತ ಚರಖಾ ಸಂಘ ಪ್ರಕಟಿಸುವ ಅಂಕಿ ಅಂಶಗಳನ್ನು ಅಭ್ಯಸಿಸಿ ಇದನ್ನು ಯಾರು ಬೇಕಾದರೂ ಪ್ರಮಾಣಮಾಡಿಕೊಳ್ಳಬಹುದು.

ಖಾದಿ ಜನರಲ್ಲಿ ಮನೆಮಾಡಿಕೊಂಡಿರುವ ಪೂರ್ವಗ್ರಹದ ವಿರುದ್ಧ, ಪ್ರಭುತ್ವದ ರಕ್ಷಣೆಯಿಲ್ಲದೆ ಅನೀತಿಯುತ ಪೈಪೋಟಿಯನ್ನು ಎದುರಿಸಿ, ಅರ್ಥಶಾಸ್ತ್ರದ ತಜ್ಞರೆನಿಸಿಕೊಂಡವರ ಸದ್ಯದ ಅಭಿಪ್ರಾಯಗಳನ್ನು ಎದುರಿಸಿ, ಅಗ್ಗದ, ಇನ್ನೂ ಅಗ್ಗದ ಖಾದಿ ಬೇಕೆಂಬ ಖಾದಿಧಾರಿಗಳ ಬೇಡಿಕೆಗೆ ಇದಿರಾಗಿ ಮುಂದೆ ಸಾಗಬೇಕಾಗಿದೆ. ಮುಖ್ಯವಾಗಿ, ಕಂಬನಿಯ ನಾಡಾದ ಈ ದೇಶದ ಹಳ್ಳಿಗರಿಗೆ ಹಾಗೂ ನಗರವಾಸಿಗಳಿಗೆ ನಿಜವಾದ ಅರ್ಥಶಾಸ್ತ್ರದ ಅರಿವುಂಟುಮಾಡಿಕೊಡುವ ಪ್ರಶ್ನೆ ಇದಾಗಿಬಿಟ್ಟಿದೆ. ಇದು ಎಲ್ಲ ಧರ್ಮಗಳನ್ನೂ ಮೀರಿದ್ದು. ಹಳ್ಳಿಗಾಡಿನಲ್ಲಿ ಇರುವ ಹಿಂದೂ, ಮುಸಲ್ಮಾನ್, ಕ್ರೈಸ್ತರು ಎಲ್ಲರೂ ಅದೇ ಬರ-ಬಡತನಗಳ ಬೇನೆಯಿಂದ ಬಳಲುತ್ತಿದಾರೆ. ವ್ಯತ್ಯಾಸವೇನಾದರೂ ಇದ್ದರೆ ಅದು ಕೇವಲ ಪ್ರಮಾಣದಲ್ಲಷ್ಟೇ.

ಗಜಗಜದ ಲೆಕ್ಕದಲ್ಲಿ ಖಾದಿ ಗಿರಣಿ ಅರಿವೆಗಿಂತ ತುಟ್ಟಿಯಾಗಿದ್ದರೂ ಒಟ್ಟಿನಲ್ಲಿ, ಹಳ್ಳಿಗರ ದೃಷ್ಟಿಯಿಂದ ಇದೊಂದೇ ಅತ್ಯಂತ ಆರ್ಥಿಕ-ವ್ಯವಹಾರ್ಯ ಕಾರ್ಯಕ್ರಮ. ಈ ಕಾರ್ಯಕ್ರಮದ ಪರಿಪೂರ್ಣ ಪರಿಶೀಲನೆಗಾಗಿ ಖಾದಿಯೆಂದರೆ ಇತರ ಗ್ರಾಮಉದ್ಯೋಗಗಳೂ ಸಮಾವಿಷ್ಟವಾಗಿವೆಯೆಂದು ಅರ್ಥ ಮಾಡಬಹುದು.೪೨

ಸಾಮಾನ್ಯ ಅರ್ಥಶಾಸ್ತ್ರದಿಂದ ಖಾದಿಯದು ಭಿನ್ನ. ಸಾಮಾನ್ಯ ಅರ್ಥಶಾಸ್ತ್ರ ಮಾನವ ಅಂಶವನ್ನು ಗಣಿಸದು. ಖಾದಿಯದಾದರೋ ಪೂರಾ ಮಾನವ ಅಂಶಕ್ಕೇ ಸಂಬಂಧಿಸಿದ್ದು. ಸಾಮಾನ್ಯ ಅರ್ಥಶಾಸ್ತ್ರ ಹೇಳಿಕೇಳಿ ಸ್ವಾರ್ಥನಿಷ್ಠ, ಖಾದಿಯದು ಅಗತ್ಯವಾಗಿ ನಿಸ್ಸ್ವಾರ್ಥಪರ. ಸ್ಪರ್ಧೆ ಹಾಗೂ ಧಾರಣೆಗಳ ಏರಿಳಿತ ಖಾದಿಯ ಕಲ್ಪನೆಯಿಂದ ವಿದೂರ. ಹೋಟೆಲುಗಳಿಗೂ ಮನೆಯ ಅಡಿಗೆಮನೆಗಳಿಗೂ ಸ್ಪರ್ಧೆಯುಂಟೆ ? ತನ್ನ ದುಡಿಮೆಯ ಬೆಲೆಯನ್ನು ಲೆಕ್ಕಹಾಕುವ ಸಂಗತಿಯೇ ಗೃಹರಾಣಿಯ ತಲೆಗೆ ಹೊಗದು. ಮಕ್ಕಳನ್ನು ಸಾಕುವುದು ಹೇಗೋ ಹಾಗೆಯೇ ಅಡಿಗೆಯ ಕೆಲಸವೂ ತನ್ನ ಕರ್ತವ್ಯವೆಂದು ಆಕೆಯ ತಿಳಿವಳಿಕೆ. ಆಕೆಯೇನಾದರೂ ತನ್ನ ಕೆಲಸಕ್ಕೆ ಕೂಲಿ ಲೆಕ್ಕಹಾಕ ತೊಡಗಿದರೆ ಅದರ ತರ್ಕ ಆಕೆಯ ಅಡಿಗೆಮನೆ ಹಾಗೂ ಮಕ್ಕಳುಮರಿಯ ವಿನಾಶದ ಕಡೆಗೆ ಆಕೆಯನ್ನು ಓಡಿಸಿಕೊಂಡು ಹೋದೀತು. ಕೆಲವರಂತೂ ಎರಡನ್ನೂ ಎಸಗಿಬಿಟ್ಟದಾರೆ. ಆದರೆ ದೈವವಶಾತ್ ಆ ಪಂಥ ಅಷ್ಟು ಪ್ರಬಲ ವಾಗುವ ಸೂಚನೆಯಿಲ್ಲ. ಮನೆಯ ರಾಟೆಯನ್ನು ಹಾಳುಮಾಡಿ ನಾವು ಭಾರತದ ಮಾನವತೆಗೆ ಪಾಪವೆಸಗಿದೆವೆಂಬುದನ್ನು ಕಂಡುಕೊಳ್ಳದಂತೆ ಮಾಡಿ ರುವುದು ನಮ್ಮ ಆಂತರಿಕ ಆಲಸ್ಯವೇ. ನಮ್ಮ ಪಾಪಕ್ಕೆ ಪಶ್ಚಾತ್ತಾಪಪಟ್ಟು ಶಾಂತಿದಾಯೀ ಚರಖಕ್ಕೆ ಮರಳೋಣ.೪೩

## ನಿಯಮಗಳು

ಖಾದಿಯ ನೇಕಾರರು ಖಾದಿ ಅರ್ಥಶಾಸ್ತ್ರದ ನಿಯಮಗಳ ಪಾಲನೆಯ ವಿಷಯದಲ್ಲಿ ಹೆಚ್ಚು ಏಕಚಿತ್ತತೆಯನ್ನು ಹಿಂದೆಂದಿಗಿಂತ ಹೆಚ್ಚಾಗಿ ಇಂದು ಒತ್ತಿಹೇಳಬೇಕಾದ ಅಗತ್ಯ ಒದಗಿದೆಯೆಂದು ನನಗನಿಸಿದೆ. ಆ ನಿಯಮಗಳಲ್ಲಿ ಕೆಲವು ಸಾಮಾನ್ಯ ಅರ್ಥಶಾಸ್ತ್ರದ ನಿಯಮಗಳಿಗಿಂತ ಪ್ರಧಾನವಾಗಿ ವಿಭಿನ್ನ. ಆ ಪ್ರಕಾರ ಒಂದು ಕಡೆ ತಯಾರಾದ ವಸ್ತುಗಳನ್ನು ಜಗತ್ತಿನ ಎಲ್ಲ ಕಡೆಗೂ ಕಳುಹಿಸುತ್ತಾರೆ, ಕಳುಹಿಸಲು ಪ್ರಯತ್ನಿಸುತ್ತಾರೆ. ಉತ್ಪತ್ತಿ ಮಾಡಿದವರು ಬಳಸಲೇ ಬೇಕಿಲ್ಲ. ಖಾದಿಯಲ್ಲಿ ಹಾಗಲ್ಲ. ಅದು ಉತ್ಪಾದನೆಯಾದೆಡೆಯೇ ಅದರ ಉಪಯೋಗವೂ ಆಗಬೇಕು, ನೂಲುವವರು ನೇಯುವವರೇ ಬಳಸಿದರೂ ಒಳ್ಳಿತೇ, ಇದು ಅದರ ವೈಶಿಷ್ಟ್ಯ. ಹೀಗೆ ಬಳಸಿದರೆ ಖಾದಿಯ ಬೇಡಿಕೆ

ಸ್ವತಸ್ಸಿದ್ಧ. ಈ ವಿಚಾರವನ್ನು ನಾವು ಮುಟ್ಟದೆಯೇ ಹೋಗಬಹುದು. ಈ ಆದರ್ಶವನ್ನು ಮುಟ್ಟುವ ಪ್ರಮಾಣದಲ್ಲಿ ಖಾದಿಯ ಮೂಲ್ಯ ನಿರ್ಣಯ ವಾದೀತು. ತೀರಾ ಸಂಕುಚಿತ ಅರ್ಥದಲ್ಲಿ ಬೇಸಾಯವೊಂದರ ಹೊರತು (ಬೇಸಾಯವನ್ನು ಕೈಗಾರಿಕೆಯೆಂದು ತಿಳಿಯಬಹುದಾದರೆ) ಖಾದಿ ಮಾತ್ರವೇ ಈ ವಿಶೇಷ ಅರ್ಥದಲ್ಲಿ ಕುಟೀರ ಉದ್ಯಮ. ಖಾದಿ ನೂಲುವವರು, ನೇಯು ವವರು ತಮ್ಮ ಬಳಕೆಗಾಗಿಯೇ ನೂತು ನೇಯ್ದರೆ ಸ್ವಾಭಾವಿಕವಾಗಿಯೇ ಅದು ಅವರಿಗೆ ಅತ್ಯಂತ ಅಗ್ಗವಾದೀತು. ನೂಲುವವರೂ ನೇಯುವವರೂ ಖಾದಿಯ ಈ ಸರಳ ಅರ್ಥಶಾಸ್ತ್ರವನ್ನು ಅರಿಯುವಂತೆ ಶಿಕ್ಷಣ ಕೊಡಬೇಕು.

ಅಂದಮೇಲೆ ಖಾದಿಯನ್ನು ತಯಾರಿಸಿದ ಸ್ಥಳದಿಂದ ಬಹುದೂರ ಮಾರಾಟಕ್ಕಾಗಿ ಕಳುಹಿಸಬಾರದೆಂದು ಅರ್ಥವಾಗುತ್ತದೆ. ಹೆಚ್ಚುವರಿ ಖಾದಿ ಯನ್ನು ತಯಾರಾದ ಹಳ್ಳಿಯಲ್ಲೇ ಮಾರಬೇಕಾದೀತು. ಹಾಗೂ ಹೆಚ್ಚಾಗಿ ಉಳಿದರೆ ತಯಾರಾದ ಜಿಲ್ಲೆಯಲ್ಲಿ ಮಾರಾಟಮಾಡಬೇಕು. ಅನಾದಿಕಾಲದಿಂದ ಕಲಾತ್ಮಕ ಮಾದರಿ ವಸ್ತ್ರವನ್ನು ನೇಯ್ದ ಕುಟುಂಬಗಳು ವಿಶೇಷ ಮಾದರಿಯ ವಸ್ತ್ರಗಳನ್ನು ನಿಸ್ಸಂಶಯವಾಗಿ ತಯಾರಿಸಿಯಾರು. ಹಳ್ಳಿಗರಿಗೆ ಸತತ ಉದ್ಯೋಗ ಹಾಗೂ ಆದಾಯದ ಸೆಲೆಯಾದ ಗ್ರಾಮಸ್ಥರ ಖಾದಿಯ ಗತಿ ಏನೇ ಆದರೂ ಇಂಥ ವಿಶೇಷ ಖಾದಿ ಉಳಿದೇ ತೀರೀತು.

ಇದೇನೂ ಚರಖಾ ಸಂಘದ ಆಡಳಿತದಲ್ಲಿ ಕ್ರಾಂತಿ ತರುವುದಿಲ್ಲ. ಅದರ ಭಂಡಾರಗಳು ಎಂದಿನಂತೆ ನಡೆದಾವು. ವಿಚಾರಕ್ಷೇತ್ರದಲ್ಲಿ ಇದು ಖಂಡಿತ ಕ್ರಾಂತಿಯೇ. ಖಾದೀ ಕಾರ್ಯಕರ್ತರಲ್ಲಿ ಉತ್ತಮ ಬುದ್ಧಿವಂತರು ಗ್ರಾಮೀಣ ಖಾದಿಯ ಮಾದರಿ, ಬಾಳಿಕೆ ಹಾಗೂ ಹಳ್ಳಿಗರ ಅಭಿರುಚಿಗೆ ತಕ್ಕಂಥ ಗ್ರಾಮೀಣ ಖಾದಿಯ ನಿರ್ಮಾಣಕ್ಕಾಗಿ ತಮ್ಮ ಬುದ್ಧಿಚಾತುರ್ಯಗಳನ್ನು ವಿನಿಯೋಗಿಸ ಬಹುದು. ಹೀಗೆ ನೂಲುವವರು–ಹಿಂಜುವವರು, ನೂಲುವವರು–ನೇಕಾರರು ಹಾಗೂ ಖಾದೀ ಕಾರ್ಯಕರ್ತರ ನಡುವೆ ಉತ್ತಮತರವಾದ ಹೆಚ್ಚು ಸಜೀವ ಸಂಪರ್ಕ ಉಂಟಾಗಬೇಕು. ಪಟ್ಟಣದಲ್ಲಿ ಮಾರಾಟವನ್ನು ಹೆಚ್ಚಿಸುವ ದಗದಗಿಯ ಧಾವಂತವಿರದು. ನಗರವಾಸಿಗಳ ಬೇಡಿಕೆಗೆ ಅನುಸಾರವಾಗಿ, ಸ್ವಲ್ಪ ಖಾದಿಯನ್ನಾದರೂ ಬಡ ನೂಲುವವರ ಹಾಗೂ ನೇಕಾರರ ಪರವಾಗಿ ಮಾರದೆ ತಣಿಯದ ಅಲ್ಲಿನ ಖಾದಿಪ್ರೇಮಿಗಳ ಪ್ರಚಾರಕ್ಕೆ ಅನುಗುಣವಾಗಿ ಈ

ಮಾರಾಟದ ಏರ್ಪಾಟು ಆದೀತು. ಹಳ್ಳಿಯ ತೊಡಿಗೆಯಾಗಿ ಶಾಶ್ವತ ಆಧಾರ ಪಡೆದಾಗಲೇ ಖಾದಿ ಸ್ಥಿರವಾದೀತು, ಇದು ನೆನಪಿನಲ್ಲಿರಲಿ.೪೪

## ಹತ್ತಿಯ ಬೇಸಾಯ

ಹತ್ತಿಯ ಬೆಳೆಗಾರರು ತಮ್ಮ ಉಪಯೋಗಕ್ಕಾಗಿ ಕೈಯಲ್ಲಿ ನೂತ ನೂಲಾಗಿ ಪರಿವರ್ತಿಸಿ ಖಾದಿ ತಯಾರಿಸಲು ತಮ್ಮ ಬೆಳೆಯಲ್ಲಿ ಒಂದು ಪ್ರಮಾಣದಷ್ಟು ಹತ್ತಿಯನ್ನು ಸಂಗ್ರಹ ಮಾಡಿಡಲು ಪ್ರೇರೇಪಿಸಲು ವ್ಯಾಪಕ ಚಳುವಳಿಯೊಂದು ನಡೆಯಬೇಕೆಂದು ಪತ್ರಲೇಖಕರೊಬ್ಬರು ಸೂಚಿಸಿದಾರೆ. ಹತ್ತಿಬೆಳೆ ಇಲ್ಲದ ಪ್ರದೇಶಗಳಲ್ಲಿ ರೈತರು ತಮ್ಮ ಬಳಕೆಗಾಗಿ ತರಕಾರಿ ಬೆಳೆಯುವಂತೆ ತಮಗಾಗಿ ಹತ್ತಿ ಬೆಳೆದುಕೊಳ್ಳಲು ಉತ್ತೇಜಿಸಬೇಕೆಂದೂ ಅವರ ಸಲಹೆ. ಈ ಪ್ರಯತ್ನ ಜನಪ್ರಿಯವಾದರೆ ರೈತರಿಗೆ ಖಾದಿ ಅಗ್ಗವಾದೀತೆಂದು ಅವರ ವಾದ. ಖಾದಿ ಚಳುವಳಿ ಬರುವ ಮುನ್ನ ದಕ್ಷಿಣದಲ್ಲಿ ರೈತರು ಈ ಕ್ರಮ ಅನುಸರಿಸುತ್ತಿದ್ದರೆಂದೂ ಆತ ಹೇಳಿದಾರೆ.

ಪತ್ರಲೇಖಕರ ಸಲಹೆಯಲ್ಲಿ ತುಂಬ ಶಕ್ತಿಯಿದೆ. ಹತ್ತಿ ಬೆಳೆಗಾರರು ತಮ್ಮ ಬಳಕೆಗಾಗಿ ನಾಕಷ್ಟು ಹತ್ತಿಯನ್ನು ಕಾಯ್ದಿಟ್ಟುಕೊಳ್ಳಬೇಕು ಎಂಬ ಪ್ರಯೋಗವನ್ನು ರಾಜಪುತ್ರಸ್ಥಾನದ ಬಿಚೊಲಿಯಾ, ಬಾರ್ದೋಲಿ ಹಾಗೂ ಕಾಥೇವಾಡಗಳಲ್ಲಿ ಮಾಡಲಾಗುತ್ತಿದೆ. ಸಂಗ್ರಹಿಸಿಟ್ಟ ಹತ್ತಿಯ ಧಾರಣೆ ಏರಿದಾಗ ಬೆಳೆಗಾರರು ಅದರ ಆಕರ್ಷಣೆಯನ್ನು ತಡೆದುನಿಲ್ಲುವುದು ಕಷ್ಟಕರ ಎಂದು ಕಾಥೇವಾಡದಲ್ಲಿ ಅನುಭವಕ್ಕೆ ಬಂದಿದೆ. ಬೆಳೆಗಾರರು ಖಾದಿಯ ಅರ್ಥಶಾಸ್ತ್ರವನ್ನು ಅರಿಯುವತನಕ ತಮ್ಮ ಬಿಡುವಿನ ವೇಳೆಯಲ್ಲಿ ಹತ್ತಿಯನ್ನು ನೂಲುವ ಘಟ್ಟಕ್ಕೆ ತರುವ ಮುನ್ನದ ಪೂರ್ವಭಾವಿಕ್ರಿಯೆಗಳಿಗಾಗಿ ಉಪಯೋಗಿಸಿದ ಶ್ರಮದಿಂದ ಹತ್ತಿಯನ್ನು ಹೆಚ್ಚಿನ ಧಾರಣೆಗೆ ಮಾರಿದ ಫಲಿತಾಂಶವೇ ಸಿಕ್ಕೀತು, ಜತೆಗೆ ಸಟ್ಟಾ ವ್ಯಾಪಾರಿಯ ಮುಷ್ಟಿಯಿಂದ ಬಿಡುಗಡೆಯೂ ದೊರಕೀತು ಎಂಬುದು ಅವರಿಗೆ ಮನವರಿಕೆ ಆಗುವವರೆಗೆ ಇದು ಅಸಾಧ್ಯ. ಅರ್ಥಾತ್ ಅ.ಭಾ. ಚರಖಾ ಸಂಘ ಬೆಳೆಗಾರರಿಗೆ ಖಾದಿಯ ಅರ್ಥಶಾಸ್ತ್ರವನ್ನು ತಿಳಿಸಿಕೊಡಬೇಕು. ಖಾದಿ ಕೆಲಸ ಎಲ್ಲ ಶಾಖೆಗಳನ್ನೂ ಆವರಿಸಬೇಕಾದರೆ

ಹತ್ತಿ ಬೆಳೆಗಾರರೊಡನೆಯೂ ಖಾದಿ ಕಾರ್ಯಕರ್ತರು ನಿಕಟ ಸಂಪರ್ಕ ಬೆಳೆಸಿ ಕೊಳ್ಳಬೇಕೆಂಬುದು ನಿಸ್ಸಂಶಯ. ಪೇಟೆಯ ಉಪಯೋಗಕ್ಕಾಗಿ ಖಾದಿ ತಯಾರಿಸಲು ಹತ್ತಿ ಕೊಳ್ಳುವುದಕ್ಕೂ ಇದು ಅತ್ಯಾವಶ್ಯಕ, ಏಕೆಂದರೆ ಇಂದಿ ನಂತೆ ಬಹಿರಂಗ ಪೇಟೆಯಲ್ಲಿ ಹತ್ತಿಯನ್ನು ಕೊಳ್ಳದೆ ಬೆಳೆಗಾರರಿಂದಲೇ ನೇರ ವಾಗಿ ಕೊಳ್ಳಬಹುದು. ಸಟ್ಟಾವ್ಯಾಪಾರಿಯಿಂದ ಮುಕ್ತರಾಗಿ, ಹತ್ತಿ ಪೇಟೆಯ ಏರಿಳಿತಗಳಿಂದ ಬಿಡುಗಡೆಹೊಂದಿ ಖಾದಿಯ ಬೆಲೆಯನ್ನು ಸ್ಥಿರಗೊಳಿಸ ಬೇಕಾದರೆ ಬೆಳೆಗಾರರೊಡನೆ ಸಂಪರ್ಕ ಸಾಧಿಸಿ ಅವರು ನಮ್ಮೊಡನೆ ನೇರಾಗಿ ವ್ಯವಹರಿಸುವಂತೆ ಉತ್ತೇಜಿಸಬೇಕು. ಖಾದಿಯ ಪ್ರಗತಿ ಹೆಚ್ಚಿದಂತೆಲ್ಲ ಅತ್ಯಂತ ತುಟ್ಟಿಯಾಗಿ ಮಾರಿ ಅತಿ ಅಗ್ಗವಾಗಿ ಕೊಳ್ಳುವ ಇಂದಿನ ವಣಿಕ್ ಪ್ರಪಂಚ ಅನುಸರಿಸುವ ಕ್ರಮುಗಳಿಗಿಂತ ನಮ್ಮ ವಿಧಾನ ತೀರಾ ಭಿನ್ನವೆಂಬುದು ನಮಗೆ ತಿಳಿದೀತು. ವ್ಯಾಪಾರೀ ಜಗತ್ತು ಇಂದು ಸಮಾನಗಣನೆಯ ಆಧಾರದ ಮೇಲೆ ನಿಂತಿಲ್ಲ. 'ಕೊಳ್ಳುವವರೇ, ಎಚ್ಚರ!'—ಇದು ಅದರ ನೀತಿ. 'ಸರ್ವ ರಿಗು ಸಮತೆ'—ಇದು ಖಾದಿಯ ಅರ್ಥಶಾಸ್ತ್ರದ ನೀತಿ. ಆದುದರಿಂದ ಅದು ಇಂದಿನ ಆತ್ಮಘಾತುಕ ಸ್ಪರ್ಧಾಮಾರ್ಗವನ್ನು ತ್ಯಜಿಸುತ್ತದೆ. ಖಾದಿ ಅರ್ಥ ಶಾಸ್ತ್ರದ ಸಂಯೋಜನೆ ದರಿದ್ರರ, ನಿಸ್ಸಹಾಯಕರ ಹಿತಕ್ಕಾಗಿ. ಕಾರ್ಯಕರ್ತರು ಜನತೆಯಲ್ಲಿ ಲೀನರಾಗಿ ಅವರ ನಂಬುಗೆ ಗಳಿಸುವಷ್ಟರವುಟ್ಟಿಗೆ ಖಾದಿ ಯಶಸ್ವಿ ಆದೀತು. ಅವರ ನಂಬುಗೆ ಗಳಿಸಲು ಅವರ ನಡುವೆ ನಿಸ್ಸ್ವಾರ್ಥವಾಗಿ ದುಡಿಯುವುದೊಂದೇ ದಾರಿ.೪೫

## ಧಾರಣೆಗಳು

ಬಾಳು ದುಡ್ಡಿಗಿಂತ ದೊಡ್ಡದು. ಏನೂ ಕೆಲಸಮಾಡಲಾಗದ ನಮ್ಮ ಅಲ್ಪ ಆದಾಯದ ಮೇಲೆ ಹೊರೆಯಾದ ವೃದ್ಧ ತಂದೆತಾಯಿಗಳನ್ನು ಕೊಲ್ಲುವುದು ಅಗ್ಗವೇ. ನಮ್ಮ ಐಹಿಕ ಸುಖಕ್ಕೆ ಬೇಕಿಲ್ಲದ, ಯಾವ ಪ್ರತಿಫಲವೂ ಇಲ್ಲದೆ ಸಾಕಬೇಕಾಗಿರುವ ನಮ್ಮ ಮಕ್ಕಳನ್ನು ಸಾಯಿಸಿಬಿಡುವುದೂ ಅಗ್ಗವೇ. ಆದರೆ ತಂದೆತಾಯಂದಿರನ್ನೂ ಕೊಲ್ಲೆವು, ಮಕ್ಕಳನ್ನೂ ಸಾಯಿಸೆವು. ಅವರನ್ನು ಸಾಕುವುದು, ಅದಕ್ಕೆ ಎಷ್ಟೇ ವೆಚ್ಚವಾಗಲಿ, ಭಾಗ್ಯವೆಂದು ಎಣಿಸುತ್ತೇವೆ. ಹಾಗೆಯೇ ಉಳಿದೆಲ್ಲ ಅರಿವೆಗಳನ್ನೂ ತೊರೆದು ಖಾದಿಯನ್ನು ನಾವು ನಡೆಸಿ

ಕೊಂಡು ಹೋಗಬೇಕು. ಕೇವಲ ಅಭ್ಯಾಸಬಲದಿಂದ ಖಾದಿಯನ್ನು ಧಾರಣೆ ವಾಸಿಯ ದೃಷ್ಟಿಯಿಂದ ನೋಡುತ್ತೇವೆ, ಅಷ್ಟೆ. ಖಾದಿ ಅರ್ಥಶಾಸ್ತ್ರದ ಬಗೆಗೆ ನಮ್ಮ ಕಲ್ಪನೆಯನ್ನು ಬದಲಿಸಿಕೊಳ್ಳಬೇಕು. ಐಹಿಕ ಸೌಖ್ಯದ ದೃಷ್ಟಿಯಿಂದ ಅದನ್ನು ಅಭ್ಯಸಿಸಿದರೆ ಖಾದಿ ಎಂದೂ ತುಟ್ಟಿಯೆಂದೆನಿಸದು. ಸಂಕ್ರಮಣ ಕಾಲದಲ್ಲಿ ಕೌಟುಂಬಿಕ ಅರ್ಥವ್ಯವಸ್ಥೆಯ ಪಲ್ಲಟವನ್ನು ಸಹಿಸಿಕೊಳ್ಳಬೇಕು.

ಈಗ ನಾವು ಭಾರಿ ಹೊರೆ ಹೊತ್ತು ಸಾಗುತ್ತಿದೇವೆ. ಲ್ಯಾಂಕಷೈರಿಗಾಗಿ, ಭಾರತದ ಗಿರಣಿಗಳಿಗಾಗಿ ಹತ್ತಿಯ ಉತ್ಪಾದನೆ ಕೇಂದ್ರೀಕೃತವಾಗಿದೆ. ವಿದೇಶಗಳಲ್ಲಿ ಧಾರಣೆವಾಸಿ ನೋಡಿ ಇಲ್ಲಿನ ಹತ್ತಿಯ ಧಾರಣೆ ನಿಗದಿಮಾಡುತ್ತಾರೆ. ಖಾದಿ ಅರ್ಥಶಾಸ್ತ್ರದ ಬೇಡಿಕೆಗೆ ಅನುಗುಣವಾಗಿ ಹತ್ತಿಯ ಉತ್ಪಾದನೆ ಹಂಚಿ ಹೋಯಿತೆಂದರೆ ಹತ್ತಿಯ ಧಾರಣೆವಾಸಿಯಲ್ಲಿ ಏರಿಳಿತವುಂಟಾಗದು. ಏನೇ ಆದರೂ ಇಂದಿಗಿಂತ ಇಳಿದೀತು. ಪ್ರಭುತ್ವದ ರಕ್ಷಣೆಯಿಂದ ಅಥವಾ ಸ್ವಪ್ರಯತ್ನದ ಮೂಲಕ ಜನ ಖಾದಿಯನ್ನು ಮಾತ್ರವೇ ಬಳಸುವ ಅಭ್ಯಾಸ ಮಾಡಿಕೊಂಡರೆಂದರೆ ಅವರು ದುಡ್ಡಿನ ದೃಷ್ಟಿಯಿಂದ ಅದನ್ನೆಂದೂ ಪರಿಗಣಿಸಲಾರರು. ಲಕ್ಷಾಂತರ ಮಂದಿ ಶಾಕಾಹಾರಿಗಳು ಮಾಂಸಾಹಾರದ ಬೆಲೆ ಹಾಗೂ ಸಸ್ಯಾಹಾರದ ಬೆಲೆಯನ್ನು ಹೋಲಿಸುವರೇ ? ಮಾಂಸಾಹಾರವನ್ನು ಪುಕ್ಕಟೆ ನೀಡಿದರೂ ಅದನ್ನು ಉಣ್ಣದೆ ಉಪವಾಸವಾದರೂ ಇದ್ದಾರು ಅವರು.೪೬

ಸ್ವಾವಲಂಬಿ ಖಾದಿಯೆಂದರೆ ತಮಗಾಗಿಯೇ ಹಳ್ಳಿಗರು ನೂತು, ನೇಯ್ದು, ಸಾಧ್ಯವಿದ್ದಾಗಲೆಲ್ಲ ಅದೇ ಹಳ್ಳಿಗಳಲ್ಲೇ ಬೆಳೆದ, ಅಲ್ಲೇ ಹಿಂಜಲ್ಪಟ್ಟ ಹತ್ತಿಯಿಂದಾದ ಖಾದಿ ಎಂದರ್ಥ. ಇದೇ ಖಾದಿಯ ನಿಜವಾದ ದೀಕ್ಷೆ. ಹಳ್ಳಿಗರೊಡನೆ ಸತತ ಮಾನವೀಯ ಸಂಪರ್ಕದಿಂದಲೇ ಈ ಆದರ್ಶ ಸಾಧಿಸಬಹುದು. ಅವರು ಅದರ ಆರ್ಥಿಕ ಮೌಲ್ಯದ ಹೊರತಾಗಿ ಶ್ರಮದ ಗೌರವ ಹಾಗೂ ಮೌಲ್ಯವನ್ನು ಅರಿಯಬೇಕು. ಈ ಯೋಜನೆಯಂತೆ ಹಳ್ಳಿಗಳ ಅಭಿರುಚಿಗೆ ತಕ್ಕಂತೆ ಖಾದಿಯನ್ನು ತಯಾರಿಸಲಾದೀತು. ಉಬ್ಬೆಗೆ ಕೂಡ ಹಾಕುವುದಿಲ್ಲ, ಒಗೆಯುವುದೂ ಇಲ್ಲ, ಪ್ರತಿಯೊಬ್ಬ ಹಳ್ಳಿಗನೂ ತಾನೇ ಸ್ವಚ್ಛ ಮಾಡಿಕೊಂಡಾನು. ಅದರ ಬಾಳಿಕೆಯನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಹೀಗೆ ತಯಾರಾದ ಖಾದಿ ಬೇರಾವ ಬಟ್ಟೆಗಿಂತಲೂ ಅಗ್ಗವಾದೀತು. ಪೇಟೆಯ ಖಾದಿಗೆ ಎಲ್ಲ ಬಗೆಯ ಪ್ರಾಸಂಗಿಕ ಖರ್ಚು ಸೇರುತ್ತದೆ, ಉದಾ : ವಿಶೇಷ ಕ್ರಮಗಳದು,

ಸಂಗ್ರಹದ್ದು, ಬಾಡಿಗೆ, ಸಾರಿಗೆ, ಕಮಿಷನ್ ಇತ್ಯಾದಿ. ಹಳ್ಳಿಯ ಖಾದಿಗೆ ಇವಾವ ವೆಚ್ಚವೂ ತಗಲದು. ಹಳ್ಳಿಗರ ಉಪಯೋಗಕ್ಕಾಗಿ ಮಿಕ್ಕ ಸಂಗ್ರಹವನ್ನು ಪಟ್ಟಣಗಳವರು ಪಡೆಯಬಹುದು.೪೭

## ಹೊಸ ಯೋಜನೆ

ಖಾದಿಯ ನೂತನ ಯೋಜನೆ ಎನಿಸಿದುದನ್ನು ಓದುಗರು ಪೂರಾ ಅರ್ಥ ಮಾಡಿಕೊಳ್ಳಲಿ. ನೂತನ ಎನಿಸಿದುದೆಂದು ಬೇಕೆಂತಲೇ ಕರೆಯುತ್ತೇನೆ, ಏಕೆಂದರೆ ಈಗ ಮಾಡಬೇಕೆಂದಿರುವ ಕಾರ್ಯ ಹಳ್ಳಿಗರಿಗೆ ಬಟ್ಟೆ ಕೊಡಬೇಕಾದರೆ ಮೊದಲಿನಿಂದ ಯೋಚಿಸಿಕೊಂಡು ಬಂದಿರುವುದರ ತರ್ಕಬದ್ಧವಾದ ಮುಂದಿನ ಹೆಜ್ಜೆ. ಖಾದಿಯನ್ನು ಎಂದೂ ಪಟ್ಟಣಿಗರಿಗಾಗಿಯೇ ಎಂಬು ಯೋಜಿಸಿರಲಿಲ್ಲ. ಪಟ್ಟಣಿಗರು ಬದುಕುವ ಸಲುವಾಗಿ ಇಂದು ಹಳ್ಳಿಗರ ರಕ್ತ ಹೀರಲ್ಪಡುತ್ತಿರುವಂತೆ ಮುಂದೆಯೂ ಹಳ್ಳಿಗರ ರಕ್ತ ಹೀರಲೆಂದು ಯೋಜಿಸಿಲ್ಲ. ಪ್ರಾರಂಭದಿಂದ ತಿರುವುಮುರುವಾಗಿರುವುದನ್ನು ಸರಿಮಾಡಿ ಸ್ವಾಭಾವಿಕ ಸಂಬಂಧವನ್ನು ಪುನಃ ಸ್ಥಾಪಿಸಲು ಖಾದಿ ಯೋಜಿಸಲ್ಪಟ್ಟಿದೆ. ಬ್ರಿಟಿಷರು ಬರುವ ಮುನ್ನವೂ ಪಟ್ಟಣಗಳಿದ್ದುವು. ಆಗಲೂ ಸ್ಥಿತಿ ಕೆಟ್ಟಿತ್ತು, ಈಗ ಮತ್ತೂ ಕೆಟ್ಟಿದೆ. ಸಣ್ಣ ಪಟ್ಟಣಗಳು ಮಹಾನಗರಗಳಾದುವು. ಈ ಮಹಾನಗರಗಳು ಹಲವಾರು ಲಕ್ಷಾಧಿಕಾರಿಗಳನ್ನು ಹೊಂದಿದ್ದರೂ ಮುಖ್ಯವಾಗಿ ಬ್ರಿಟಿಷ್ ಒಡೆಯರಿಗಾಗಿಯೇ ಇದ್ದುವು. ಈ ಭಾರಿ ಪಟಂಗತನವನ್ನು ಸರಿಪಡಿಸಲೆಂದೇ ಖಾದಿ. ಗ್ರಾಮೀಣ ಭಾರತದ ಗುಲಾಮಗಿರಿಯ ಸಂಕೇತವೇ ಗಿರಣಿ ಬಟ್ಟೆ, ಖಾದಿಯಾದರೋ ಅದರ ಆರ್ಥಿಕ ಹಾಗೂ ರಾಜಕೀಯ ಸ್ವಾತಂತ್ರ್ಯದ ಸಂಕೇತ, ಅಥವಾ ಸಂಕೇತವಾಗಬೇಕು. ಹಾಗಾಗದಿದ್ದಲ್ಲಿ ಅದಕ್ಕೆ ಅರ್ಥವಿಲ್ಲ. ಆದಕಾರಣ ಖಾದಿಯ ಬೆಳವಣಿಗೆಯ ಕ್ರಮದಲ್ಲಿ ಉಂಟಾಗುವ ಯಾವುದೇ ಸ್ಪಷ್ಟವಾದ ಪರಿವರ್ತನೆ ಸ್ವಾಗತಾರ್ಹ.

ಸದ್ಯದ ಬೆಳವಣಿಗೆ: ಉಳಿದ ವಿಷಯದಲ್ಲಿ ಒಳಿತಾಗಿ ತೋರಿದರೂ ಅದನ್ನು ನೂತು, ನೇಯ್ದು, ಆದರೆ ಅದನ್ನು ತಾವೇ ತೊಡದಿದ್ದ ಹಳ್ಳಿಗರಿಗೆ ಅಷ್ಟು ಒಳಿತಾಗಲಿಲ್ಲ. ಅದರ ಉಪಯೋಗದ ಗೌರವ, ಬೆಲೆಗಳನ್ನು ಅವರು ಅರಿಯಲೂ ಇಲ್ಲ, ಮನಗಾಣಲೂ ಇಲ್ಲ. ದೋಷ ಅವರದಲ್ಲ. ಕಾರ್ಯಕರ್ತರೇ

ಅದನ್ನು ಅರ್ಥಮಾಡಿಕೊಳ್ಳಲಿಲ್ಲ. ಪಟ್ಟಣಿಗರು ಖಾದಿ ಧರಿಸಿ ತಪಶ್ಚರ್ಯೆ ಮಾಡಬೇಕಾಗಿ ಬಂತು. ತಾವು ಸುಲಭವಾಗಿ ಕೊಡಬಹುದಾಗಿದ್ದ ನಾಲ್ಕು ರೂಪಾಯಿ ಹೆಚ್ಚು ಕೊಟ್ಟು ತಪಸ್ಸನ್ನು ಕೊಂಡು ಫಲತಃ ದೇಶಭಕ್ತರೆನಿಸಿ ಕೊಂಡರು. ಖಾದಿಯ ತಳಪಾಯವನ್ನೇ ಅಲಕ್ಷಿಸಿ ಚರಖಾ ಸಂಘ ತನ್ನ ಶ್ರದ್ಧೆಯನ್ನು ಹೇಗೆ ತಾನೇ ಸುಳ್ಳಾಗಿಸೀತು? ಆದಕಾರಣ ಹಳ್ಳಿಗರು ಖಾದಿ ಧಾರಿಗಳಾಗುವಂತೆ ಮಾಡಲು ಈಗ ಅದು ತನ್ನ ಸಾಧನಸಂಪತ್ತನ್ನು ಬಳಸು ತ್ತಿದೆ. ಸ್ವಾಭಾವಿಕವಾಗಿ ಕೈನೂಲನ್ನು ನೂಲುವವರು ನೇಯುವವರಿಂದ ಕಾರ್ಯಾರಂಭಮಾಡುತ್ತದೆ. ಈ ಪ್ರಯತ್ನ ಫಲಿಸಿದರೆ, ಫಲಿಸಲೇಬೇಕು, ಸ್ವಲ್ಪ ಕಾಲದ ಬಳಿಕ ಮಹಾನಗರಗಳ ಹಾಗೂ ಪಟ್ಟಣಗಳ ಮಾರುಕಟ್ಟೆಗಳಲ್ಲಿ ಸಾಕಷ್ಟು ಖಾದಿ ಇದ್ದೀತು. ಭಾರತದಲ್ಲಿ ಸಿಗುವ ಏಕಮಾತ್ರ ವಸ್ತ್ರ ಖಾದಿಯೇ ಆದೀತು. ಈ ಪರಾಕಾಷ್ಠೆಗಾಗಿ ಅಖಿಲ ಭಾರತ ಚರಖಾ ಸಂಘ ನಿಷ್ಠೆಯಿಂದ ಕೆಲಸಮಾಡುತ್ತಿದೆ. ಅದರ ಪರಿಶೋಧನೆಗಳು ಖಾದಿಯಲ್ಲಿ ಅಂಥ ಅಂತಶ್ಶಕ್ತಿ ಇಲ್ಲವೆಂದು ತೋರಿಸಿಕೊಟ್ಟಲ್ಲಿ ತನ್ನ ದಿವಾಳಿತನವನ್ನು ಘೋಷಿಸಲು ಸಂಘ ಹಿಂಜರಿಯದು. ಯಂತ್ರಯುಗದಲ್ಲಿ ನಲವತ್ತು ಕೋಟಿ ಜನರ ಮಾನಸ ದೊಡನೆ ವ್ಯವಹರಿಸುವ ಶಾಸ್ತ್ರ ಇದೆಂದು ಓದುಗ ನೆನಪಿನಲ್ಲಿಡಲಿ. ಹೀಗೆ ನೋಡಿದಾಗ ಇದೊಂದು ಅಗಾಧ ಸಮಸ್ಯೆ, ಆಕರ್ಷಕ ಹಾಗೂ ಆಸಕ್ತಿಜನಕವೂ ಸಹ. ಇದರಲ್ಲಿ ಸೋಲು—ಅದನ್ನು ಸೋಲೆನ್ನುವುದಾದರೆ—ಇಲ್ಲವೇ ಇಲ್ಲ. ಚರಖಾ ಗುಲಾಮಗಿರಿಯ ಸಂಕೇತವಾಗಿದ್ದ ಕತ್ತಲೆಯ ಯುಗಕ್ಕೆ ಹಿಂತಿರುಗುವ ಪ್ರಯತ್ನ ಇದಲ್ಲವೆಂಬುದನ್ನು ಅರ್ಥಮಾಡಿಕೊಳ್ಳಲಿ. ಚರಖಾದ ಮೂಲಕ ತನ್ನ ಬಂಧನವನ್ನು ಹರಿದೊಗೆಯಲು ಭಾರತ ಎಸಗುವ ಪ್ರಯತ್ನ ಖಂಡಿತ ಮಾನವನ ತಿಳಿವಳಿಕೆಯ, ಅರ್ಥಾತ್ ಭಾರತದ ಆತ್ಮದ ವಿಜಯವೇ. ಸ್ವತಂತ್ರ ಮನುಷ್ಯನೂ ಗುಲಾಮನೂ ಒಂದೇ ಅನ್ನ ತಿನ್ನುತ್ತಾರೆ. ಒಬ್ಬ ಸ್ವಾತಂತ್ರ್ಯದ ಅನ್ನ ತಿಂದರೆ ಮತ್ತೊಬ್ಬ ದಾಸ್ಯದ ಊಟ ಮಾಡುತ್ತಾನೆ.

ಪಟ್ಟಣಿಗರು, ನಗರವಾಸಿಗಳು ಚರಖದ ಸಂತಸದ ಸುದ್ದಿಯನ್ನು ಅರಿತು ದಾದರೆ ತಾವಾಗಿಯೇ ತಮ್ಮ ಬಿಡುವಿನ ವೇಳೆಯನ್ನು ಕುದುರೆ ಜೂಜಿನ ಕಟ್ಟೆಯಲ್ಲಿ ಜೂಜಾಡುವುದರಲ್ಲಿ ಅಥವಾ ಕ್ಲಬ್ಬುಗಳಲ್ಲಿ ಕುಡಿದು ಕಾಲಹರಣ ಮಾಡುವುದನ್ನು ಬಿಟ್ಟು ಅರಳೆ ಹಿಂಜುವುದು, ನೂಲುವುದು ಹಾಗೂ ನೇಯು

ವುದಕ್ಕೆ ವಿನಿಯೋಗಿಸಿಯಾರು. ಅವರ ಮಕ್ಕಳೋ? ತಮ್ಮ ತಂದೆತಾಯಿಗಳಿಗಾಗಿ ನೂತಾರು, ಭಾರತದ ಸ್ವಾತಂತ್ರ್ಯಕ್ಕಾಗಿ ನೂತಾರು ಮತ್ತು ಭಾರತಕ್ಕೆ ಬೇಕಾದ ಬಗೆಯ ಶಿಕ್ಷಣ ಪಡೆದಾರು.೪೮

## ಗ್ರಾಮ ಉದ್ಯೋಗಗಳು

ಗ್ರಾಮ ಉದ್ಯೋಗಗಳನ್ನು ಕುರಿತ ಕಾಂಗ್ರೆಸ್ ನಿರ್ಣಯದ ಕರ್ತನಾಗಿ ಹಾಗೂ ಅವುಗಳ ಸಂವರ್ಧನೆಗಾಗಿ ರೂಪುಗೊಳ್ಳಲಿರುವ ಸಂಸ್ಥೆಯ ಏಕೈಕ ಮಾರ್ಗದರ್ಶಿಯಾಗಿ ಈ ಉದ್ಯೋಗಗಳ ವಿಷಯವಾಗಿ ಮತ್ತು ಅವುಗಳೊಡನೆ ನಿಕಟವಾಗಿ ಸಂಬದ್ಧವಾದ ನೈತಿಕ ಹಾಗೂ ಆರೋಗ್ಯದ ಅಭ್ಯುದಯದ ವಿಷಯಕವಾಗಿ ನನ್ನ ಮನಸ್ಸಿನಲ್ಲಿ ಅತ್ಯುತ್ಕಟವಾಗಿರುವ ವಿಚಾರಗಳನ್ನು ಸಾರ್ವಜನಿಕರಿಗೆ ಬಿನ್ನವಿಸಿಕೊಳ್ಳುವುದು ಸಮಂಜಸ.

ಈ ಸಂಘವನ್ನು ನಿರ್ಮಿಸುವ ವಿಷಯಕ್ಕೆ ಹರಿಜನಯಾತ್ರೆಯ ಕಾಲಕ್ಕೆ ಮಲಬಾರನ್ನು ಪ್ರವೇಶಿಸಿದಾಗಲೇ ನಿರ್ದಿಷ್ಟ ಸ್ವರೂಪ ಬಂದಿತು. ಖಾದಿ ಕಾರ್ಯಕರ್ತರೊಬ್ಬರೊಡನೆ ಹಾಗೆಯೇ ಮಾತನಾಡುತ್ತಿದ್ದಾಗ ನಗರವಾಸಿಗಳು ಹಳ್ಳಿಗರಿಂದ ಕ್ರೂರವಾಗಿ, ಅವಿಚಾರದಿಂದ ಕಸಿದುಕೊಂಡಿರುವುದನ್ನು ಹಿಂತಿರುಗಿಸುವ ಸಲುವಾಗಿ ಪ್ರಾಮಾಣಿಕ ಪ್ರಯತ್ನ ಮಾಡುವಂಥ ಸಂಸ್ಥೆಯೊಂದು ಎಷ್ಟು ಅಗತ್ಯವೆಂಬುದು ತೋರಿಬಂತು. ಅದರಲ್ಲಿ ಎಲ್ಲರಿಗಿಂತ ಬಲವಾದ ಪೆಟ್ಟು ಬಿದ್ದಿರುವುದು ಹರಿಜನರಿಗೇ. ಸಾಮಾನ್ಯವಾಗಿ ಹಳ್ಳಿಗರೆಲ್ಲರಿಗೂ ತೆರವಾಗಿರುವ ಉದ್ಯೋಗಗಳಲ್ಲಿ ಅವರಿಗಿರುವುದು ಕೆಲವೇ. ಆದುದರಿಂದ ಅವರ ಕೈಯ ಕಸಬು ಕಳಚಿಹೋದಾಗ ಅವರು ಇತರರಿಗೆ ಹೊರೆಯಾಗಿ ಬದುಕಬೇಕಾಗುತ್ತದೆ.

ಸಾಮಾನ್ಯವಾಗಿ ಹಳ್ಳಿಯ ಎಲ್ಲ ಜನರ ಸ್ಥಿತಿಯೂ ಉತ್ತಮವೇನೂ ಅಲ್ಲ. ಮಣ್ಣು ಕೆರೆದು ಅಹನ್ಯಹನಿ ಕಾಲಕ್ಷೇಪ ಮಾಡುವ ಸ್ಥಿತಿಗೆ ಮೆಲ್ಲ ಮೆಲ್ಲನೆ ಬರುತ್ತಿದಾರೆ. ಭಾರತದಲ್ಲಿರುವ ಸಣ್ಣಪುಟ್ಟ ಯದ್ವಾತದ್ವಾ ಹಿಡುವಳಿಗಳಲ್ಲಿ ಬೇಸಾಯ ಲಾಭದಾಯಕವಲ್ಲವೆಂಬುದು ಇಂದು ಎಲ್ಲೋ ಕೆಲವರಿಗೆ ಮಾತ್ರ ಗೊತ್ತು. ಹಳ್ಳಿಗರದು ನಿರ್ಜೀವ ಬದುಕು. ಅವರ ಬಾಳೊಂದು

ಅಲ್ಪೋಪವಾಸದ ವಿಧಾನ. ಸಾಲದ ಹೊರೆಯ ಭಾರ ಬೇರೆ. ಸಾಹುಕಾರ ಸಾಲ ಕೊಡುತ್ತಲೇ ಇರುತ್ತಾನೆ, ಏಕೆಂದರೆ ಬೇರೇನೂ ಅವನಿಗೆ ತಿಳಿಯದು. ಸಾಲ ಕೊಡದಿದ್ದರೆ ಕೊಟ್ಟದ್ದೆಲ್ಲವೂ ಮುಳುಗಿಹೋದೀತು. ಹಳ್ಳಿಯ ಸಾಲದ ಪದ್ಧತಿ ಪರಿಶೀಲನೆಗೇ ಎಟುಕದು. ದೊಡ್ಡ ದೊಡ್ಡ ತನಿಖೆಗಳಾಗಿದ್ದರೂ ನಮ್ಮ ತಿಳುವಳಿಕೆ ಮಾತ್ರ ಮೇಲುಮೇಲಿನದು.

ಗ್ರಾಮ ಉದ್ಯೋಗಗಳು ನಿರ್ನಾಮಗೊಂಡುವೆಂದರೆ ಭಾರತದ ಏಳು ಲಕ್ಷ ಹಳ್ಳಿಗಳ ವಿನಾಶ ಪೂರ್ಣಗೊಂಡಂತೆಯೇ.

ನಾನು ಪ್ರತಿಪಾದಿಸಿರುವ ಸೂಚನೆಗಳನ್ನು ದಿನಪತ್ರಿಕೆಗಳು ಟೀಕಿಸಿರುವುದನ್ನು ನೋಡಿದೇನೆ. ಮಾನವನ ಸಂಶೋಧಕ ಬುದ್ಧಿ ವಶಪಡಿಸಿಕೊಂಡಿರುವ ನಿಸರ್ಗದ ಶಕ್ತಿಗಳನ್ನು ಬಳಸಿಕೊಳ್ಳುವ ದಿಶೆಯಲ್ಲಿ ವಿಮೋಚನೆಯನ್ನು ಅರಸಬೇಕೆಂದು ನನಗೆ ಬುದ್ಧಿವಾದವನ್ನೂ ನೀಡಲಾಗಿದೆ. ನೀರು, ತೈಲ ಮತ್ತು ವಿದ್ಯುತ್ತುಗಳನ್ನು ಮುಂದುವರಿಯುತ್ತಿರುವ ಪಾಶ್ಚಾತ್ಯ ಪ್ರಪಂಚದಲ್ಲಿ ಬಳಸುತ್ತಿರುವಂತೆಯೇ ನಾವೂ ಬಳಸಬೇಕೆಂದು ಟೀಕಾಕಾರರು ಹೇಳುತ್ತಾರೆ. ನಿಸರ್ಗದ ಈ ಪ್ರಚ್ಛನ್ನ ಶಕ್ತಿಗಳು ಪ್ರತಿ ಅಮೆರಿಕನನಿಗೂ ಮೂವತ್ತುಮೂರು ಜನ ಗುಲಾಮರು ಸಿಗುವಂತೆ ಮಾಡಿವೆ ಎನ್ನುತ್ತಾರೆ ಅವರು.

ಭಾರತದಲ್ಲಿ ಇದೇ ಪ್ರಕ್ರಿಯೆಯನ್ನು ಪುನರಾವರ್ತಿಸಿದರೆ ಈ ನಾಡಿನಲ್ಲಿ ಪ್ರತಿಯೊಬ್ಬನಿಗೂ ಮೂವತ್ತುಮೂರು ಮಂದಿ ಗುಲಾಮರು ಸಿಗುವ ಬದಲು ಪ್ರತಿಯೊಬ್ಬನೂ ಮೂವತ್ತುಮೂರು ಪಟ್ಟು ಹೆಚ್ಚು ಗುಲಾಮನಾದಾನು.

ಮಾಡಬೇಕೆಂದಿರುವ ಕೆಲಸಕ್ಕೆ ತೀರಾ ಕೆಲವೇ ಕೈಗಳಿರುವಾಗ ಯಾಂತ್ರೀಕರಣ ಒಳ್ಳೆಯದು. ಭಾರತದಲ್ಲಿರುವಂತೆ ಮಾಡಬೇಕಾದ ಕೆಲಸಕ್ಕೆ ಬೇಕಿರುವುದಕ್ಕಿಂತ ಹೆಚ್ಚು ಕೈಗಳಿರುವಾಗ ಅದೊಂದು ಅನಿಷ್ಟ. ಕೆಲವಾರು ಚದುರ ಗಜ ನೆಲವನ್ನು ಅಗೆಯಲು ನಾನು ನೇಗಿಲನ್ನೇನೂ ಉಪಯೋಗಿಸುವುದಿಲ್ಲ. ನಮ್ಮ ಹಳ್ಳಿಗಳಲ್ಲಿರುವ ಕೋಟಿಗಟ್ಟಲೆ ಜನರಿಗೆ ಬಿಡುವು ದೊರಕಿಸುವುದಲ್ಲ ನಮ್ಮ ಸಮಸ್ಯೆ, ವರ್ಷದಲ್ಲಿ ಆರು ತಿಂಗಳಷ್ಟು ಇರುವ ಅವರ ಬಿಡುವಿನ ವೇಳೆಯನ್ನು ಬಳಸುವುದೇ ನಮ್ಮ ಸಮಸ್ಯೆ. ಪ್ರತಿಯೊಂದು ಗಿರಣಿಯೂ ಹಳ್ಳಿಗರಿಗೆ ಒಂದು ಪಿಡುಗೇ, ವಿಚಿತ್ರವೆನಿಸೀತು ನಿಮಗೆ. ನಾನೇನೂ ಲೆಕ್ಕ ಹಾಕಿಲ್ಲ. ಆದರೆ ಸುರಕ್ಷಿತವಾಗಿ ಹೇಳಬಲ್ಲೆ—ಒಬ್ಬೊಬ್ಬ ಗಿರಣಿ ಕೆಲಸಗಾರನೂ

ಹಳ್ಳಿಗಳಲ್ಲಿ ಅದೇ ಕೆಲಸಮಾಡುವ ಹತ್ತು ಮಂದಿಯ ಕೆಲಸ ಮಾಡುತ್ತಾನೆ. ಹತ್ತು ಮಂದಿ ಹಳ್ಳಿಯ ಬಾಂಧವರ ಬಲಿ ತೆಗೆದುಕೊಂಡು ತಾನು ಹಳ್ಳಿಯಲ್ಲಿ ಗಳಿಸುತ್ತಿದ್ದುದಕ್ಕಿಂತ ಹೆಚ್ಚು ಗಳಿಸುತ್ತಾನೆ. ಹೀಗೆ ನೂಲುವ-ನೇಯುವ ಗಿರಣಿಗಳು ಹಳ್ಳಿಗರ ಬದುಕಿನ ಭಾರಿ ಸಾಧನವನ್ನೇ ಕಸಿದುಕೊಂಡಿವೆ. ಅವು ಅಗ್ಗದ ಹಾಗೂ ಉತ್ತಮವಾದ ಬಟ್ಟೆ ತಯಾರಿಸುತ್ತವೆ—ಅವು ತಯಾರಿಸುತ್ತಿರುವುದಾದರೆ—ಎಂಬುದೇನೂ ಉತ್ತರವಾಗದು. ಸಾವಿರಾರು ಮಂದಿ ಕೆಲಸಗಾರರನ್ನು ಹೊರತಳ್ಳುವ ಅತ್ಯಂತ ಅಗ್ಗದ ಗಿರಣಿ ಬಟ್ಟೆಯೂ ಹಳ್ಳಿಗಳಲ್ಲಿ ಆದ ಅತಿತುಟ್ಟಿ ಖಾದಿಗಿಂತ ತುಟ್ಟಿಯೇ. ಅಲ್ಲೇ ಕಲ್ಲಿದ್ದಲು ಬಳಸಬಹುದಾದ ಕಲ್ಲಿದ್ದಲು ಗಣಿಯವನಿಗೆ ಕಲ್ಲಿದ್ದಲು ತುಟ್ಟಿಯಲ್ಲ, ಹಾಗೆಯೇ ತನ್ನ ಖಾದಿಯನ್ನು ತಾನೇ ಉತ್ಪತ್ತಿಮಾಡುವ ಹಳ್ಳಿಗನಿಗೆ ಖಾದಿ ತುಟ್ಟಿಯಲ್ಲ. ಗಿರಣಿಗಳಲ್ಲಿ ತಯಾರಾದ ಬಟ್ಟೆ ಹಳ್ಳಿಯ ಕೆಲಸಗಾರರನ್ನು ತೊಡೆದುದಾದರೆ ಬತ್ತದ ಮತ್ತು ಹಿಟ್ಟಿನ ಗಿರಣಿಗಳು ಸಾವಿರಾರು ಮಂದಿ ಹಳ್ಳಿಯ ಹೆಣ್ಣಾಳುಗಳಿಗೆ ಕೆಲಸವಿಲ್ಲದಂತೆ ಮಾಡುತ್ತವೆ. ಜತೆಗೆ ಈ ವ್ಯವಹಾರದಲ್ಲಿ ಇಡೀ ಜನಸಮುದಾಯದ ಆರೋಗ್ಯಕ್ಕೂ ಹಾನಿಯುಂಟಾಗುತ್ತದೆ. ಮಾಂಸಾಹಾರಕ್ಕೆ ಆಕ್ಷೇಪ ಇಲ್ಲದೆಡೆ ಬಿಳಿ ಹಿಟ್ಟು, ಪಾಲಿಷ್ ಆದ ಅಕ್ಕಿಯಿಂದ ಹಾನಿಯೇನೂ ಆಗದಿರಬಹುದು. ಆದರೆ ಒಂದು ಪಕ್ಷ ಸಿಕ್ಕುವಂತಿದ್ದರೆ ತಿನ್ನಲು ಆಕ್ಷೇಪವಿಲ್ಲದಿದ್ದರೂ ಮಾಂಸಾಹಾರ ಸಿಕ್ಕದಿರುವ ಕೋಟಿಗಟ್ಟಲೆ ಜನರಿರುವ ಭಾರತದಲ್ಲಿ ಇಡೀ ಗೋಧಿಯ ಹಿಟ್ಟಿನಲ್ಲಿ ಹಾಗೂ ಪಾಲಿಷ್ ಆಗದ ಅಕ್ಕಿಯಲ್ಲಿರುವ ಪೌಷ್ಟಿಕ ಸತ್ತ್ವಾಂಶಗಳು ಸಿಗದಂತೆ ಮಾಡುವುದು ಪಾಪಕರ.

ಹಳ್ಳಿಗಾಡಿನವರಿಗೆ ಉದ್ಯೋಗ ನೀಡುವುದು ಯಾಂತ್ರೀಕರಣದಿಂದಲ್ಲ, ಅವರು ಇಂದಿನ ತನಕ ಅವಲಂಬಿಸಿರುವ ಉದ್ಯೋಗಗಳ ಪುನರುಜ್ಜೀವನದಿಂದಲೇ ಸಾಧ್ಯ ಎಂಬುದನ್ನು ತೋರಿಸಲು ಕೆಲವು ವ್ಯಾಪಕವಾದ, ಸ್ಪಷ್ಟ ಸತ್ಯಸಂಗತಿಗಳತ್ತ ಗಮನ ಸೆಳೆದಿದೇನೆ.

ಆದುದರಿಂದ ಈಗ ಇರುವ ಉದ್ಯೋಗಗಳಿಗೆ ಉತ್ತೇಜನ ನೀಡುವುದು, ಸಾಧ್ಯವಿದ್ದ ಕಡೆ ಹಾಗೂ ಅಪೇಕ್ಷಣೀಯವಾಗಿದ್ದರೆ ಸಾಯುತ್ತಿರುವ ಅಥವಾ ಸತ್ತುಹೋಗಿರುವ ಹಳ್ಳಿಯ ಉದ್ಯೋಗಗಳನ್ನು ಹಳ್ಳಿಯ ವಿಧಾನಗಳಂತೆ, ಅಂದರೆ ಅನಾದಿಕಾಲದಿಂದ ಅವರು ಮಾಡುತ್ತಿರುವಂತೆ ಹಳ್ಳಿಗರು ತಮ್ಮ ತಮ್ಮ

ಮನೆಗಳಲ್ಲೇ ನಡೆಸುವ ರೀತಿಯಲ್ಲಿ, ಪುನರುಜ್ಜೀವನಗೊಳಿಸುವುದು ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಕೆಲಸ. ಈ ಸುಲಭವಾದ ಕ್ರಮಗಳನ್ನೂ ಸಾಕಷ್ಟು ಸುಧಾರಿಸಬಹುದು—ಕೈಯಿಂದ ಹತ್ತಿ ಅರೆಯುವುದು, ಹಿಂಜುವುದು, ನೂಲುವುದು ಹಾಗೂ ನೇಯುವುದು ಈ ಕ್ರಿಯೆಗಳಲ್ಲಿ ಆಗಿರುವಂತೆ.

ಪ್ರಾಚೀನ ಕ್ರಮವು ಶುದ್ಧ ವ್ಯಕ್ತಿನಿಷ್ಠವಾದುದು, ಆ ಕಾರಣದಿಂದ ಸಾಮೂಹಿಕ ಪ್ರಯತ್ನ ಬಾರದು ಎನ್ನುತ್ತಾರೆ ಒಬ್ಬ ಟೀಕಾಕಾರ. ಈ ದೃಷ್ಟಿ ನನಗೆ ಮೇಲುನೋಟದ ದೃಷ್ಟಿ ಎನಿಸುತ್ತದೆ. ಹಳ್ಳಿಗರು ತಮ್ಮ ತಮ್ಮ ಮನೆಗಳಲ್ಲಿ ವಸ್ತುಗಳನ್ನು ತಯಾರಿಸಿದರೂ ಅವನ್ನು ಒಟ್ಟುಗೂಡಿಸಿ ಮಾರಬಹುದು, ಲಾಭ ಹಂಚಿಕೊಳ್ಳಬಹುದು. ಒಂದೇ ದಾಸ್ತಾನಿನಿಂದ ಕಚ್ಚಾವಸ್ತು ಒದಗಿಸಬಹುದು. ಸಹಕಾರೋದ್ಯಮದ ಇಚ್ಛೆ ಹುಟ್ಟಿಸಿದರೆ ಖಂಡಿತವಾಗಿಯೂ ಸಹಕಾರಕ್ಕೆ, ಶ್ರಮವಿಭಜನೆಗೆ, ಸಮಯದ ಉಳಿತಾಯಕ್ಕೆ ಮತ್ತು ದಕ್ಷ ಕೆಲಸಕ್ಕೆ ಸಾಕಷ್ಟು ಅವಕಾಶವಿದೆ. ಅಖಿಲ ಭಾರತ ಚರಖಾ ಸಂಘ ಈ ಎಲ್ಲ ಕೆಲಸವನ್ನು ೫೦೦೦ ಹಳ್ಳಿಗಳಲ್ಲಿ ಇಂದು ಮಾಡುತ್ತಿದೆ.

ಖಾದಿಯಾದರೋ ಗ್ರಾಮದ ಗ್ರಹಮಂಡಲದ ಸೂರ್ಯ. ಉಳಿದ ವಿವಿಧ ಉದ್ಯೋಗಗಳು ತಾವು ಖಾದಿಯಿಂದ ಪಡೆವ ಶಾಖ–ಸತ್ವಗಳಿಗೆ ಪ್ರತಿಯಾಗಿ ಅದಕ್ಕೆ ಬೆಂಬಲ ನೀಡುವ ಉಪಗ್ರಹಗಳು. ಖಾದಿಯಿಲ್ಲದೆ ಇತರ ಉದ್ಯೋಗಗಳು ಬೆಳೆಯಲಾರವು. ಆದರೆ ಇತರ ಉದ್ಯೋಗಗಳನ್ನು ಪುನರುಜ್ಜೀವನಗೊಳಿಸದೆ ಖಾದಿಯೂ ಹೆಚ್ಚು ಪ್ರಗತಿ ಸಾಧಿಸಲಾರದೆಂದು ನನ್ನ ಈಚಿನ ಸಂಚಾರದಲ್ಲಿ ಕಂಡುಕೊಂಡೆ. ಗ್ರಾಮಸ್ಥರು ಬಿಡುವಿನ ವೇಳೆಯನ್ನು ಲಾಭದಾಯಕವಾಗಿ ಉಪಯೋಗಿಸುವಂತೆ ಮಾಡಲು ಗ್ರಾಮಜೀವನದ ಎಲ್ಲ ಅಂಗಗಳನ್ನೂ ಸ್ಪರ್ಶಿಸಬೇಕಾದೀತು. ಈ ಎರಡೂ ಸಂಘಗಳಿಂದ ನಿರೀಕ್ಷಿಸುವುದು ಈ ಕೆಲಸವನ್ನೇ.

ಖಾದಿ ಸ್ವಸ್ಥ ಆರ್ಥಿಕ ಕಾರ್ಯಕ್ರಮವೆಂದು ಎಣಿಸದಿರುವ ಪಂಥವೊಂದು ಉಂಟೆಂದು ಬಲ್ಲೆ. ಖಾದಿಯನ್ನು ಗ್ರಾಮದ ಚಟುವಟಿಕೆಗಳ ಮಧ್ಯಬಿಂದು ಎಂದು ಹೇಳಿದುದರಿಂದ ಅಂಥವರು ಗಾಬರಿಗೊಳ್ಳದಿರಲಿ. ಖಾದಿಗೂ ಗ್ರಾಮ ಉದ್ಯೋಗಗಳಿಗೂ ಇರುವ ಸಂಬಂಧವನ್ನು ತೋರಿಸದೆ ನನ್ನ ಮನದ ಚಿತ್ರ

ವನ್ನು ಪೂರ್ಣಗೊಳಿಸುವುದು ಸಾಧ್ಯವಿಲ್ಲ. ಹಾಗೆ ನೋಡಲಾಗದವರು ಇತರ ಉದ್ಯೋಗಗಳಿಗೇ ತಮ್ಮ ಉದ್ಯಮಶಕ್ತಿಯನ್ನೆಲ್ಲ ವಿನಿಯೋಗಿಸಲಿ.೪೯

ಅತ್ಯುನ್ನತ ಮಾದರಿಯ ಯಾಂತ್ರೀಕರಣದ ಕ್ರಮಗಳಿಂದಾಗಿ ಪ್ರತಿಯೊಬ್ಬ ಅಮೆರಿಕನನೂ ಮೂವತ್ತಾರು ಮಂದಿ ಗುಲಾಮರಷ್ಟರ ಒಡೆಯನಾಗಿದಾನೆಂದು ಹೇಳಲಾಗುತ್ತದೆ. ಅಮೆರಿಕವನ್ನೇ ಮಾದರಿಯಾಗಿಟ್ಟುಕೊಂಡು ಒಬ್ಬನಿಗೆ ಮೂವತ್ತಾರು ಮಂದಿಯ ಬದಲು ಮೂವತ್ತು ಮಂದಿಯನ್ನು ಗುಲಾಮರಾಗಿ ಬಿಟ್ಟರೂ ನಮ್ಮ ೩೧ ಕೋಟಿ ಮಾನವರಲ್ಲಿ ಮೂವತ್ತು ಕೋಟಿ ಮಂದಿ ಆತ್ಮಹತ್ಯೆ ಮಾಡಿಕೊಳ್ಳಬೇಕು ಇಲ್ಲವೇ ಕೊಲ್ಲಲ್ಪಡಬೇಕು. ಕೆಲವು ಮಂದಿ ಉತ್ಸಾಹೀ ದೇಶಭಕ್ತರು ಅಂಥ ವಿಧಾನಕ್ಕೆ ಪರವಾಗಿಲ್ಲ ಎಂದಾರಷ್ಟೇ ಅಲ್ಲದೆ, ಸ್ವಾಗತಿಸಿಯಾರು. ಮೂವತ್ತು ಕೋಟಿ ಮಂದಿ ನಡೆಯಲೂ ಆರದ ನಿಶ್ಶಸ್ತ್ರ ಪ್ರಾಣಿಗಳು ಇರುವುದಕ್ಕಿಂತ ಒಂದು ಕೋಟಿ ತೃಪ್ತ, ಸಮೃದ್ಧ ಭಾರತೀಯರಿರುವುದೇ ಲೇಸು ಎನ್ನುತ್ತಾರೆ ಅವರು. ಆ ಸಿದ್ಧಾಂತಕ್ಕೆ ನನ್ನ ಬಳಿ ಉತ್ತರವಿಲ್ಲ. ಹರಿಜನಮನೋಭಾವದಿಂದ ಪರಿಪುತನಾದವ ನಾನು. ಆದುದರಿಂದ ಕೋಟ್ಯಂತರ ಹಳ್ಳಿಗರ ದೃಷ್ಟಿಯಿಂದಲೇ ನಾ ಯೋಚಿಸಬಲ್ಲೆ. ಅವರಲ್ಲಿ ಅತ್ಯಂತ ಬಡವನ ಸುಖವನ್ನೇ ನನ್ನ ಸುಖವೂ ಅವಲಂಬಿಸಲಿ ಎಂದೇನು, ಅವರು ಬದುಕಬಹುದಾದರೇ ನಾನೂ ಬದುಕಲು ಇಚ್ಛಿಸಿಯೇನು. ನನ್ನ ಅತಿಸರಳ ಬುದ್ಧಿ ಎಲ್ಲಿಗೆಂದರಲ್ಲಿಗೆ ಒಯ್ಯಬಹುದಾದ, ಎಲ್ಲೆಂದರಲ್ಲಿ ತಯಾರಿಸಬಹುದಾದ ಈ ಸಣ್ಣ ರಾಟೆಯ ಸಣ್ಣ ಕದಿರಿನಿಂದಾಚೆ ಓಡದು. ಈ ಸಂದರ್ಭದಲ್ಲಿ ಗೆಳೆಯರೊಬ್ಬರು ಪತ್ರಿಕೆಗಳಲ್ಲಿ ಪ್ರಚಲಿತವಿರುವ ಮುಂದಿನ ಅಂಶವನ್ನು ಕಳುಹಿಸಿದಾರೆ:

" ಹಲವು ಉದ್ಯಮಗಳಲ್ಲಿ ಮನುಷ್ಯಶ್ರಮವನ್ನು ತೊಡೆದುಹಾಕುತ್ತಿದ್ದ ಯಂತ್ರಗಳ ಬಳಕೆಯನ್ನು ನಿರುದ್ಯೋಗ ನಿವಾರಣೆಗಾಗಿ ನಿಲ್ಲಿಸಬೇಕೆಂದು ನಾಟ್ಜಿಗಳು ಆಜ್ಞೆಮಾಡಿದಾರೆ. ಈ ಅಪ್ಪಣೆಯನ್ನು ಕುರಿತು ಟೀಕಿಸುತ್ತಾ ' ಮ್ಯಾಂಚೆಸ್ಟರ್ ಗಾರ್ಡಿಯನ್ ' ಪತ್ರಿಕೆ : ' ನಿರುದ್ಯೋಗದ ಸಂಕಟವನ್ನು ಉಲ್ಬಣಗೊಳಿಸುವಂಥ ಯಂತ್ರಗಳ ಪರಿಣಾಮ ಕುರಿತು ಸಾಕಷ್ಟು ಚರ್ಚೆ ನಡೆದಿದೆ. ಆದರೆ ತರ್ಕಬದ್ಧವಾಗಿ ಅದರ ಬಳಕೆಯನ್ನು ನಿಲ್ಲಿಸುವ ಕೆಲಸ ನಾಟ್ಜಿಗಳ ಪಾಲಿಗೆ ಬಂದಿದೆ. ಜರ್ಮನಿ ಸಾಧಿಸಿದ ಶ್ರಮಸಾಧಕ ಯಾಂತ್ರಿಕ

ಅಭಿನವೀಕರಣದ ಪವಾಡದಂಥ ವಿಜಯವನ್ನು ಮೆಚ್ಚಲು ಇತ್ತೀಚೆಗೆ ತಾನೇ ಜಗತ್ತನ್ನು ಕೇಳಲಾಗಿತ್ತು. ಈಗ ಆ ಸರಕಾರ ಯಂತ್ರದ ಬಳಕೆಯನ್ನು ಬಹಿಷ್ಕರಿಸಿ ಅಥವಾ ಕಡಿಮೆ ಹೊತ್ತು ಕೆಲಸವನ್ನು ಮಾಡಿ ಹೆಚ್ಚು ಮಂದಿಗೆ ಉದ್ಯೋಗ ಕೊಡಲು ಒತ್ತಾಯಪಡಿಸುತ್ತ ಯಂತ್ರದೊಡನೆ ಹೋರಾಡುತ್ತಿದೆ. ನೂಲುವ ಗಿರಣಿಯನ್ನು ರಾಟೆಯಿಂದಲೂ, ಯಂತ್ರದ ಮಗ್ಗವನ್ನು ಕೈಮಗ್ಗ ದಿಂದಲೂ ಬದಲಿಸಬೇಕು ಎಂಬ ಗಾಂಧಿಯವರ ಪ್ರಯತ್ನಗಳನ್ನು ಜರ್ಮನಿಯ ಸಿಗಾರ್ (ಚುಟ್ಟ) ಕೈಗಾರಿಕೆ ಹಾಗೂ ಗಾಜಿನ ಕೈಗಾರಿಕೆಗಳಲ್ಲಿ ನಿಕಟವಾಗಿ ಅನುಸರಿಸಲಾಗುತ್ತಿದೆ.' "

'ಜರ್ಮನಿಯ ನೀತಿಮತ್ತೆಯೇ ಮಧ್ಯಯುಗದ್ದಾಗುವಾಗ ಅದರ ಅರ್ಥಶಾಸ್ತ್ರವೇಕೆ ಮಧ್ಯಯುಗದ್ದಾಗಬಾರದು?' ಎಂದು ಕೇಳಿ ಗಾರ್ಡಿಯನ್ ಪತ್ರಿಕೆ ಟೀಕಿಸಿದೆ. ಟೀಕೆಗಳಿಗೆ ಉತ್ತರ ಕೊಟ್ಟು ಒಬ್ಬ ಲೇಖಕ ಗಾರ್ಡಿಯನ್ ಪತ್ರಿಕೆಯಲ್ಲೇ ಹೀಗೆ ಬರೆದಿದಾನೆ:

"ಉತ್ಪದನೆಯಾದ ಎಲ್ಲ ವಸ್ತುಗಳೂ ಬಳಕೆಯಾಗುವಂಥ ಒಂದು ಮಿತಿಗೆ ಉತ್ಪಾದನೆಯ ಗತಿಯನ್ನು ಇಳಿಸಬೇಕೆಂದು ಬೇರೆ ಬೇರೆ ಮಾರ್ಗಗಳಲ್ಲಿ ಯತ್ನಿಸುತ್ತಿರುವ ಹಿಟ್ಲರ್, ಗಾಂಧೀ ಮತ್ತಿತರರು ಮಧ್ಯಯುಗದ ಕ್ರಮಗಳಿಗೆ ಮರಳುತ್ತಿರಬಹುದು. ಆದರೆ ಕೈಕಸಬುಗಳು ತಿರೋಗಾಮಿಯಾದುವೂ ಅಲ್ಲ, ಅಸಭ್ಯವೂ ಅಲ್ಲ. ಪ್ರತಿಯೊಂದು ಪ್ರಗತಿಪರ ಪ್ರಾಥಮಿಕ-ಮಾಧ್ಯಮಿಕ ಶಾಲೆಗಳಲ್ಲೂ ಅವನ್ನು ಕಲಿಸುತ್ತಾರೆ. ಹೊಸದಾಗಿ ಕಾಣುವ ಹಾಗೂ ಅಸಂಪ್ರದಾಯಕವಾದ ಮಾರ್ಗಗಳಿಂದ ಉಚಿತ ಸಮಯದಲ್ಲಿ ನಿರುದ್ಯೋಗ ವನ್ನು ನಿರ್ನಾಮಗೊಳಿಸದಿದ್ದರೆ ನಮ್ಮನ್ನೆಲ್ಲ ವಿನಾಶಗೊಳಿಸುವ ಕ್ರಾಂತಿಗಳು ಹಾಗೂ ಯುದ್ಧಗಳಲ್ಲಿ ಯಂತ್ರಗಾರಿಕೆ ಅಳಿಸಿಹೋದೀತು. ಕೆಳಗಿನ ಜನತೆಯ, ಮೇಲಿನ ವರ್ಗಗಳ ಸುಖಸಮೃದ್ಧಿಯನ್ನು ಸಂವರ್ಧಿಸುವವರೆಗೆ ಯಂತ್ರ ಸೌಕರ್ಯ ಅನುಕೂಲಪ್ರದ ಸಾಧನ. ಲಕ್ಷಾಂತರ ಜನರ ನಿರುದ್ಯೋಗ—ಉಪವಾಸಗಳನ್ನುಂಟುಮಾಡಿದಾಗ—ಭಾರಿ ನಾಗರಿಕವಾದ ಪಶ್ಚಿಮ ರಾಷ್ಟ್ರ ಗಳಲ್ಲಿ ಇಂದು ಹೀಗಾಗುತ್ತಿದೆ—ಅದೊಂದು ಶಾಪವೇ ಆದೀತು. ಯಂತ್ರ ಮನುಷ್ಯನಿಗಾಗಿ, ಮನುಷ್ಯ ಯಂತ್ರಕ್ಕಾಗಿ ಅಲ್ಲ. ಜನಹಿತಕ್ಕೆ ಅದು **ಅಡಿಯಾಳಾಗಬೇಕು, ಅದು ಜನರ ಒಡೆಯನಾಗಗೊಡಬಾರದು.**"

ಜರ್ಮನಿಯಲ್ಲಿ ಕತ್ತಿಹಿರಿದು ಗ್ರಾಮ ಉದ್ಯೋಗಗಳನ್ನು ಪುನರುದ್ಧರಿಸಲಾಗುತ್ತಿದೆಯೆಂಬುದು ಇಲ್ಲಿ ಪ್ರಕೃತವಲ್ಲ. ಅತ್ಯುನ್ನತ ತಂತ್ರಕೌಶಲವನ್ನು ತೋರಿರುವ, ಯಾಂತ್ರೀಕರಣದಲ್ಲಿ ಅತ್ಯಂತ ಪ್ರಗತಿಪರವಾದ ರಾಷ್ಟ್ರಗಳಲ್ಲಿ ಒಂದಾದುದು ತನ್ನ ಅಗಾಧ ನಿರುದ್ಯೋಗ ಪ್ರಶ್ನೆ ಪರಿಹರಿಸಲು ಗ್ರಾಮ ಉದ್ಯೋಗಗಳಿಗೆ ಮರಳುತ್ತಿದೆ. ಇದೇ ನಮಗೆ ಪ್ರಕೃತ.೫೦

ಕಳೆದ ವರ್ಷದ ನನ್ನ ವಿಸ್ತೃತ ಹರಿಜನಯಾತ್ರೆಯ ಸಮಯದಲ್ಲಿ ನಾವು ನಡೆಸುತ್ತಿರುವ ರೀತಿಯ ಖಾದಿ ಕೆಲಸ ಖಾದಿಯನ್ನು ಸಾರ್ವತ್ರಿಕಗೊಳಿಸಲಾಗಲಿ ಹಳ್ಳಿಗಳ ಪುನರುಜ್ಜೀವನಕ್ಕಾಗಲಿ ತೀರಾ ಸಾಲದೆಂದು ಮನವರಿಕೆ ಆಯಿತು. ಅದು ಕೇವಲ ಕೆಲವರಿಗೆ ಮಾತ್ರ ಸೀಮಿತವಾಗಿತ್ತು. ಖಾದಿಯನ್ನೇ ಉಪಯೋಗಿಸಿದವರು ನಾವು ಇನ್ನೇನೂ ಮಾಡಬೇಕಾಗಿಲ್ಲ, ಬೇರೆ ವಸ್ತುಗಳು ಹೇಗೆ, ಎಲ್ಲಿ ತಯಾರಾದುವು ಎಂಬುದನ್ನೂ ಗಮನಿಸದೆ ಬಳಸಬಹುದು ಎಂಬ ಮನೋಭಾವ ತಾಳಿದಂತಿತ್ತು. ಹೀಗೆ ಖಾದಿ ನಿರ್ಜೀವ ಸಂಕೇತವಾಗುತ್ತಿತ್ತು. ಸ್ಥಿತಿಯನ್ನು ಹೀಗೆಯೇ ಬಿಟ್ಟುಬಿಟ್ಟರೆ ನಿಸ್ಸತ್ತ್ವಗೊಂಡು ಖಾದಿ ಸಾಯಲೂಬಹುದೆನಿಸಿತು. ಖಾದಿಗೇ ಮೀಸಲಾದ ಏಕಾಗ್ರ, ಸಘನಪ್ರಯತ್ನ ಯಶಃಪ್ರದವಾಗುತ್ತಿರಲಿಲ್ಲವೆಂದಲ್ಲ, ಏಕಾಗ್ರತೆಯೂ ಇರಲಿಲ್ಲ, ಸಘನತೆಯೂ ಇರಲಿಲ್ಲ. ಎಲ್ಲರೂ ತಮ್ಮ ಎಲ್ಲ ಬಿಡುವಿನ ವೇಳೆಯನ್ನೂ ಚರಖಾ ಅಥವಾ ತಕಲಿಗೆ ಮೀಸಲಾಗಿಟ್ಟಿರಲಿಲ್ಲ. ಖಾದಿಯನ್ನೇ ಬಳಸಬೇಕೆಂದು ಎಲ್ಲರೂ ನಿಶ್ಚಯಿಸಿರಲಿಲ್ಲ. ನೂಲುವವರಿಗಿಂತ ಖಾದಿಧಾರಿಗಳ ಸಂಖ್ಯೆಯೇನೋ ಹೆಚ್ಚಿತ್ತು. ಉಳಿದವರೆಲ್ಲ ಆಲಸಿಗಳಾಗಿಯೇ ಇದ್ದರು. ಒತ್ತಾಯದ ಬಿಡುವು ಸಾಕಷ್ಟು ಇದ್ದ ಅಸಂಖ್ಯ ಜನ ನಮ್ಮಲ್ಲಿ ಇದ್ದರು. ಇದು ನಮಗೆ ಘಾತಕ ಪರಿಸ್ಥಿತಿ ಎನಿಸಿತು ನನಗೆ. 'ಈ ಜನ ಎಂದೂ ಸ್ವರಾಜ್ಯ ಗಳಿಸರು'—ಎಂದುಕೊಂಡೆ ನನಗೆ ನಾನೇ. ಏಕೆಂದರೆ ಅವರ ಸ್ವೇಚ್ಛಾಪೂರ್ವಕ ಆಲಸ್ಯ ಅವರನ್ನು ಸ್ವದೇಶದ ವಿದೇಶದ ಸುಲಿಗೆಗಾರರಿಗೆ ನಿರಂತರವಾಗಿ ತುತ್ತಾಗಿಸಿತ್ತು. ಶೋಷಕ ಹೊರಗಡೆಯವನಿರಲಿ, ಭಾರತದ ಪಟ್ಟಣಿಗನೇ ಇರಲಿ ಇವರ ಸ್ಥಿತಿಯಂತೂ ಒಂದೇ, ಸ್ವರಾಜ್ಯವಂತೂ ಇವರಿಗಿಲ್ಲ. ಆದಕಾರಣ "ಇವರನ್ನು ಏನಾದರೂ ಮಾಡುವಂತೆ ಕೇಳೋಣ. ಖಾದಿಯಲ್ಲಿ ಆಸಕ್ತಿ ಬರದಿದ್ದರೆ ತಮ್ಮ ಪೂರ್ವಜರು ಮಾಡುತ್ತಿದ್ದು, ಈಗ ಅಳಿದಿರುವ,

ಯಾವುದಾದರೂ ಕೆಲಸ ಕೈಗೊಳ್ಳಲಿ" ಎಂದು ಅಂದುಕೊಂಡೆ. ಬಹಳ ವರ್ಷಗಳ ಹಿಂದೇನೂ ಅಲ್ಲ, ಅವರು ತಯಾರಿಸುತ್ತಿದ್ದ ದಿನಬಳಕೆಯ ಎಷ್ಟೋ ವಸ್ತುಗಳಿದ್ದುವು. ಈಗಲಾದರೋ ಅವಕ್ಕಾಗಿ ಹೊರಜಗತ್ತಿಗೆ ಬಾಯಿಬಿಡುತ್ತಿದಾರೆ. ನಗರವಾಸಿ ಜನ ತಮ್ಮ ದಿನಬಳಕೆಗಾಗಿ ಹಳ್ಳಿಗಳನ್ನು ಅವಲಂಬಿಸುತ್ತಿದ್ದ, ಈಗ ಮಾತ್ರ ಅವನ್ನೇ ಬೇರೆ ನಗರಗಳಿಂದ ತರಿಸಿಕೊಳ್ಳುತ್ತಿದ್ದ ಅನೇಕ ವಸ್ತುಗಳಿದ್ದುವು. ಹಳ್ಳಿಗರು ತಮ್ಮ ಬಿಡುವಿನ ವೇಳೆಯನ್ನು ಪ್ರಯೋಜನಕರವಾದುದು ಯಾವುದಕ್ಕಾಗಿಯಾದರೂ ಮೀಸಲಿಡಲು, ನಗರವಾಸಿಗಳು ಹಳ್ಳಿಯಲ್ಲಿ ತಯಾರಾದ ಈ ವಸ್ತುಗಳನ್ನು ಬಳಸಲು ನಿಶ್ಚಯಿಸಿದ ಕ್ಷಣವೇ ಹಳ್ಳಿಗರು ಹಾಗೂ ಪಟ್ಟಣಿಗರ ನಡುವೆ ಕಡಿದುಹೋಗಿದ್ದ ಸಂಬಂಧ ಕೂಡಿಬಂದೀತು. ಹಳ್ಳಿಗಳಲ್ಲಿ ಕುಳಿತು ಯೋಚಿಸದ ಹೊರತು ಯಾವ ಯಾವ ಜೀರ್ಣವಾದ, ನಷ್ಟಗೊಂಡ ಉದ್ಯೋಗಗಳನ್ನು ಪುನರುದ್ಧರಿಸಬಹುದೆಂಬುದನ್ನು ಶೋಧಿಸಿ, ಪಟ್ಟಮಾಡಿ, ವರ್ಗೀಕರಿಸುವುದು ಸಾಧ್ಯವಿರಲಿಲ್ಲ. ಆದರೆ ನಾನು ಎರಡು ವಿಷಯಗಳನ್ನು ಆರಿಸಿಕೊಂಡೆ: ಆಹಾರವಸ್ತುಗಳು, ತೊಡಿಗೆಯ ವಸ್ತುಗಳು. ಖಾದಿ ಇದ್ದೇ ಇತ್ತು. ಆಹಾರವಸ್ತುಗಳ ವಿಷಯದಲ್ಲಿ ನಾವು ಸ್ವಯಂಪೂರ್ಣತೆಯನ್ನು ತ್ವರೆಯಿಂದ ನೀಗಿಕೊಳ್ಳುತ್ತಿದ್ದೆವು. ಕೆಲವೇ ವರ್ಷಗಳ ಹಿಂದೆ ನಮ್ಮ ಬತ್ತ ನಾವೇ ಕುಟ್ಟಿಕೊಳ್ಳುತ್ತಿದ್ದೆವು, ಹಿಟ್ಟನ್ನು ನಾವೇ ಬೀಸಿಕೊಳ್ಳುತ್ತಿದ್ದೆವು. ಸದ್ಯಕ್ಕೆ ಆರೋಗ್ಯದ ಪ್ರಶ್ನೆಯನ್ನು ಒತ್ತಟ್ಟಿಗೆ ಇಡಿ. ಹಿಟ್ಟಿನ ಗಿರಣಿ, ಬತ್ತದ ಗಿರಣಿಗಳು ಲಕ್ಷಾಂತರ ಮಂದಿ ಮಹಿಳೆಯರನ್ನು ನಿರುದ್ಯೋಗಕ್ಕೆ ದೂಡಿವೆ, ಅವರ ಜೀವನೋಪಾಯವನ್ನು ಕಸಿದುಕೊಂಡಿವೆ. ಇದಂತೂ ನಿರ್ವಿವಾದವಾದ ಸಂಗತಿ. ಸಕ್ಕರೆ ಬೆಲ್ಲದ ಸ್ಥಳ ಆಕ್ರಮಿಸುತ್ತಿದೆ. ಬಿಸ್ಕತ್ತುಗಳು, ಸಿಹಿತಿಂಡಿಗಳೇ ಮುಂತಾದ ಸಿದ್ಧವಾದ ಆಹಾರವಸ್ತುಗಳನ್ನು ಹಳ್ಳಿಗಳವರು ಬೇಕಾಬಿಟ್ಟಿ ತರಿಸುತ್ತಿದಾರೆ. ಹಳ್ಳಿಯ ಎಲ್ಲ ಉದ್ಯೋಗಗಳೂ ಹಳ್ಳಿಗನ ಕೈಯಿಂದ ಕಳಚಿ ಹೋಗುತ್ತಿವೆ, ಹಳ್ಳಿಗನು ಶೋಷಕನಿಗೋಸ್ಕರ ಕೇವಲ ಕಚ್ಚಾವಸ್ತುವಿನ ತಯಾರಕ ಮಾತ್ರವಾಗಿದಾನೆ. ನಿರಂತರ ನೀಡುವುದೇ ಅವನ ಕರ್ಮ, ಪಡೆಯುವುದು ಅತ್ಯಲ್ಪ. ತನ್ನ ಕಚ್ಚಾವಸ್ತುವಿಗೆ ಪ್ರತಿಯಾಗಿ ಪಡೆಯುವ ಅಲ್ಪಸ್ವಲ್ಪವನ್ನೂ ಸಕ್ಕರೆ ವ್ಯಾಪಾರಿಗೋ ಬಟ್ಟೆ ವರ್ತಕನಿಗೋ ಕೊಟ್ಟುಬಿಡುತ್ತಾನೆ. ಅವನ ಬುದ್ಧಿ, ಶರೀರ ಬಹುಪಾಲು ಮೃಗಗಳದರಂತೆ ಆಗಿಬಿಟ್ಟಿದೆ,

ಅವೇ ಅವನ ಸತತ ಸಂಗಾತಿಗಳು! ಆ ವಿಷಯ ಯೋಚಿಸಿದರೆ ಇಂದಿನ ಹಳ್ಳಿಗ ಐವತ್ತು ವರ್ಷದ ಹಿಂದಿನ ಹಳ್ಳಿಗನಲ್ಲಿ ಅರ್ಧ ಪಾಲು ಬುದ್ಧಿಕುಶಲನೂ ಅಲ್ಲ, ಪ್ರತ್ಯುತ್ಪನ್ನಮತಿಯೂ ಅಲ್ಲ ಎಂದು ಅರಿವಾದೀತು. ಇಂದಿನವ ಶೋಚನೀಯ ಪರಾವಲಂಬನೆ, ಆಲಸ್ಯದ ಸ್ಥಿತಿಗೆ ಇಳಿಸಲ್ಪಟ್ಟಿದಾನೆ, ಹಿಂದಿನವ ತನಗೆ ಬೇಕಾದುದಕ್ಕೆಲ್ಲ ತನ್ನ ಬುದ್ಧಿಯನ್ನೂ ಶರೀರವನ್ನೂ ಉಪಯೋಗಿಸಿ, ಮನೆಯಲ್ಲೇ ಅವನ್ನು ಮಾಡಿಕೊಳ್ಳುತ್ತಿದ್ದ. ಹಳ್ಳಿಯ ಕಸಬುದಾರನಿಗೂ ಸಹ ಇತರರನ್ನು ಆವರಿಸಿರುವ ಇಂದಿನ ಕೌಶಲಗೇಡಿತನದಲ್ಲಿ ಪಾಲುಂಟು. ಹಳ್ಳಿಯ ಬಡಗಿಯ ಬಳಿ ನಿಮಗೊಂದು ರಾಟೆ ಮಾಡಿಕೊಡಹೇಳಿ, ಕಮ್ಮಾರನ ಬಳಿ ಒಂದು ಕದಿರು ತಯಾರಿಸಿಕೊಡಹೇಳಿ, ನಿರಾಶೆಯಾದೀತು ನಿಮಗೆ. ಶೋಚನೀಯ ಅವಸ್ಥೆ ಇದು.

'ಹಳ್ಳಿಗೆ ಮರಳಿ' ಎಂಬ ಈ ಕೂಗು ಪ್ರಗತಿ ಚಕ್ರದ ಮುಳ್ಳನ್ನು ಹಿಂತಿರುವುತ್ತಿದೆ ಎನ್ನುತ್ತಾರೆ ಕೆಲ ಟೀಕಾಕಾರರು. ನಿಜಕ್ಕೂ ಹಾಗೆಯೇ? ಅದು ಹಳ್ಳಿಗೆ ಮರಳುವಿಕೆಯೋ ಅಥವಾ ಹಳ್ಳಿಗೆ ಸಲ್ಲಬೇಕಾದುದನ್ನು ಸಲ್ಲಿಸುವಿಕೆಯೋ? ಪಟ್ಟಣಿಗರು ಹೋಗಿ ಹಳ್ಳಿಯಲ್ಲಿ ನೆಲಸಿ ಎಂದು ಅವರಿಗೆ ಹೇಳುತ್ತಿಲ್ಲ. ಹಳ್ಳಿಗರಿಗೆ ಸಲ್ಲಬೇಕಾದುದನ್ನು ಸಲ್ಲಿಸಿ ಎನ್ನುತ್ತಿದೇನೆ. ಹಳ್ಳಿಯಿಂದಲ್ಲದೆ ಪಡೆಯುಬಹುದಾದ ಒಂದಾದರೂ ಕಚ್ಚಾವಸ್ತು ಉಂಟೇ? ಇಲ್ಲ ಎಂದಾದರೆ ಆತ ಹಿಂದೆ ಮಾಡುತ್ತಿದ್ದಂತೆ ಅದನ್ನು ಬಳಸಿ ಕೆಲಸ ಮಾಡುವಂತೆ ಅವನಿಗೇ ಏಕೆ ಕಲಿಸಬಾರದು? ನಮ್ಮ ಸುಲಿಗೆಕೋರತನದ ದಾಳಿಯಿಲ್ಲದಿದ್ದರೆ ಈಗಲೂ ಹಳ್ಳಿಗ ಆ ಕೆಲಸ ಮಾಡಿಯಾನು.೫೧

ಗ್ರಾಮ ಉದ್ಯೋಗಗಳ ಭೂಮಿಕೆ ಖಾದಿಯದಕ್ಕಿಂತ ಭಿನ್ನ. ಸ್ವೇಚ್ಛಾಪೂರ್ವಕ ಶ್ರಮಕ್ಕೆ ಅವುಗಳಲ್ಲಿ ಹೆಚ್ಚು ಅವಕಾಶ ಇಲ್ಲ. ಒಂದೊಂದು ಉದ್ಯೋಗಕ್ಕೂ ಕೆಲವು ಜನರ ಶ್ರಮ ಮಾತ್ರ ಸಾಕು. ಇವು ಎಲ್ಲ ಖಾದಿಯ ಅನುಚರರರಂತೆ. ಖಾದಿಯಿಲ್ಲದೆ ಇವು ಬದುಕವು, ಇವುಗಳಿಲ್ಲದೆ ಖಾದಿಗೆ ಗೌರವ ಸಿಗದು. ಕೈಯಿಂದ ಬೀಸುವುದು, ಕೊಟ್ಟಣ, ಸಾಬೂನು ತಯಾರಿಕೆ, ಕಾಗದದ ತಯಾರಿಕೆ, ಬೆಂಕಿಕಡ್ಡಿ ತಯಾರಿಕೆ, ಚರ್ಮ ಹದಮಾಡುವಿಕೆ, ಎಣ್ಣೆಗಾಣಗಳೇ ಮುಂತಾದ ಅಗತ್ಯವಾದ ಗ್ರಾಮ ಉದ್ಯೋಗಗಳಿಲ್ಲದೆ ಗ್ರಾಮದ ಅರ್ಥವ್ಯವಸ್ಥೆ ಪೂರ್ಣವಾಗದು. ಕಾಂಗ್ರೆಸ್ಸಿಗರು ಇವುಗಳಲ್ಲಿ ಆಸಕ್ತಿ ವಹಿಸ

ಬಹುದು. ತಾವೂ ಹಳ್ಳಿಗರೇ ಆಗಿದ್ದರೆ, ಹಳ್ಳಿಯಲ್ಲಿ ನೆಲೆಸುವವರಾದರೆ ಈ ಉದ್ಯೋಗಗಳಿಗೆ ಹೊಸ ಜೀವ ಕೊಡಬೇಕು, ಹೊಸ ರೂಪ ಕೊಡಬೇಕು. ಹಳ್ಳಿಯ ವಸ್ತುಗಳು ದೊರೆಯುವಾಗ ಅವನ್ನು ಬಳಸುವುದೇ ಗೌರವವೆಂದು ತಿಳಿಯಬೇಕು. ಬೇಡಿಕೆ ಉಂಟುಮಾಡಿದಲ್ಲಿ ನಮ್ಮ ಬಹುಮಟ್ಟಿನ ಅಗತ್ಯ ಗಳನ್ನು ಹಳ್ಳಿಗಳೇ ಪೂರೈಸಿಯಾವು. ಗ್ರಾಮಮನಸ್ಕರಾದೆವೆಂದರೆ ಯಂತ್ರ ಕೃತ ವಸ್ತುಗಳ ಪಡುವಲದ ಅನುಕರಣದ ವಸ್ತುಗಳು ನಮಗೆ ಬೇಕಾಗವು. ದಿವಾಳಿತನ, ಉಪವಾಸ, ಆಲಸ್ಯಗಳನ್ನು ಅರಿಯದ ನೂತನ ಭಾರತದ ದೃಷ್ಟಿಗೆ ಅನುಗುಣವಾದ ನಿಜಕ್ಕೂ ರಾಷ್ಟ್ರೀಯವಾದ ಅಭಿರುಚಿಯನ್ನು ನಾವು ಆಗ ಬೆಳೆಸಿಕೊಂಡೇವು.೫೨

"ಆಧುನಿಕ ನಾಗರಿಕತೆಗೆ ಇದಿರಾಗಿ ನಿರಂತರ, ಭ್ರಾಂತ ಸಮರದ ಪ್ರಥಮ ಕಾಳಗವೊಂದನ್ನು ಆರಂಭಿಸಿರುವಂತೆ ನನ್ನ ನಿರುಪಾಧಿಕ ಬುದ್ಧಿಗೆ ತೋರುತ್ತಿದೀರಿ. ಬಹು ಹಿಂದೆಯೇ ನೀವು ಅದರ ಕಡು ಹಗೆಯೆಂದು ಘೋಷಿಸಿಕೊಂಡಿದ್ದಿರಿ. ಈಗ ಸಾಧ್ಯವಿದ್ದರೆ ಅದು ಸಹಸ್ರಾರು ವರ್ಷಗಳಿಂದ ಅನುಸರಿಸುತ್ತಿರುವ ದಿಶೆಯನ್ನೇ ನೀವು ಹಿಂತಿರುಗಿಸಲು ತೊಡಗಿದ್ದೀರಿ. ಈ ವಿಚಾರವೇ ನನ್ನನ್ನು ಬಿಭ್ರಾಂತಗೊಳಿಸುತ್ತದೆ."

— ಗ್ರಾಮೋದ್ಯೋಗಗಳ ಪುನರುದ್ಧಾರದ ಪ್ರಯತ್ನದಲ್ಲಿ ಸಹಕಾರ ಸಿಕ್ಕೀತೆ ಎಂದು ಕೇಳಿ ನಾನು ಬರೆದ ಪತ್ರಕ್ಕೆ ಒಲವಿನ ಗೆಳೆಯನೊಬ್ಬನ ಆತ್ಮೀಯ ಪತ್ರದಿಂದ ತೆಗೆದುದು ಈ ಮಾತು. ಗೆಳೆಯ ತನ್ನ ಬಿಚ್ಚುಮನಸ್ಸಿನಿಂದ ವ್ಯಕ್ತಪಡಿಸಿರುವ ಈ ಅಭಿಪ್ರಾಯವನ್ನು ಇನ್ನೂ ಎಷ್ಟೋ ಮಂದಿ ಸ್ನೇಹಿತರೂ ಹೊಂದಿರುವುದರಿಂದ ನನ್ನ ನಿಲುವನ್ನು ವಿವರಿಸುವುದು ಒಳಿತು.

ಪುನರುದ್ಧರಿಸಲ್ಪಡಬಲ್ಲಂಥ ಗ್ರಾಮ ಉದ್ಯೋಗಗಳನ್ನು ಪುನರುಜ್ಜೀವನ ಗೊಳಿಸಲು ತೊಡಗಿರುವುದರಲ್ಲಿ ಈ ಗೆಳೆಯರು ಆರೋಪಿಸುವಂಥ ಯಾವ ಪ್ರಯತ್ನವನ್ನೂ ನಾನು ಮಾಡುತ್ತಿಲ್ಲ. ಗ್ರಾಮಜೀವನದ ಪ್ರತಿಯೊಬ್ಬ ಅಭಿಮಾನಿಯೂ, ಹಳ್ಳಿಗಳ ಛಿದ್ರೀಕರಣದ ದುರಂತ ಅರ್ಥವನ್ನು ಗ್ರಹಿಸಿರುವ ಪ್ರತಿಯೊಬ್ಬ ವ್ಯಕ್ತಿಯೂ ಮಾಡುತ್ತಿರುವುದನ್ನೇ, ಮಾಡಲು ಯತ್ನಿಸುತ್ತಿರು ವುದನ್ನೇ ನಾನೂ ಮಾಡುತ್ತಿದೇನೆ. ಹಳ್ಳಿಗರು ತಮ್ಮ ಹಿಟ್ಟನ್ನು ತಾವೇ ಬೀಸಿಕೊಳ್ಳಲಿ, ಪುಷ್ಟಿಕರ ತವಡಿನ ಸಹಿತ ಅನ್ನ ಉಣ್ಣಲಿ, ಕಬ್ಬನ್ನು ಮಾರದೆ

ತಮ್ಮ ಬಳಕೆಗೆ ಬೆಲ್ಲ ಮಾಡಿಕೊಳ್ಳಲಿ ಎಂದು ಹೇಳಿದರೆ ಆಧುನಿಕ ನಾಗರಿಕತೆಯ ಧಾರೆಯನ್ನು ಹಿಂತಿರುಗಿಸುತ್ತಿರುವೆನೇ? ಬರಿಯ ಕಚ್ಚಾವಸ್ತುವನ್ನಷ್ಟೇ ಉತ್ಪತ್ತಿಮಾಡಬೇಡಿ, ಮಾರಾಟದ ವಸ್ತುವಾಗಿ ಅದನ್ನು ಮಾರ್ಪಡಿಸಿ ನಿತ್ಯದ ಗಳಿಕೆಗೆ ಒಂದೆರಡು ಕಾಸು ಸೇರಿಸಿಕೊಳ್ಳಿ ಎಂದು ಹೇಳಿದರೆ ನಾಗರಿಕತೆಯ ಪ್ರವಾಹದ ದಿಕ್ಕನ್ನು ಹಿಂತಿರುಗಿಸುತ್ತಿರುವೆನೇ?

ಆಧುನಿಕ ನಾಗರಿಕತೆ ಸಹಸ್ರಾರು ವರ್ಷದ್ದೇನೂ ಖಂಡಿತ ಅಲ್ಲ. ಅದರ ಹುಟ್ಟಿನ ನಿರ್ದಿಷ್ಟ ದಿನಾಂಕವನ್ನೂ ಹೇಳಿಬಿಡಬಹುದು. ನನಗೆ ಸಾಧ್ಯವಿದ್ದರೆ ಆಧುನಿಕ ನಾಗರಿಕತೆಯ ಹೆಸರು ಹೊತ್ತುಹೋಗುತ್ತಿರುವುದರಲ್ಲಿ ಬಹು ಪಾಲನ್ನು ನಿಜಕ್ಕೂ ನಾಶಪಡಿಸಿಯೇನು ಅಥವಾ ತೀವ್ರವಾಗಿ ಬದಲಿಸಿಯೇನು. ಆದರೆ ಅದು ಬಾಳಿನ ಹಳೇ ಕತೆ. ಆ ಪ್ರಯತ್ನ ನಿಸ್ಸಂಶಯವಾಗಿ ಇದ್ದೇ ಇದೆ. ಅದರ ಯಶಸ್ಸು ದೇವರಿಗೆ ಸೇರಿದ್ದು. ಲಾಭದಾಯಕವಾದ ಗ್ರಾಮ ಉದ್ಯೋಗಗಳನ್ನು ಪುನರುದ್ಧರಿಸಿ ಪ್ರೋತ್ಸಾಹ ನೀಡುವ ಪ್ರಯತ್ನ ಮಾತ್ರ ಆ ಪ್ರಯತ್ನದ ಅಂಗವಲ್ಲ. ಹಾಗೆ ನನ್ನ ಪ್ರತಿ ಚಟುವಟಿಕೆಯೂ, ಅಹಿಂಸೆಯ ಪ್ರಸಾರವೂ ನನ್ನ ಆ ಪ್ರಯತ್ನದ ಅಂಗವೆಂದೇ ಸ್ವಲ್ಪಮಟ್ಟಿಗೆ ಹೇಳಬಹುದು. ಗ್ರಾಮ ಉದ್ಯೋಗಗಳ ಪುನರುದ್ಧಾರ ಖಾದಿ ಉದ್ಯಮದ ವಿಸ್ತರಣವೇ. ಕೈನೂಲಿನ ವಸ್ತ್ರ, ಕೈಕಾಗದ, ಕೊಟ್ಟಣದ ಅಕ್ಕಿ, ಮನೆಯ ರೊಟ್ಟಿ, 'ಜಾಂ' (ರಸಾಯನ) ಪಾಶ್ಚಾತ್ಯ ದೇಶಗಳಲ್ಲಿ ಅಸಾಮಾನ್ಯವೇನಲ್ಲ. ಆದರೆ ಅಲ್ಲಿ ನಮ್ಮಲ್ಲಿರುವಷ್ಟರ ನೂರರಲ್ಲೊಂದು ಪಾಲಿನ ಮಹತ್ವವೂ ಅವಕ್ಕಿಲ್ಲ. ನಮಗೆ ಅವುಗಳ ಪುನರುಜ್ಜೀವನವೇ ಜೀವನ, ವಿನಾಶವೇ ಹಳ್ಳಿಗರಿಗೆ ಸಾವು. ಎಲ್ಲರೂ ಬಲ್ಲರು ಇದನ್ನು. ಯಂತ್ರಯುಗ ಏನು ಮಾಡೀತೋ ಬಿಟ್ಟೀತೋ, ಭಾರಿ ಪ್ರಮಾಣದ ಯಂತ್ರಶಕ್ತಿಯ ಬಳಕೆಯಿಂದ ಹೊರದೂಡಲ್ಪಡುವ ಲಕ್ಷ ಗಟ್ಟಲೆ ಜನರಿಗಂತೂ ಅದು ಎಂದೂ ಕೆಲಸ ಕೊಡಲಾರದು.೫೪

## ಗ್ರಾಮ ಉದ್ಯೋಗಗಳು ಮತ್ತು ಯಂತ್ರಗಾರಿಕೆ

ಯಂತ್ರಗಾರಿಕೆಯ ಪಕ್ಷಪಾತಿ ಸಮಾಜವಾದಿಯೊಬ್ಬರು ಗ್ರಾಮೋದ್ಯೋಗಗಳ ಆಂದೋಲನ ಎಲ್ಲ ಯಂತ್ರಗಳನ್ನೂ ತೊಲಗಿಸಲೆಂದೇ ಅಲ್ಲವೇ ಎಂದು ಗಾಂಧೀಜಿಯನ್ನು ಕೇಳಿದರು.

" ಈ ರಾಟೆಯೂ ಯಂತ್ರವೇ ಅಲ್ಲವೇ ? " ಆಗ ತಾನೇ ನೂಲಲು ತೊಡಗಿದ್ದ ಗಾಂಧೀಜೀ ಪ್ರತಿಪ್ರಶ್ನೆ ಹಾಕಿದರು.

" ಈ ಯಂತ್ರವನ್ನಲ್ಲ, ಭಾರಿ ಯಂತ್ರ ಕುರಿತು ಹೇಳಿದೆ."

" ಸಿಂಗರ್ ಹೊಲಿಗೆ ಯಂತ್ರವನ್ನು ಕುರಿತೇ ? ಗ್ರಾಮ್ಯೋದ್ಯೋಗ ಆಂದೋಲನದ ರಕ್ಷೆ ಅದಕ್ಕೂ ಉಂಟು. ಹಾಗೆ ನೋಡಿದರೆ ವಿಶಾಲ ಜನ ಸ್ತೋಮದ ಶ್ರಮಾವಕಾಶವನ್ನು ಕಸಿಯದೆ, ವ್ಯಕ್ತಿಗೆ ನೆರವಾಗುವ, ಅವನ ದಕ್ಷತೆ ಹೆಚ್ಚಿಸುವ, ಅದರ ಅಡಿಯಾಳಾಗದೆ ಒಬ್ಬ ಮನುಷ್ಯ ನಡೆಸಬಲ್ಲ ಯಾವುದೇ ಯಂತ್ರವಾಗಬಹುದು."

" ದೊಡ್ಡ ದೊಡ್ಡ ಸಂಶೋಧನೆಗಳ ವಿಷಯ ? ನಿಮಗೆ ವಿದ್ಯುತ್ತೂ ಬೇಕಿಲ್ಲವೇನೋ ? "

" ಯಾರು ಹೇಳಿದರು ಹಾಗೆ ? ಹಳ್ಳಿಯ ಒಂದೊಂದು ಮನೆಗೂ ಸಿಕ್ಕುವುದಾದರೆ ಹಳ್ಳಿಗರು ತಮ್ಮ ಸಾಧನಗಳನ್ನು ವಿದ್ಯುತ್ತಿನಿಂದ ನಡೆಸಲು ನನ್ನ ಆಕ್ಷೇಪವಿರದು. ಆದರೆ ಆಗ ಗ್ರಾಮಸಮುದಾಯ ಅಥವಾ ಸರಕಾರ ವಿದ್ಯುದುತ್ಪಾದಕ ಕೇಂದ್ರಗಳ ಒಡೆತನ ಪಡೆದಿದ್ದಾವು, ತಮ್ಮ ಗೋಮಾಳ, ಹುಲ್ಲುಗಾವಲು ಪಡೆದಿರುವಂತೆ. ವಿದ್ಯುತ್ ಇಲ್ಲದೆ, ಯಂತ್ರವೂ ಇಲ್ಲದೆ ಇರುವಾಗ ಖಾಲಿ ಕೈಗಳೇನು ಮಾಡಬೇಕು ? ನೀವು ಅವರಿಗೆ ಕೆಲಸ ಕೊಡು ವಿರೋ ಅಥವಾ ಮಾಲಿಕರು ಕೆಲಸವಿಲ್ಲವೆಂದು ಹೇಳಿ ಅವರನ್ನು ವಜಾಮಾಡ ಗೊಡುವಿರೋ ?

" ಎಲ್ಲರ ಸೌಕರ್ಯಕ್ಕಾಗಿ ಕಂಡುಹಿಡಿಯಲ್ಪಟ್ಟ ಪ್ರತಿಯೊಂದು ವೈಜ್ಞಾನಿಕ ಸಂಶೋಧನೆಗೂ ನಾನು ಬಹು ಬೆಲೆ ಕೊಡುತ್ತೇನೆ. ಒಂದೊಂದು ಸಂಶೋ ಧನೆಯ ನಡುವೆಯೂ ವ್ಯತ್ಯಾಸವುಂಟು. ಜನಸಮುದಾಯಗಳನ್ನು ಒಟ್ಟಿಗೇ ಕೊಲ್ಲಬಲ್ಲ ವಿಷವಾಯುವಿಗೆ ನಾ ಬೆಲೆ ಕೊಡಬಾರದು ಮಾನವಪರಿಶ್ರಮಕ್ಕೆ ಸಾಧ್ಯವಿಲ್ಲದ ಸಾರ್ವಜನಿಕ ಉಪಯೋಗದ ಕೆಲಸ ಮಾಡುವ ಭಾರಿ ಯಂತ್ರಕ್ಕೆ ಅದರ ಅನಿವಾರ್ಯ ಸ್ಥಾನ ಇದ್ದೇ ಇದೆ. ಆದರೆ ಅವೆಲ್ಲ ಪ್ರಭುತ್ವದ ಒಡೆತನಕ್ಕೆ ಒಳಪಟ್ಟು ಎಲ್ಲರ ಒಳಿತಿಗಾಗಿಯೇ ಬಳಸಲ್ಪಟ್ಟಾವು. ಬಹುಜನರನ್ನು ಬಲಿ ಕೊಟ್ಟು ಕೆಲವರನ್ನು ಶ್ರೀಮಂತಗೊಳಿಸುವ ಅಥವಾ ಅಕಾರಣವಾಗಿ ಬಹು

ಮಂದಿಯ ಪ್ರಯೋಜಕ ಶ್ರಮಶಕ್ತಿಯನ್ನು ಹೊರದೂಡುವ ಯಂತ್ರಕ್ಕೆ ನನ್ನ ಗಣನೆ ಇಲ್ಲ.

“ಸಮಾಜವಾದಿಯಾದ ನೀವೂ ಸಹ ಯಂತ್ರದ ವಿವೇಕರಹಿತ ಬಳಕೆಗೆ ಪರವಾದವರಾಗಿರಿ. ಮುದ್ರಣ ಯಂತ್ರಗಳನ್ನು ತೆಗೆದುಕೊಳ್ಳಿ. ಅವು ನಡೆದಾವು. ಶಸ್ತ್ರಚಿಕಿತ್ಸೆಯ ಸಾಧನಗಳನ್ನು ತೆಗೆದುಕೊಳ್ಳಿ. ಯಾರಾದರೂ ಕೈಯಿಂದ ಅವನ್ನು ಮಾಡಲಾದೀತೇ? ಅದಕ್ಕೆ ಭಾರಿ ಯಂತ್ರವೇ ಬೇಕು. ಆಲಸ್ಯವನ್ನು ಪರಿಹರಿಸಲು ಇದನ್ನು ಬಿಟ್ಟು ಬೇರೆ ಯಂತ್ರವೇ ಇಲ್ಲ” ಎಂದರು ರಾಟೆ ಕಡೆ ಕೈತೋರಿಸಿ ಗಾಂಧೀಜೀ: “ನಿಮ್ಮೊಡನೆ ಸಂಭಾಷಣೆ ನಡೆಸುತ್ತ ನಡೆಸುತ್ತ ಇದನ್ನೂ ನಡೆಸಬಲ್ಲೆ, ದೇಶದ ಸಂಪತ್ತಿಗೆ ಕಿಂಚಿತ್ ಸೇರಿಸಬಲ್ಲೆ. ಈ ಯಂತ್ರವನ್ನು ದೂಡುವುದು ಯಾರಿಗೂ ಸಾಧ್ಯವಿಲ್ಲ.”೫೧

**ಪ್ರಶ್ನೆ**—ಈ ಯಂತ್ರಯುಗದಲ್ಲಿ ಈ ಎಲ್ಲ ಗ್ರಾಮೋದ್ಯೋಗದ ವ್ಯವಹಾರ ಎಲ್ಲಿವರಿಗೆ ನಡೆದೀತು?

**ಉತ್ತರ**—ನನಗೇನೂ ಅಂಥ ಅಂಜಿಕೆಯಿಲ್ಲ. ಈ ಎಲ್ಲ ಮಹಾಸಾಧನೆಗಳು ಮಾಯವಾದಮೇಲೂ ಈ ನಮ್ಮ ಕಸಬುಗಳು ಇದ್ದೇ ಇರುತ್ತವೆಂಬ ದೃಢವಿಶ್ವಾಸ ನನ್ನಲ್ಲಿದೆ. ಈ ವಿಶ್ವಾಸ ನನ್ನನ್ನು ಭರಿಸುತ್ತಿರುವುದರಿಂದಲೇ ನನ್ನ ಕೆಲಸ ಹಿಡಿದು ಸಾಗುತ್ತಿದೇನೆ. ನನ್ನ ಕೆಲಸದ ಶ್ರದ್ಧೆ ನನ್ನನ್ನು ನಡೆಸುತ್ತದೆ. ಜತೆಗೆ ನನ್ನ ಶ್ರದ್ಧೆಗೆ ಸವಾಲು ಎಸೆಯುವ ಎಲ್ಲ ವಸ್ತುಗಳೂ ನಾಶವಾಗಿಯೂ ಆಗುತ್ತವೆ ಎಂಬ ಮನೋಬಲ ಬೇರೆ ಇದೆ. ಭಾರತ ಯಂತ್ರಮಯವಾಗಿಬಿಟ್ಟರೆ ಶೋಷಣೆಗೆ ಬೇರೆ ಲೋಕಗಳನ್ನು ಹುಡುಕಲು ನಮಗೊಬ್ಬ ನಾದಿರ್‌ಷಾ ಬೇಕಾಗಬಹುದು. ಬ್ರಿಟನ್, ಜಪಾನ್, ಅಮೆರಿಕಾ, ರಷ್ಯಾ, ಇಟಲಿಗಳ ನೌಕಾ, ಸೇನಾಬಲಗಳ ಎದುರು ನಿಲ್ಲಬೇಕಾದೀತು ನಾವು. ಈ ಎಲ್ಲ ಪೈಪೋಟಿಯ ವಿಚಾರಮಾತ್ರದಿಂದಲೇ ನನ್ನ ತಲೆ ತಿರುಗುತ್ತದೆ. ಇಲ್ಲ, ಈ ಯಂತ್ರಯುಗ ಮಾನವರನ್ನು ಯಂತ್ರಗಳನ್ನಾಗಿಸಬಯಸುತ್ತದೆ. ನಾನಾದರೋ ಯಂತ್ರವಾಗಿ ಪರಿವರ್ತನಗೊಂಡ ಮಾನವನನ್ನು ಪುನಃ ಅವನ ಸ್ಥಾನದಲ್ಲಿ ಪ್ರತಿಷ್ಠಾಪಿಸಬಯಸುತ್ತೇನೆ. ಇದು ಸ್ಪಷ್ಟ.೫೨

## ನಿರುದ್ಯೋಗ

ನಮ್ಮ ದೇಶದ ನಿರುದ್ಯೋಗ ಸಮಸ್ಯೆ ಇತರ ದೇಶಗಳದರಷ್ಟು ಕ್ಲಿಷ್ಟವಾದುದಲ್ಲ. ಜೀವನವಿಧಾನವೂ ಅದರಲ್ಲಿ ಒಂದು ಮುಖ್ಯ ಅಂಶ. ಪಶ್ಚಿಮ ದೇಶದ ನಿರುದ್ಯೋಗಿ ಕಾರ್ಮಿಕನಿಗೆ ಬೆಚ್ಚನೆ ಬಟ್ಟೆ, ಬೂಟು, ಕಾಲುಚೀಲಗಳು ಬೇಕೇ ಬೇಕು. ಶೀತ ಹವೆಗೆ ತಕ್ಕಂತೆ ಬೆಚ್ಚನೆಯ ಮನೆ ಇತ್ಯಾದಿ ಬೇಕೇ ಬೇಕು. ನಮಗೆ ಇವೊಂದೂ ಬೇಕಿಲ್ಲ. ನಿಜಕ್ಕೂ ನಮ್ಮ ನಾಡಿನ ಭಯಂಕರ ಬಡತನ–ನಿರುದ್ಯೋಗ ಕಂಡು ಕಂಬನಿಗರೆದಿದೇನೆ. ಅದಕ್ಕೆ ನಮ್ಮ ಅಲಕ್ಷ್ಯ ಅಜ್ಞಾನಗಳೇ ಬಹುಮಟ್ಟಿಗೆ ಕಾರಣ ಎಂಬುದನ್ನು ನಾವು ಒಪ್ಪಿಕೊಳ್ಳಲೇ ಬೇಕು. ನಮಗೆ ಪರಿಶ್ರಮದ ಗೌರವವೇನೆಂಬುದೇ ತಿಳಿಯದು. ಚಮ್ಮಾರ ಪಾದರಕ್ಷೆಗಳನ್ನು ಮಾಡುವುದರ ಹೊರತಾಗಿ ಮತ್ತೇನೂ ಮಾಡ. ಉಳಿದೆಲ್ಲ ಕೆಲಸವೂ ತನ್ನ ಗೌರವಕ್ಕೆ ಕಡಿಮೆ ಎಂದು ತಿಳಿಯುತ್ತಾನೆ. ಆ ತಪ್ಪು ಭಾವನೆ ಹೋಗಬೇಕು. ತಮ್ಮ ಕೈಕಾಲುಗಳನ್ನು ಬಳಸಿ ದುಡಿಯುವವರಿಗೆಲ್ಲ ಭಾರತದಲ್ಲಿ ಸಾಕಷ್ಟು ಉದ್ಯೋಗ ಇದೆ. ದೇವರು ಪ್ರತಿಯೊಬ್ಬನಿಗೂ ದುಡಿವ ಸಾಮರ್ಥ್ಯವನ್ನೂ ತನ್ನ ಅನ್ನಕ್ಕಿಂತ ಮೀರಿ ಗಳಿಸುವ ಶಕ್ತಿಯನ್ನೂ ಕೊಟ್ಟಿದಾನೆ. ಆ ಶಕ್ತಿ ಉಪಯೋಗಿಸಬಯಸುವವರಿಗೆ ಖಂಡಿತವಾಗಿ ಕೆಲಸ ಸಿಕ್ಕೀತು. ಪ್ರಾಮಾಣಿಕ ದ್ರವ್ಯ ಗಳಿಸಬಯಸುವವನಿಗೆ ಯಾವ ಕೆಲಸವೂ ಕೀಳಲ್ಲ. ದೇವರು ಕೊಟ್ಟಿರುವ ಕೈಕಾಲುಗಳನ್ನು ಬಳಸುವ ಸಿದ್ಧತೆಯೊಂದೇ ಬೇಕಾಗಿರುವುದು.[೫೬]

## ಭಾರಿ ಉದ್ಯೋಗಗಳು – ಸಣ್ಣ ಉದ್ಯೋಗಗಳು

**ಪ್ರಶ್ನೆ**—ನೀವು ಕಲ್ಪಿಸಿಕೊಂಡಂತೆ ಸತ್ತುಹೋಗಿರುವ ಗ್ರಾಮೋದ್ಯೋಗಗಳ ಪುನರುಜ್ಜೀವನಕ್ಕೂ ದುರಾಶೆಯ ಬಂಡವಾಳಗಾರಿಕೆಗೆ ವಿರುದ್ಧವಾಗಿ ಮಾನವೀಯ, ತರ್ಕಬದ್ಧ ಹಾಗೂ ವಿವೇಕಪೂರ್ಣ ಯಾಂತ್ರೀಕರಣಕ್ಕೂ ಒಂದೇ ಹೆಜ್ಜೆ ಅಂತರವೆಂದು ಸೂಚಿಸಿದರೆ ತಪ್ಪೇ ?

**ಉತ್ತರ**—ಲಕ್ಷಗಟ್ಟಲೆ ಜನಕ್ಕೆ ಬಲಾತ್ಕಾರದ ನಾಲ್ಕು ತಿಂಗಳ ವಿಶ್ರಾಂತಿ (ನಿರುದ್ಯೋಗ) ಉಳ್ಳ ವಿಶಾಲವಾದ ಭಾರತದಂಥ ದೇಶ ಭಾರಿ ಪ್ರಮಾಣದ

ಉದ್ಯೋಗಗಳನ್ನು ಹೊಂದಿಯೂ ಸಾಕಷ್ಟು ಸುಖಜೀವನ ನಡೆಸಬಲ್ಲುದೋ ನಾನರಿಯೆ. ಹಳ್ಳಿಗಳಲ್ಲಿ ನಡೆಸಲಾಗದಂಥ ಉದ್ಯೋಗಗಳನ್ನು ಬಿಟ್ಟು ಭಾರಿ ಪ್ರಮಾಣದ ಔದ್ಯೋಗೀಕರಣವೆಂದರೆ, ಹಾಗೆ ಹೊರದೂಡಲ್ಪಡುವ ಜನಕೋಟಿಗೆ ಗೌರವಾನ್ವಿತ ಉದ್ಯೋಗ ಕಲ್ಪಿಸಿದ ಹೊರತು ಅವರಿಗೆ ಉಪವಾಸವೆಂದೇ ಅರ್ಥ.[೫೭]

ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ನೆರವಾದರೆ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಿದಂತೆಯೇ; ಈ ಬಗೆಗೆ ನನಗೆ ಸಂಶಯವೇ ಇಲ್ಲ. ಈ ಕುಟೀರ ಉದ್ಯೋಗಗಳನ್ನು ಪುನರುಜ್ಜೀವನಗೊಳಿಸಿ ಅವಕ್ಕೆ ಉತ್ತೇಜನ ನೀಡುವುದೇ ನಿಜವಾದ ಸ್ವದೇಶಿ—ಈ ವಿಷಯದಲ್ಲಿಯೂ ನನಗೆ ಸಂದೇಹವೇ ಇಲ್ಲ. ನಮ್ಮ ಮೂಕ ಜನಸ್ತೋಮಕ್ಕೆ ಅದೊಂದೇ ಸಹಾಯಕ. ಅದರಿಂದ ಜನರ ಸೃಷ್ಟಿ ಸಾಮರ್ಥ್ಯ ಹಾಗೂ ಕೌಶಲಕ್ಕೆ ಪ್ರಕಟನಾವಕಾಶವೂ ದೊರೆತೀತು. ಉದ್ಯೋಗ ಬೇಕಿರುವ ದೇಶದ ನೂರಾರು ಮಂದಿ ತರುಣರಿಗೂ ಉಪಯೋಗಕರ ಕೆಲಸ ಕೊಟ್ಟೀತು. ಈಗ ಪೋಲಾಗುತ್ತಿರುವ ಸಾಮರ್ಥ್ಯ ಸದುಪಯೋಗವಾದೀತು. ಹೆಚ್ಚು ಲಾಭಕರವಾದ ಕೆಲಸದಲ್ಲಿರುವವನು ಅದನ್ನು ಬಿಟ್ಟು ಈ ಸಣ್ಣ ಉದ್ಯೋಗಗಳನ್ನು ಅವಲಂಬಿಸಬೇಕೆನ್ನುವುದಿಲ್ಲ. ರಾಟೆಯ ವಿಷಯದಲ್ಲಿ ಹೇಳುವಂತೆಯೇ ನಿರುದ್ಯೋಗ ಹಾಗೂ ದಾರಿದ್ರ್ಯದಿಂದ ನೊಂದವರು ಈ ಉದ್ಯೋಗಗಳನ್ನು ಕೈಗೊಂಡು ತಮ್ಮ ಅಲ್ಪ ಆದಾಯಕ್ಕೆ ನಾಲ್ಕು ಕಾಸು ಸೇರಿಸಿಕೊಳ್ಳಲೆಂದು ಹೇಳುತ್ತೇನೆ.[೫೮]

## ಅಹಿಂಸಾತ್ಮಕ ಉದ್ಯೋಗಗಳು

ಎಷ್ಟೇ ಅಲ್ಪವಾಗಲಿ ಕಿಂಚಿತ್ ಹಿಂಸೆಯಿಲ್ಲದೆ ಯಾವ ಕ್ರಿಯೆಯಾಗಲಿ ಉದ್ಯೋಗವಾಗಲಿ ಕಟ್ಟುನಿಟ್ಟಾಗಿ ಸಾಧ್ಯವಿಲ್ಲ. ಸ್ವಲ್ಪ ಹಿಂಸೆಯಿಲ್ಲದೆ ಜೀವನ ಕ್ರಮವೂ ಅಸಾಧ್ಯವೇ. ಅದನ್ನು ಆದಷ್ಟು ಮಿತಿಗೊಳಿಸುವುದೇ ನಮ್ಮ ಕೆಲಸ. ಜೀವನದಲ್ಲಿ ಅನಿವಾರ್ಯವಾದ ಹಿಂಸೆಯ ತ್ಯಾಗದ ಪ್ರಯತ್ನವೆಂದೇ ಈ ನಿಷೇಧಾತ್ಮಕ ಪದ ಅಹಿಂಸೆ ಎಂಬುದರ ಅರ್ಥವೂ. ಆದಕಾರಣ ಅಹಿಂಸೆಯಲ್ಲಿ ನಂಬಿಕೆ ಉಳ್ಳವರು ಅತಿ ಕಡಿಮೆ ಸಾಧ್ಯವಿದ್ದಷ್ಟು ಹಿಂಸೆಯಾಗುವ ಉದ್ಯೋಗ

ದಲ್ಲಿ ತೊಡಗಬೇಕು. ಉದಾಹರಣೆಗೆ ಅಹಿಂಸಾಶ್ರದ್ಧಾಳು ಕಟುಕನ ಕೆಲಸವನ್ನು ಅವಲಂಬಿಸಲಾರ. ಮಾಂಸಾಹಾರಿ ಮನುಷ್ಯ ಅಹಿಂಸಕನಾಗಲಾರ ಎಂದೇನೂ ಅಲ್ಲ. ಮಾಂಸಾಹಾರವನ್ನು ಮಾಡುವ ಎಷ್ಟೋ ಮಂದಿ ಮಾಂಸಾಹಾರ ಮಾಡದವರಿಗಿಂತ ಉತ್ತಮ ಅಹಿಂಸಾಪಾಲಕರಿದಾರೆ, ದೀನಬಂಧು ಆಂಡ್ರೂಸ್ ಅಂಥವರು. ಆದರೆ ಅಹಿಂಸೆಯಲ್ಲಿ ನಂಬಿಕೆಯುಳ್ಳ ಮಾಂಸಾಹಾರಿ ಮನುಷ್ಯ ಶಿಕಾರಿಗೆ ಹೋಗಲಾರ, ಯುದ್ಧದಲ್ಲಾಗಲಿ ಯುದ್ಧದ ಸಿದ್ಧತೆಯಲ್ಲಾಗಲಿ ಪಾಲುಗೊಳ್ಳಲಾರ. ಹೀಗೆ ಅಹಿಂಸಾತ್ಮಕ ಮನುಷ್ಯ ತೊರೆಯಬೇಕಾದ ಹಿಂಸೆಯನ್ನು ಒಳಗೊಂಡೇ ಇರುವ ಅನೇಕ ಉದ್ಯೋಗಗಳೂ ಕ್ರಿಯೆಗಳೂ ಇವೆ. ಆದರೆ ಬೇಸಾಯ? ಅದರ ಹೊರತು ಜೀವನವೇ ಅಶಕ್ಯ. ಅದರಲ್ಲಿಯೂ ಸ್ವಲ್ಪ ಹಿಂಸೆ ಅಡಕವಾಗಿದೆ. ಆದರೆ ಈ ಕೆಲಸ ಹಿಂಸೆಯ ಆಧಾರದ ಮೇಲೆಯೇ ನಿಂತಿದೆಯೇ? ಇದೇ ನಿರ್ಣಾಯಕ ಅಂಶ. ಎಲ್ಲ ಕ್ರಿಯೆಗಳಲ್ಲಿಯೂ ಅಲ್ಪಸ್ವಲ್ಪ ಹಿಂಸೆ ಇದ್ದೇ ಇರುವುದರಿಂದ ಅದನ್ನು ಆದಷ್ಟು ಕಡಿಮೆ ಮಾಡುವುದೇ ನಮ್ಮ ಕೆಲಸ. ಅಹಿಂಸೆಯಲ್ಲಿ ಹಾರ್ದಿಕ ವಿಶ್ವಾಸವಿಲ್ಲದೆ ಇದು ಅಸಾಧ್ಯ. ಒಬ್ಬ ಮನುಷ್ಯ ತನ್ನ ಅನ್ನಕ್ಕಾಗಿ ದುಡಿಯುತ್ತಾನೆ, ಹಿಂಸೆ ಮಾಡುವುದಿಲ್ಲ, ಆದರೆ ಇತರರ ಸಂಪತ್ತು, ಸಮೃದ್ಧಿ ಕಂಡು ಕರುಬುತ್ತಾನೆನ್ನಿ. ಆತ ಅಹಿಂಸಕನಲ್ಲ. ಮೂಲಭೂತವಾಗಿ ಹಿಂಸೆಯಿಂದ ಮುಕ್ತವಾಗಿ, ಇತರರ ಶೋಷಣೆ ಅಥವಾ ಅವರ ಬಗೆಗೆ ಅಸೂಯೆ ಇಲ್ಲದ ಕೆಲಸವೇ ಅಹಿಂಸಾತ್ಮಕ ಉದ್ಯೋಗ.

ಅಂಥ ಅಹಿಂಸಾತ್ಮಕ ಉದ್ಯೋಗಪದ್ಧತಿಯ ಆಧಾರದ ಮೇಲೆ, ಮಾನವನ ಹಕ್ಕುಗಳ ಮೇಲಲ್ಲದೆ ಕರ್ತವ್ಯದ ಆಧಾರದ ಮೇಲೆ ಗ್ರಾಮದ ಅರ್ಥರಚನೆ ಸಂಘಟಿತವಾಗಿದ್ದ ಕಾಲವೊಂದು ಭಾರತದಲ್ಲಿತ್ತೆಂದು ನನ್ನ ನಂಬಿಕೆ; ಇದಕ್ಕೆ ಐತಿಹಾಸಿಕ ದಾಖಲೆ ನನ್ನಲ್ಲಿಲ್ಲ. ಆ ಉದ್ಯೋಗಗಳಲ್ಲಿ ತೊಡಗಿದವರು ಆಜೀವಿಕೆಯನ್ನಂತೂ ಗಳಿಸುತ್ತಲೇ ಇದ್ದರು, ಆದರೆ ಅವರ ದುಡಿಮೆ ಸಮಾಜದ ಹಿತಸಾಧಕವಾಗಿತ್ತು. ಬಡಗಿ ಹಳ್ಳಿಯ ಬೇಸಾಯಗಾರನ ಅಗತ್ಯ ಪೂರೈಸಲು ದುಡಿಯುತ್ತಿದ್ದ. ಅವನಿಗೆ ನಗದು ಹಣ ಸಿಗುತ್ತಿರಲಿಲ್ಲ, ಹಳ್ಳಿಗರು ಕಾಳುಕಡಿ ಕೊಡುತ್ತಿದ್ದರು. ಈ ಪದ್ಧತಿಯಲ್ಲೂ ಅನ್ಯಾಯವಾಗುವುದು ಸಾಧ್ಯ, ಆದರೆ ಅದು ಅತಿ ಕಡಿಮೆ ಆಗುತ್ತದೆ. ಅರವತ್ತು ವರ್ಷದ

ಹಿಂದೆ ಕಾಥೇವಾಡದ ಜನಜೀವನದ ಬಗೆಗೆ ನನ್ನ ಸ್ವಾನುಭವದಿಂದ ಹೇಳಬಲ್ಲೆ. ಇಂದಿಗಿಂತ ಜನರ ಕಣ್ಣಲ್ಲಿ ಆಗ ಹೆಚ್ಚು ಕಾಂತಿ ಇತ್ತು, ಕೈಕಾಲುಗಳಲ್ಲಿ ಹೆಚ್ಚು ಜೀವ ಇತ್ತು. ಬುದ್ಧಿಪೂರ್ವಕವಲ್ಲದ ಅಹಿಂಸೆಯ ಆಧಾರದ ಬಾಳುವೆ ಅದು.

ಈ ಕೆಲಸಗಳಿಗೆ ಶರೀರಶ್ರಮವೇ ತಿರುಳಾಗಿತ್ತು, ಭಾರಿ ಯಂತ್ರ ಇರಲಿಲ್ಲ. ತಾನು ತನ್ನ ಶ್ರಮದಿಂದ ಮಾತ್ರ ಬೇಸಾಯ ಮಾಡಬಲ್ಲಷ್ಟು ಭೂಮಿಯಿಂದ ಮನುಷ್ಯ ತೃಪ್ತನಾಗುವಾಗ ಆತ ಇತರರನ್ನು ಶೋಷಿಸಲಾರ. ಹಸ್ತಉದ್ಯೋಗಗಳು ಶೋಷಣೆದಾಸ್ಯಗಳನ್ನು ನಿವಾರಿಸುತ್ತವೆ. ಭಾರಿ ಯಂತ್ರ ಒಬ್ಬನ ಕೈಲಿ ಸಂಪತ್ತನ್ನು ಕೇಂದ್ರೀಕರಿಸುತ್ತದೆ, ಆತ ತನಗಾಗಿ ದುಡಿಯುವ ಇತರರ ಮೇಲೆ ಸವಾರಿ ಮಾಡುತ್ತಾನೆ. ಆತ ತನ್ನ ಕೆಲಸಗಾರರಿಗೆ ಉತ್ತಮ ಸನ್ನಿವೇಶವನ್ನೇ ಕಲ್ಪಿಸಲು ಯತ್ನಿಸಿರಬಹುದು. ಆದರೂ ಅದು ಶೋಷಣೆಯೇ—ಹಿಂಸೆಯ ಒಂದು ರೂಪವೇ.

ಶೋಷಣೆಯ ಬದಲು ನ್ಯಾಯದ ಆಧಾರದ ಮೇಲೆ ಸಂಘಟಿತವಾದ ಸಮಾಜ ಒಂದು ಕಾಲದಲ್ಲಿತ್ತೆಂದು ಹೇಳಿದೆ. ಅಂದರೆ ಸತ್ಯ ಮತ್ತು ಅಹಿಂಸೆ ಕೇವಲ ವ್ಯಕ್ತಿಗಳಿಗೆ ಪರಿಮಿತವಾದ ಸದ್ಗುಣಗಳಾಗಿದ್ದುವು ಎಂದು ಹೇಳಲಿಲ್ಲ, ಇಡೀ ಸಮಾಜ ಅವನ್ನು ಆಚರಿಸುತ್ತಿತ್ತು. ಕೇವಲ ವ್ಯಕ್ತಿಗಳಿಗೆ ಮಾತ್ರ ಸಾಧ್ಯವಾದಂಥವುಗಳಾದರೆ, ಋಷಿಮುನಿಗಳಿಗೆ ಮಾತ್ರ ಸಾಧ್ಯವಾದಂಥವಾದರೆ ಅಂಥ ಸದ್ಗುಣಗಳು ನನಗೆ ಬೆಲೆಗೆ ಬಾರವು.೫೯

## ಮಹಾಪಹರೆಗಾರ

" ಶಾಂತಿನಿಕೇತನದ ಕವಿ ' ಮಾಡರ್ನ್ ರೆವ್ಯೂ ' ಪತ್ರಿಕೆಯಲ್ಲಿ ಪ್ರಸಕ್ತ ಆಂದೋಲನ ಕುರಿತು ಒಂದು ಅಮೋಘ ಪ್ರಬಂಧ ಬರೆದಿದಾರೆ. ಅವರು ಮಾತ್ರವೇ ಚಿತ್ರಿಸಬಲ್ಲ ಶಬ್ದಚಿತ್ರಗಳ ಮಾಲೆಯೇ ಅದು. ಅಧಿಕಾರಶಾಹಿ, ದಾಸ್ಯಮನೋಭಾವ, ಪ್ರಚಲಿತ ಹುಚ್ಚೊಂದನ್ನು ಅಂಜಿಕೆಯಿಂದಲೋ ಆಸೆಯಿಂದಲೋ ಕುರುಡುಕುರುಡಾಗಿ ಒಪ್ಪುವುದಕ್ಕೆ ಯಾವ ಹೆಸರನ್ನಾದರೂ ಇಡಿ—ಅದರ ವಿರುದ್ಧ ವಾಚಾಳಿ ಪ್ರತಿಭಟನೆ ಅದು. ನಾವು ಎಷ್ಟೇ ದೊಡ್ಡವರಿರಲಿ ಅಸಹಿಷ್ಣುಗಳಾಗಿರಬಾರದು, ಅಧಿಕಾರದರ್ಪ ಚಲಾಯಿಸಬಾರದು ಎಂದು

ಎಲ್ಲ ಕಾರ್ಯಕರ್ತರಿಗೂ ಅದು ಸ್ವಾಗತಾರ್ಹ ಸೂಕ್ತ ಎಚ್ಚರಿಕೆ. ನಮ್ಮ ತರ್ಕ ಬುದ್ಧಿಗೂ ಹೃದಯಕ್ಕೂ ಹಿಡಿಸದುದು ಯಾವುದನ್ನೂ, ಎಲ್ಲವನ್ನೂ—ತಿರಸ್ಕರಿಸಲು ಹೇಳುತ್ತಾರೆ ಕವಿ. ಸ್ವರಾಜ್ಯ ಗಳಿಸುವುದಾದರೆ ಏನೇ ಬರಲಿ ಸತ್ಯಕ್ಕಾಗಿ ನಾವು ನಿಲ್ಲಬೇಕಾದೀತು. ತನ್ನ ಸಂದೇಶ ಸ್ವೀಕೃತವಾಗದಿದ್ದಾಗ ಕೋಪಗೊಳ್ಳುವ ಸುಧಾರಕ ಅಡವಿಗೆ ಹೋಗಿ ಕಾದು, ನಿರೀಕ್ಷಿಸಿ, ಪ್ರಾರ್ಥಿಸುವುದನ್ನು ಕಲಿಯಬೇಕು. ಇದೆಲ್ಲವನ್ನೂ ಎಲ್ಲರೂ ಹಾರ್ದಿಕವಾಗಿ ಒಪ್ಪಲೇಬೇಕು. ಸತ್ಯ ಹಾಗೂ ತರ್ಕಶುದ್ಧಿಗಾಗಿ ಎದ್ದು ನಿಂತುದಕ್ಕಾಗಿ ದೇಶಬಾಂಧವರ ಕೃತಜ್ಞತೆಗೆ ಕವಿ ಪಾತ್ರರು. ನಮ್ಮ ತರ್ಕಬುದ್ಧಿಯನ್ನು ಮತ್ತಾರಿಗೋ ಒತ್ತೆ ಇಟ್ಟರೆ ನಮ್ಮ ಆಗಿನ ಸ್ಥಿತಿ ಹಿಂದಿನ ಸ್ಥಿತಿಗಿಂತ ಕೆಟ್ಟದೇ ಆದೀತು. ನಾನು ಹೇಳಿದುದನ್ನೆಲ್ಲ ಅಥವಾ ಮಾಡಿದುದನ್ನೆಲ್ಲ ದೇಶ ಕುರುಡಾಗಿ, ವಿಚಾರಮಾಡದೆ ಅನುಸರಿಸಿದೆಯೆಂದು ನನಗೆ ತಿಳಿದುಬಂದರೆ ಅತ್ಯಂತ ದುಃಖವಾದೀತು ನನಗೆ. ದೌರ್ಜನ್ಯಕಾರಿಯ ಚಾಟಿಗೆ ಹೆದರಿ ಬಲಾತ್ಕಾರವಾಗಿ ಶರಣಾಗುವುದಕ್ಕಿಂತ ಪ್ರೇಮಕ್ಕೆ ಕುರುಡಾಗಿ ಶರಣಾಗುವುದು ಹೆಚ್ಚು ಹಾನಿಕರ ಎಂಬ ಸಂಗತಿಯನ್ನು ನಾ ಬಲ್ಲೆ. ಪಾಶವೀಯತೆಯ ಗುಲಾಮನಿಗೆ ಭರವಸೆಯುಂಟು, ಪ್ರೇಮದ ದಾಸನಿಗೆ ಯಾವುದೂ ಇಲ್ಲ. ದುರ್ಬಲನನ್ನು ಬಲಿಷ್ಠನಾಗಿಸಲು ಪ್ರೇಮ ಬೇಕು. ನಂಬದವನಿಂದ ವಿಧೇಯತೆಯನ್ನು ಕಡ್ಡಾಯವಾಗಿ ಪಡೆಯುವ ಪ್ರೇಮ ದೌರ್ಜನ್ಯಕಾರಿಯೇ. ಅರ್ಥ ತಿಳಿಯದೆ ಮಂತ್ರವನ್ನು ಬಡಬಡಿಸುವುದು ಅಮಾನುಷ. ಆದುದರಿಂದ ದಾಸ್ಯವೃತ್ತಿಯಿಂದ ರಾಟೆಯ ಕರೆಯನ್ನು ಅನುಕರಿಸುತ್ತಿರುವವರು ನಿರ್ಭಯವಾಗಿ ಬಂಡಾಯ ಘೋಷಿಸಬೇಕೆಂದು ಕವಿ ಆಮಂತ್ರಿಸಿರುವುದು ಒಳ್ಳೆಯದೇ. ನಮ್ಮ ಆತುರದಲ್ಲಿ ಅಸಹನೆ ತೋರಿ ನಮ್ಮಿಂದ ಭಿನ್ನ ಅಭಿಪ್ರಾಯ ಉಳ್ಳವರ ಬಗ್ಗೆ ಹಿಂಸೆಯನ್ನೂ ತೋರಿರುವ ನಮಗೆ ಅವರ ಪ್ರಬಂಧ ಎಚ್ಚರಿಕೆಯೇ ಸರಿ. ಅಂಧಾಭಿಮಾನ, ಆಲಸ್ಯ, ಅಸಹನೆ, ಅಜ್ಞಾನ, ಜಡತೆ ಮುಂತಾದ ಶತ್ರುಗಳ ಆಗಮನದ ವಿರುದ್ಧ ಎಚ್ಚರಿಸುತ್ತಿರುವ ಪಹರೆಗಾರನೆಂದು ಕವಿಯನ್ನು ನಾ ಭಾವಿಸುತ್ತೇನೆ.

"ವಿವೇಕ ತಪ್ಪದಂತೆ ಎಚ್ಚರವಾಗಿರುವ ಅಗತ್ಯದ ಬಗ್ಗೆ ಕವಿಯೊಡನೆ ನನ್ನ ಸಹಮತವಿದ್ದರೂ ಇಂದು ದೇಶದಲ್ಲಿ ವ್ಯಾಪಕವಾಗಿ ಅಂಧ ಅಂಧಾನುಕರಣ ಇದೆಯೆಂಬ ಸೂಚನೆಯನ್ನು ಮಾನ್ಯಮಾಡುವೆನೆಂದು ತಿಳಿಯತಕ್ಕದ್ದಲ್ಲ.

ಮತ್ತೆ ಮತ್ತೆ ತರ್ಕಬುದ್ಧಿಯನ್ನೇ ನಾನು ಆವಾಹಿಸಿದೇನೆ. ಸಮೃದ್ಧಿದಾತೆ ಯೆಂದು ಇಂದು ರಾಟೆಯನ್ನು ದೇಶ ಸುದೈವದಿಂದ ನಂಬಿರುವುದಾದರೂ ಬಹಳ ಹಿಂಜರಿದು ಹಿಂಜರಿದು ದೀರ್ಘವಿಚಾರಮಾಡಿದ ಬಳಿಕವೇ ಎಂದು ಕವಿಗೆ ಆಶ್ವಾಸನ ಕೊಡುತ್ತೇನೆ. ಸುಶಿಕ್ಷಿತ ಭಾರತ ಈಗಲೂ ಚರಖದ ಹಿಂಬದಿಯ ಸತ್ಯವನ್ನು ಅರಗಿಸಿಕೊಂಡಿದೆಯೆಂದು ನನಗೆ ಖಚಿತವಿಲ್ಲ. ಒಳಗಿನ ತಿರುಳಿನ ಬದಲು ಮೇಲಿನ ಥೂಳನ್ನೇ ನಿಜವೆಂದು ಅವರು ತಪ್ಪು ಭಾವಿಸದಿರಲಿ. ಕವಿವರ್ಯರು ಆಳವಾಗಿ ಇಳಿದು ತಾವೇ ನೋಡಲಿ, ರಾಟೆಯನ್ನು ಕುರುಡು ನಂಬಿಕೆಯಿಂದ ಪರಿಗ್ರಹಿಸಿರುವರೋ ಅಥವಾ ವಿಚಾರಪೂರ್ವಕವಾಗಿ ಅದರ ಅಗತ್ಯ ಅರಿತಿರುವರೋ ಎಂದು.

"ಕವೀಂದ್ರನನ್ನೂ ಋಷಿಯನ್ನೂ ಯಜ್ಞಾರ್ಥವಾಗಿ ನೂಲಲು ಬೇಡು ತ್ತೇನೆ. ಯುದ್ಧಕಾಲದಲ್ಲಿ ಕವಿ ತನ್ನ ಕೊಳಲು ಕೆಳಗಿಡುತ್ತಾನೆ. ವಕೀಲ ತನ್ನ ಕಾನೂನಿನ ಕಡತಗಳನ್ನು ಕಟ್ಟಿಡುತ್ತಾನೆ, ವಿದ್ಯಾರ್ಥಿ ತನ್ನ ಹೊತ್ತಗೆ ಗಳನ್ನು ಬಿಸುಡುತ್ತಾನೆ. ಯುದ್ಧ ಕಳೆದಮೇಲೆ ಕವಿ ನಿಜವಾದ ರಾಗ ಹಾಡಿ ಯಾನು, ವಕೀಲ ಕಡತ ಬಿಚ್ಚಿಯಾನು, ಆಗತಾನೇ ಜನರಿಗೆ ವ್ಯಾಜ್ಯಕ್ಕೆ ಬಿಡುವು? ಮನೆಗೆ ಬೆಂಕಿ ಬಿದ್ದಿರುವಾಗ ಮನೆಯವರೆಲ್ಲ ಓಡಿಹೋಗಿ ಬೆಂಕಿ ಆರಿಸಲು ಒಂದೊಂದು ಗಡಿಗೆ ನೀರು ತಂದಾರು. ಸುತ್ತಲೂ ಜನ ಹಸಿವಿನಿಂದ ಸಾಯುತ್ತಿರುವಾಗ ಅವರಿಗೆ ಅನ್ನ ಕೊಡುವುದಕ್ಕಿಂತ ಬೇರೇನು ಉದ್ಯೋಗ ಇದ್ದೀತು ನನಗೆ? ಭಾರತಕ್ಕೆ ಬೆಂಕಿ ಹತ್ತಿದೆಯೆಂದು ನನ್ನ ನಂಬಿಕೆ. ಅದರ ಮನುಷ್ಯತ್ವ ದಿನವೂ ಸುಟ್ಟು ಕರಕಾಗುತ್ತಿದೆ. ಹಸಿವಿನಿಂದ ಸಾಯುತ್ತಿದೆ, ಅನ್ನ ಕೊಳ್ಳಲು ಕೈಗೆ ಕೆಲಸವೇ ಇಲ್ಲ. ಜನ ದುಡಿಯಲಾರರೆಂದು ಖುಲ್ಲಾ ಉಪವಾಸ ಬಿದ್ದಿಲ್ಲ, ಅವರಿಗೆ ಕೆಲಸವೇ ಇಲ್ಲ. ರಾಯಲಸೀಮೆಗೆ ಒಂದೇ ಸಮವಾಗಿ ನಾಲ್ಕನೆಯ ಬಾರಿಗೆ ಬರ ಬಡಿದಿದೆ. ಉತ್ಕಲವಂತೂ ನಿತ್ಯ ನಿರಂತರ ಬರದ ಭೂಮಿಯೇ. ನಮ್ಮ ನಗರಗಳು ಹಿಂದೂಸ್ತಾನವಲ್ಲ. ಭಾರತ ಏಳು ಲಕ್ಷ ಹಳ್ಳಿಗಳಲ್ಲಿದೆ. ನಗರಗಳು ಹಳ್ಳಿಗಳ ಮೇಲೆ ಬದುಕುತ್ತವೆ. ಅವಕ್ಕೇನೂ ಹೊರದೇಶಗಳಿಂದ ಸಂಪತ್ತು ಬಾರದು. ಯೂರೋಪ್, ಅಮೆರಿಕಾ, ಜಪಾನ್‌ಗಳ ಭಾರಿ ಕೈಗಾರಿಕೋದ್ಯಮಿಗಳ ದಳ್ಳಾಳಿಗಳು, ಮಧ್ಯಸ್ಥಗಾರರು ನಮ್ಮ ಪಟ್ಟಣಗಳ ಜನ. ಕಳೆದ ಇನ್ನೂರು ವರ್ಷಗಳಲ್ಲಿ

ನಮ್ಮ ರಕ್ತ ಹೀರುವ ಕ್ರಮದಲ್ಲಿ ಅವರೊಡನೆ ನಗರವಾಸಿಗಳು ಸಹಕರಿಸಿದಾರೆ. ಭಾರತ ಅನುದಿನವೂ ಹೆಚ್ಚು ಹೆಚ್ಚು ಬಡವಾಗುತ್ತಿದೆಯೆಂಬುದು ನನ್ನ ಅನುಭವ ದಿಂದ ಬಂದ ನಂಬಿಕೆ. ಕೈಕಾಲುಗಳ ರಕ್ತಸಂಚಾರ ನಿಂತೇಹೋಗಿದೆ. ಎಚ್ಚರ ವಹಿಸದಿದ್ದರೆ ಭಾರತವೇ ಕುಸಿದು ಹೋದೀತು.

" ನಿರುದ್ಯೋಗದಲ್ಲಿ ಮುಳುಗಿ ಸವೆದುಹೋಗುತ್ತಿರುವ ಜನರಿಗೆ ದೇವರೇ ಪ್ರತ್ಯಕ್ಷವಾಗುವ ಧೈರ್ಯಮಾಡಿದರೂ ಕೆಲಸದ ರೂಪದಲ್ಲಿಯೇ ಅವತಾರ ಎತ್ತ ಬೇಕು, ಅನ್ನದ ರೂಪದಲ್ಲಿಯೆ ಕೂಲಿ ಕೊಡಬೇಕು. ತನ್ನ ಅನ್ನಕ್ಕಾಗಿ ದುಡಿಯ ಲೆಂದು ದೇವರು ಮನುಷ್ಯನನ್ನು ಸೃಷ್ಟಿಸಿದ. ಕೆಲಸಮಾಡದೆ ಉಣ್ಣುವವರು ಕಳ್ಳರು ಎಂದ. ಭಾರತದ ಶೇಕಡಾ ೮೦ರಷ್ಟು ಜನ ವರ್ಷದಲ್ಲಿ ಅರ್ಧಭಾಗವೆಲ್ಲ ಬಲವಂತವಾಗಿ ಕಳ್ಳರು. ಭಾರತವೆಲ್ಲ ಒಂದು ಭಾರಿ ಸೆರೆಮನೆಯಾಗಿರುವುದರಲ್ಲಿ ಏನು ಆಶ್ಚರ್ಯ ? ಭಾರತವನ್ನು ರಾಟೆಯತ್ತ ದೂಡುತ್ತಿರುವ ವಾದ ಹಸಿವೇ. ರಾಟೆಯ ಕರೆಯೇ ಅತ್ಯಂತ ಉದಾತ್ತ ಕರೆ. ಏಕೆಂದರೆ ಅದು ಪ್ರೇಮದ ಕರೆ. ಪ್ರೇಮವೇ ಸ್ವರಾಜ್ಯ. ಅಗತ್ಯವಾದ ಶರೀರಶ್ರಮವೂ ' ಬುದ್ಧಿಯನ್ನು ಕುಂಠಿತ ' ಗೊಳಿಸುವುದೆಂದಾದರೆ ರಾಟೆಯೂ ಹಾಗೆ ಮಾಡೀತು. ಪಶುಗಳಿಗಿಂತ ಕೀಳಾಗಿ ಇರುವ, ಇನ್ನೇನು ಸಾಯುವ ಸ್ಥಿತಿಯಲ್ಲಿರುವ ಕೋಟ್ಯಂತರ ಜನರ ಬಗೆಗೆ ವಿಚಾರಮಾಡೋಣ. ಸಾಯುತ್ತಿರುವ ಕೋಟಿಗಟ್ಟಲೆ ನಮ್ಮ ದೇಶಬಾಂಧ ವರಿಗೆ ರಾಟೆಯೇ ಸಂಜೀವನೌಷಧ. ' ಅನ್ನಕ್ಕಾಗಿ ದುಡಿಯಬೇಕಾದ ಅಗತ್ಯ ಇಲ್ಲದ ನಾನೇಕೆ ದುಡಿಯಲಿ ? '—ಎಂದು ಕೇಳಬಹುದು. ಏಕೆಂದರೆ, ನನ್ನದು ಅಲ್ಲದುದನ್ನು ನಾ ಉಣ್ಣುತ್ತಿದೇನೆ. ನನ್ನ ದೇಶಬಾಂಧವರನ್ನು ಸೂರೆಮಾಡಿ ಬದುಕುತ್ತಿದೇನೆ ನಾನು. ಕಿಸೆಗೆ ಬೀಳುತ್ತಿರುವ ಒಂದೊಂದು ಕಾಸಿನ ಹಾದಿ ಯನ್ನೂ ಪತ್ತೆಹಚ್ಚಿ, ನಾ ಬರೆವುದರ ಸತ್ಯ ಅರಿವಾದೀತು. ಜನರಿಗೆ ಅವರ ಬಲಾತ್ಕಾರದ ನಿರುದ್ಯೋಗವನ್ನು ಸದುಪಯೋಗಗೊಳಿಸುವುದು ತಿಳಿಯದಿದ್ದರೆ ಲಕ್ಷಗಟ್ಟಲೆ ಜನರಿಗೆ ಸ್ವರಾಜ್ಯಕ್ಕೆ ಯಾವ ಅರ್ಥವೂ ಇರದು. ಸ್ವಲ್ಪ ಅವಧಿ ಯಲ್ಲೇ ಈ ಸ್ವರಾಜ್ಯಸಾಧನೆ ಸಾಧ್ಯ, ರಾಟೆಯ ಪುನರುದ್ಧಾರದಿಂದಲೇ ಅದು ಸಾಧ್ಯ.

" ವಿಕಾಸ, ಸ್ವಯಂನಿರ್ಣಯಾಧಿಕಾರ, ಸ್ವಾತಂತ್ರ್ಯ—ಇವೆಲ್ಲ ನನಗೆ ಖಂಡಿತ ಬೇಕು, ಆದರೆ ಇವನ್ನೆಲ್ಲ ಆತ್ಮಕ್ಕಾಗಿ ಬಯಸುತ್ತೇನೆ. ಶಿಲಾಯುಗ

ಕ್ಕಿಂತ ಉಕ್ಕಿನ ಈ ಯುಗ ಪ್ರಗತಿಪರವೇ ಎಂದು ನನಗೆ ಸಂದೇಹ, ಆ ಬಗೆಗೆ ನನ್ನದು ಅನಾಸ್ಥೆ. ಆತ್ಮವಿಕಾಸಕ್ಕಾಗಿಯೇ ನಮ್ಮ ಬುದ್ಧಿ ಹಾಗೂ ಇತರ ಸಾಮರ್ಥ್ಯಗಳು ಮೀಸಲಾಗಬೇಕು. ಆಧುನಿಕ ರೀತಿಯಲ್ಲಿ ಸನ್ನದ್ಧನಾದ ಮನುಷ್ಯ ಶಾಶ್ವತವಾದ ಹೊಸ ಬೋಧವೊಂದನ್ನು ಮಾನವಕುಲಕ್ಕೆ ನೀಡುವುದನ್ನು ಕಲ್ಪಿಸಿಕೊಳ್ಳಲು ನನಗೇನೂ ಕಷ್ಟವಿಲ್ಲ; ಆದರೆ ದಾರಿಬೆಳಕಿಗಾಗಿ ಕೇವಲ ಚಕಮುಕಿ ಕಲ್ಲನ್ನು ಮಾತ್ರ ಇಟ್ಟುಕೊಂಡಿರುವ ಮನುಷ್ಯ ಹೊಸ ಹಾಡು ಹಾಡುತ್ತ ಸಂಕಟಪಡುತ್ತಿರುವ ಇಂದಿನ ಜಗತ್ತಿಗೆ ಶಾಂತಿಸೌಹಾರ್ದ ಸಂದೇಶವನ್ನು ಬೀರುವುದನ್ನು ಊಹಿಸಿಕೊಳ್ಳಲು ನನಗೆ ಕಷ್ಟ ಇನ್ನೂ ಕಡಿಮೆ. ರಾಟೆಯ ಪರವಾಗಿ ವಾದಮಾಡುವುದೆಂದರೆ ಶ್ರಮಪ್ರತಿಷ್ಠೆಯ ಮನ್ನಣೆಗಾಗಿ ವಾದಿಸುವುದು ಎಂದೇ.

“ ನೂಲುವ ರಾಟೆಯನ್ನು ಕಳೆದುಕೊಂಡಾಗ ನಮ್ಮ ಎಡ ಶ್ವಾಸಕೋಶವನ್ನು ಕಳೆದುಕೊಂಡೆವೆನ್ನುತ್ತೇನೆ. ಆದುದರಿಂದ ತೀವ್ರ ಕ್ಷಯರೋಗಕ್ಕೆ ನಾವೀಗ ತುತ್ತು. ರಾಟೆಯನ್ನು ಮತ್ತೆ ರೂಢಿಗೆ ತಂದರೆ ಈ ಹಾಳು ರೋಗವನ್ನು ತಡೆದಂತೆ. ಎಲ್ಲ ಸನ್ನಿವೇಶಗಳಲ್ಲೂ ಎಲ್ಲರೂ ಮಾಡಬೇಕಾದ ಹಲವು ಸಂಗತಿಗಳಿರುತ್ತವೆ. ಭಾರತದ ಸನ್ನಿವೇಶಕ್ಕೆ ಕನಿಷ್ಠಪಕ್ಷ ಸಂಕ್ರಮಣ ಕಾಲದಲ್ಲಂತೂ ರಾಟೆ ಎಲ್ಲರೂ ನಡೆಸಲೇ ಬೇಕಾದಂಥದು, ಬಹುಮಂದಿ ಎಂದೆಂದೂ ಅದನ್ನು ನಡೆಸಲೇಬೇಕು.

“ ನಮ್ಮ ವಿದೇಶೀವಸ್ತ್ರದ ಪ್ರೇಮವೇ ರಾಟೆಯನ್ನು ಅದರ ಗೌರವಾನ್ವಿತ ಸ್ಥಾನದಿಂದ ಉಚ್ಚಾಟನೆ ಮಾಡಿತು. ಅಂತಲೇ ವಿದೇಶೀವಸ್ತ್ರಧಾರಣೆ ಪಾಪವೆಂದು ನಾ ಗ್ರಹಿಸುತ್ತೇನೆ. ಅರ್ಥಶಾಸ್ತ್ರ–ನೀತಿಶಾಸ್ತ್ರಗಳ ನಡುವೆ ನಾನೇನೂ ಹರಿತವಾದ ಅಥವಾ ಯಾವುದೇ ಎಳೆ ಬಿಡಿಸುವುದಿಲ್ಲ. ವ್ಯಕ್ತಿಯ ಅಥವಾ ಒಂದು ರಾಷ್ಟ್ರದ ನೈತಿಕ ಸ್ವಾಸ್ಥ್ಯಕ್ಕೆ ಧಕ್ಕೆ ತಗಲಿಸುವ ಅರ್ಥಶಾಸ್ತ್ರ ಅನೀತಿಪರ, ಆದಕಾರಣ ಪಾಪಕರ. ಹಾಗೆಯೇ ಒಂದು ದೇಶವನ್ನು ಇನ್ನೊಂದು ದೇಶ ಕಿತ್ತುತಿನ್ನಲು ಅನುಮತಿಸುವ ಅರ್ಥಶಾಸ್ತ್ರವೂ ಅನೀತಿಪರ. ಜೀತದ ದುಡಿಮೆಯಿಂದಾದ ವಸ್ತುಗಳನ್ನು ಕೊಳ್ಳುವುದು, ಬಳಸುವುದು ಪಾಪಕರ. ಅಮೆರಿಕದ ಗೋಧಿಯನ್ನು ಉಂಡು ನೆರೆಯ ವರ್ತಕ ಗಿರಾಕಿಯಿಲ್ಲದಂತೆ ಉಪವಾಸ ಸಾಯುವಂತೆ ಮಾಡುವುದು ಪಾಪಕರ. ನನ್ನ ನೆರೆಹೊರೆಯ ನೂಲುವವರು,

ನೇಯುವವರು ತಯಾರಿಸಿದ ಬಟ್ಟೆಯನ್ನು ಉಪಯೋಗಿಸಿದರೆ ನನಗೆ ಬಟ್ಟೆಯೂ ಆದೀತು, ಅವರಿಗೆ ಹೊಟ್ಟೆಗೂ ಬಟ್ಟೆಗೂ ಕೊಟ್ಟಂತೆ ಆದೀತೆಂದು ತಿಳಿದೂ ರೀಜೆಂಟ್ ಸ್ಟ್ರೀಟ್‌ನ ಅತ್ಯಾಧುನಿಕ ಮಾದರಿ ವಸ್ತ್ರ ಧರಿಸುವುದೂ ಹಾಗೆಯೇ ನನಗೆ ಪಾಪಕರ. ಈ ಪಾಪದ ಗಡಿಗೆ ತುಂಬಿ ಒಡೆಯುತ್ತಿದೆಯೆಂದು ಅರಿವಾದ ಮೇಲೆ ಈ ವಿದೇಶೀವಸ್ತ್ರಗಳನ್ನು ಬೆಂಕಿಗೆ ಆಹುತಿ ಕೊಟ್ಟು ನನ್ನನ್ನು ಪಾವನ ಗೊಳಿಸಿಕೊಳ್ಳಬೇಕು, ಮುಂದೆ ನೆರೆಯವರು ತಯಾರಿಸಿದ ಒರಟು ಖಾದಿ ಧರಿಸಿಯೇ ತೃಪ್ತನಾಗಬೇಕು. ನನ್ನ ನೆರೆಹೊರೆಯವರು ಒಮ್ಮೆ ಬಿಟ್ಟುಕೊಟ್ಟ ರಾಟೆಯನ್ನು ಮತ್ತೆ ಕೈಗೊಳ್ಳಲಾರರೆಂಬುದಕ್ಕಾಗಿ ನಾನೇ ಮೊದಲು ಅದನ್ನು ನಡೆಸಲು ತೊಡಗಬೇಕು. ಅದನ್ನು ಹಾಗೆ ಜನಪ್ರಿಯಗೊಳಿಸಬೇಕು.

“ ಕವಿಯನ್ನು ಸುಡಿರೆಂದು ಹೇಳುವ ಬಟ್ಟೆ ಅವರದು, ಅವರದೇ. ಅದು ಬಡವರದೋ, ಅಲ್ಪವಸ್ತ್ರದವರದೋ ಆಗಿದ್ದರೆ ಬಡವರದನ್ನು ಬಡವರಿಗೆ ಎಂದೋ ಕೊಡಿಸಿಬಿಡುತ್ತಿದ್ದೆ. ನನ್ನ ವಿದೇಶೀ ವಸ್ತ್ರವನ್ನು ಸುಡುವಾಗ ನನ್ನ ಮಾನಗೇಡಿತನವನ್ನು ಸುಡುತ್ತೇನೆ. ಬತ್ತಲೆ ಇರುವವರಿಗೆ ಅತ್ಯುತ್ಕಟವಾಗಿ ಬೇಕಾದ ಕೆಲಸ ಕೊಡುವ ಬದಲು ಅವರಿಗೆ ಬೇಕಿಲ್ಲದ ಅರಿವೆ ಕೊಟ್ಟು ಅವರನ್ನು ಅಪಮಾನಿಸಲಾರೆ. ಅವರ ಪೋಷಕನಾಗುವ ಪಾಪವನ್ನು ನಾ ಎಸಗಲಾರೆ, ಅವರನ್ನು ಬಡತನಕ್ಕೆ ದೂಡುವಲ್ಲಿ ಭಾಗಿಯಾಗಿದೇನೆಂದು ಅರಿತ ಮೇಲೆ ನಾನು ಅವರಿಗೆ ಪ್ರತಿಷ್ಠಿತ ಸ್ಥಾನ ಕೊಟ್ಟೇನು, ತುಣುಕು ರೊಟ್ಟಿಯನ್ನೋ ಹರಕು ಚಿಂದಿಯನ್ನೋ ಕೊಡೆ, ನಾನುಣ್ಣುವ ಅತ್ಯುತ್ತಮ ಆಹಾರವನ್ನೂ, ಉಡುವ ಅರಿವೆಯನ್ನೂ ಇತ್ತು ಅವರ ದುಡಿಮೆಯಲ್ಲಿ ನಾನೂ ಭಾಗಿ ಯಾದೇನು.

“ ಅಸಹಕಾರವಾಗಲಿ ಸ್ವದೇಶೀಯಾಗಲಿ ಪೃಥಕ್ ತತ್ತ್ವವಲ್ಲ. ಅಸಹ ಕಾರ, ಅಹಿಂಸೆ ಹಾಗೂ ಸ್ವದೇಶೀ ಇಡೀ ಜಗತ್ತಿಗೆ ನೀಡುವಂಥ ಸಂದೇಶ. ಹೀಗೆಂದು ಗೋಪುರ ಹತ್ತಿ ಸಾರಲು ಕೇವಲ ನನ್ನ ನಮ್ರತೆ ಅಡ್ಡಿ, ಅಷ್ಟೆ. ಅದನ್ನು ಬೀರಿದ ನೆಲದಲ್ಲಿ ಅದು ಸಫಲವಾಗದಲ್ಲಿ ಅದು ವ್ಯರ್ಥವಾದೀತು. ಈಗಲಂತೂ ತನ್ನ ಅಧಃಪತನ, ದಿವಾಳಿತನ, ಸೋಂಕುಜಾಡ್ಯಗಳ ಹೊರ ತಾಗಿ ಜಗತ್ತಿಗೆ ನೀಡಲು ಭಾರತದ ಬಳಿ ಏನೂ ಇಲ್ಲ. ಜಗತ್ತಿನೆಲ್ಲೆಡೆಗೆ ನಮ್ಮ ಪ್ರಾಚೀನ ಶಾಸ್ತ್ರಗಳನ್ನು ಕಳುಹಿಸೋಣವೇ ? ಎಷ್ಟೋ ಮುದ್ರಣಗಳಲ್ಲಿ ಅವು

ಈಗಾಗಲೇ ಅಚ್ಚಾಗಿವೆ, ಶಂಕಾಶೀಲವಾದ ವಿಗ್ರಹಪೂಜಕ ಜಗತ್ತು ಅವುಗಳನ್ನು ಕಣ್ಣು ತೆರೆದು ನೋಡಲೂ ಒಪ್ಪಲಾರದು, ಏಕೆಂದರೆ ಆ ಶಾಸ್ತ್ರಗಳ ಪೀಳಿಗೆ ಹಾಗೂ ಸಂರಕ್ಷಕರಾದ ನಾವು ಬಾಳಿನಲ್ಲಿ ಅವುಗಳಂತೆ ನಡೆಯುತ್ತಿಲ್ಲ. ಜಗತ್ತಿಗೆ ಹಂಚುವ ಮುನ್ನ ನನ್ನಲ್ಲಿ ಏನಾದರೂ ಇರಬೇಡವೇ ? ಇಂಗ್ಲಿಷರೊಡನೆಯಾಗಲಿ, ಪಶ್ಚಿಮದ ವಿರುದ್ಧವಾಗಿಯಾಗಲಿ ಅಲ್ಲ ನಮ್ಮ ಅಸಹಕಾರ. ನಮ್ಮ ಅಸಹಕಾರ ಇಂಗ್ಲಿಷರು ಭಾರತದಲ್ಲಿ ಸ್ಥಾಪಿಸಿರುವ ಪದ್ಧತಿಯೊಂದಿಗೆ, ಈ ಭೌತವಾದೀ ನಾಗರಿಕತೆಯೊಂದಿಗೆ, ಅದರಿಂದ ಹುಟ್ಟುವ ದುರಾಶೆ, ದುರ್ಬಲರ ಶೋಷಣೆಯೊಂದಿಗೆ. ನಮ್ಮ ಅಸಹಕಾರ ಇಂಗ್ಲಿಷ್ ಆಡಳಿತಗಾರರೊಡನೆ ಅವರ ಷರತ್ತಿನಮೇಲೆ ಸಹಕರಿಸಲು ನಕಾರ. ಅವರಿಗೆ ನಾವು ಹೇಳುತ್ತೇವೆ : 'ಬನ್ನಿ, ನಮ್ಮ ಷರತ್ತಿನಮೇಲೆ ನಮ್ಮೊಡನೆ ಸಹಕರಿಸಿ. ಅದರಿಂದ ನಮಗೆ, ನಿಮಗೆ, ಇಡೀ ಲೋಕಕ್ಕೇ ಹಿತ. ನಮ್ಮ ಕಾಲು ಕಳಚಿಹೋಗದಂತೆ ಗಟ್ಟಿ ಆಗಬೇಕು ನಾವು. ಮುಳುಗುತ್ತಿರುವ ಮನುಷ್ಯ ಇನ್ನೊಬ್ಬನನ್ನು ಉಳಿಸಲಾರ, ನಮ್ಮನ್ನು ನಾವೇ ಉಳಿಸಿಕೊಳ್ಳಲು ಯತ್ನಿಸಬೇಕು. ಭಾರತರಾಷ್ಟ್ರೀಯತೆ ಪ್ರತ್ಯೇಕವಾದುದಲ್ಲ, ಆಕ್ರಮಣಕಾರಿ ಅಥವಾ ವಿಧ್ವಂಸನಕಾರಿಯೂ ಅಲ್ಲ. ಆರೋಗ್ಯಕಾರಿ ಅದು, ಧರ್ಮನಿಷ್ಠವಾದುದು, ಆ ಕಾರಣದಿಂದ ಮಾನವೀಯ. ಮಾನವತೆಗಾಗಿ ಸಾಯಲು ಆಶಿಸುವುದಕ್ಕಿಂತ ಮೊದಲು ಭಾರತ ಬದುಕಲು ಕಲಿಯಬೇಕು. ಬೆಕ್ಕಿನ ದವಡೆಯಲ್ಲಿ ಸಿಕ್ಕಿರುವ ಇಲಿಯ ಬಲಾತ್ಕಾರದ ಬಲಿದಾನದಿಂದ ಅದಕ್ಕೆ ಯಾವ ಬೆಲೆಯೂ ಇಲ್ಲ.

"ನೀವು ಕವಿ, ಭವಿಷ್ಯದಲ್ಲಿ ವಿಹರಿಸುವವರು, ನಮ್ಮನ್ನೂ ಹಾಗೆಯೇ ಮಾಡಿರೆನ್ನುತ್ತೀರಿ. ನಸುಕಿನಲ್ಲಿ ನನ್ನಿವಾಡುಗಳನ್ನು ಉಲಿಯುತ್ತ ಮುಗಿಲಿಗೆ ಹಾರುವ ಹಕ್ಕಿಗಳ ಸೊಗಸಾದ ಚಿತ್ರ ತೋರಿಸುತ್ತೀರಿ ನಮ್ಮ ಬೆರಗಾದ ಕಣ್ಣಿಗೆ. ನಮಗೂ ಅದು ಕಣ್ಣುತುಂಬುತ್ತದೆ. ಆ ಹಕ್ಕಿ ಹಿಂದಿನ ದಿನ ಹೊಟ್ಟೆತುಂಬ ತಿಂದು ಹಾಯಾಗಿ ಇರುಳು ಮಲಗಿ, ಅವಕ್ಕೆ ಹೊಸ ಬಲ, ಹೊಸ ರಕ್ತ ಬಂದಿದೆ. ನಾನು ನೋಡಿರುವ ಹಕ್ಕಿಗಳಿಗೆ ಹಾರಲು ಹಾಗಿರಲಿ, ರೆಕ್ಕೆ ಬಡಿಯಲೂ ಬಲವಿಲ್ಲ. ಆ ನೋಟ ತುಂಬಾ ನೋಯಿಸಿದೆ. ಭಾರತದ ಮುಗಿಲ ಕೆಳಗಿನ ನರಪಕ್ಷಿಗೆ ನಿದ್ದೆ, ವಿಶ್ರಾಂತಿ ಎಲ್ಲಿಯದು ? ಅದೊಂದು ಸೋಗು, ಸುಳ್ಳುನಾಟಕ. ಆ ನಾಟಕ ಮುಗಿಸಿ ಬೆಳಗ್ಗೆ ಎದ್ದಾಗ ಈ ನರಪಕ್ಷಿಗೆ ಮುನ್ನಾದಿನಕ್ಕಿಂತ ಬಲ

ಇಳಿದುಹೋಗಿರುತ್ತದೆ. ಕೋಟ್ಯನುಕೋಟಿ ಜನರಿಗೆ ಬಾಳು ನಿತ್ಯಜಾಗರಣೆ ಅಥವಾ ಶಾಶ್ವತಸಮಾಧಿ. ಆ ಸಂಕಟ ಅವರ್ಣನೀಯ. ಅದನ್ನು ಅರಿತು ಕೊಳ್ಳಲು ಅನುಭವಿಸದೆ ಬೇರೆ ಹಾದಿಯಿಲ್ಲ. ಸಂಕಟಪಡುವ ರೋಗಿಗಳಿಗೆ ಕಬೀರನ ಹಾಡು ಹಾಡಿ ಸಮಾಧಾನ ಕೊಡಬಂದೀತೇ? ಹಸಿವಿನಿಂದ ತಲ್ಲಣಿ ಸುವ ಈ ಕೋಟಿಕೋಟಿ ಜನ ಬೇಡುವ ಕಾವ್ಯ ಒಂದೇ: ಪುಷ್ಟಿಕರ ಅನ್ನ! ಅದನ್ನು ಅವರಿಗೆ ಕೊಡುವುದು ಸಾಧ್ಯವಿಲ್ಲ. ಅವರೇ ಅದನ್ನು ಗಳಿಸಬೇಕು. ಮೈಯ ಬೆವರು ಹರಿಸಿ ಮಾತ್ರವೇ ಅವರು ಅದನ್ನು ಪಡೆಯಬಲ್ಲರು."[೬೦]

## ಅಧ್ಯಾಯ – ೫

# ಗ್ರಾಮ ಪುನರ್ನಿರ್ಮಾಣ

### ಹಳ್ಳಿಗಳ ಸ್ಥಾನ

ನಮ್ಮ ಹಳ್ಳಿಗಳ ಸೇವೆಯೆಂದರೇ ಸ್ವರಾಜ್ಯ ಸ್ಥಾಪನೆ. ಉಳಿದುದೆಲ್ಲ ಕೆಲಸವಿಲ್ಲದ ಕನಸು.೬೧

ಹಳ್ಳಿ ಹಾಳಾದರೆ ಹಿಂದೂಸ್ತಾನವೂ ಹಾಳೇ. ಆಮೇಲಂತೂ ಅದು ಭಾರತವೇ ಅಲ್ಲ. ಲೋಕದಲ್ಲಿ ಅದರ ಧರ್ಮಸಂದೇಶಕ್ಕೇ ಎಡೆಯಿಲ್ಲದಾಗಿ ಬಿಡುತ್ತದೆ.೬೨

ಭಾರತದಷ್ಟೇ ಪ್ರಾಚೀನವಾದ ಹಳ್ಳಿಗಳ ಭಾರತ ಹಾಗೂ ವಿದೇಶೀ ಆಳ್ವಿಕೆಯ ಸಂತಾನವಾದ ನಗರಗಳ ಭಾರತಗಳ ನಡುವೆ ನಾವು ಒಂದನ್ನು ಆರಿಸಿಕೊಳ್ಳಬೇಕು. ಇಂದು ನಗರಗಳು ಆಳುತ್ತಿವೆ, ಹಳ್ಳಿಗಳನ್ನು ಹಿಂಡುತ್ತಿವೆ, ಹಾಗಾಗಿ ಅವು ಮಣ್ಣುಗೂಡುತ್ತಿವೆ. ಈ ದಬ್ಬಾಳಿಕೆ ಹೋದಮೇಲೆ ನಗರಗಳು ಹಳ್ಳಿಗಳ ಹಿತಕ್ಕೆ ಅಧೀನವಾಗಬೇಕೆಂದು ನನ್ನ ಖಾದಿ ಮನೋವೃತ್ತಿ ಹೇಳುತ್ತದೆ. ಹಳ್ಳಿಗಳ ಶೋಷಣೆಯೇ ಸಂಘಟಿತ ಹಿಂಸೆ. ಸ್ವರಾಜ್ಯವನ್ನು ಅಹಿಂಸೆಯ ಆಧಾರದ ಮೇಲೆ ನಿರ್ಮಿಸಬಯಸುವೆವಾದರೆ ಹಳ್ಳಿಗಳಿಗೆ ನಾವು ಯೋಗ್ಯ ಸ್ಥಾನ ಕೊಡಲೇಬೇಕು.೬೩

ಹಳ್ಳಿಗೆ ಹೋಗುವ ಸ್ತ್ರೀ ಅಥವಾ ಪುರುಷ ತಮ್ಮ ಹಳ್ಳಿಗಳನ್ನು ಸ್ವಚ್ಛವಾಗಿಯೂ ಸ್ವಾವಲಂಬಿಯಾಗಿಯೂ ಇಡುವುದು ತಮ್ಮ ಕರ್ತವ್ಯವೆಂದು ಹಳ್ಳಿಯ ಜನರಿಗೆ ಹೇಳಲಿ. ಸ್ವರಾಜ್ಯಸರ್ಕಾರವು ಈ ಕೆಲಸಗಳನ್ನು ಮಾಡೀತೆಂದು ಅವರು ನಿರೀಕ್ಷಿಸಬಾರದು. ಗ್ರಾಮ ಉದ್ಯೋಗಗಳು ಮಾಯವಾದ ದೆಸೆಯಿಂದಾಗಿ ನಮ್ಮ ಹಳ್ಳಿಗಳು ವಿನಾಶದ ಅಂಚಿನಲ್ಲಿವೆ. ಗ್ರಾಮ ಉದ್ಯೋಗಗಳ ಪುನರುಜ್ಜೀವನದಿಂದ ಮಾತ್ರವೇ ಹಳ್ಳಿಗಳ ಪುನರುದ್ಧಾರ ಸಾಧ್ಯ. ಈ ಉದ್ಯೋಗಗಳಲ್ಲಿ ಕೇಂದ್ರಸ್ಥಾನ ರಾಟೆಗೆ. ಅದರ ಸುತ್ತ ಉಳಿದ

ಉದ್ಯೋಗಗಳು ಬಂದು ನಿಂತಾವು. ಆಗ ಎಲ್ಲರೂ ಉದ್ಯೋಗದ ಬೆಲೆ ಅರಿತಾರು, ರಾಷ್ಟ್ರದ ಹಿತಕ್ಕೆ ಪೂರಕವಾದ ಉದ್ಯಮಗಳಲ್ಲಿ ಎಲ್ಲರೂ ತೊಡಗಿದರೆ ಜನ ತಮಗಾಗಿಯೇ ಲಕ್ಷಾಂತರ ರೂಪಾಯಿಗಳನ್ನು ಉಳಿಸಿಕೊಳ್ಳಬಹುದು. ಸ್ವಾವಲಂಬನ, ಸ್ವಯಂಪೂರ್ಣತೆಯ ಆದರ್ಶಗಳನ್ನು ಆಚರಣೆಗೆ ತರುವು ದಾದರೆ ಅತ್ಯಂತ ಕಡಿಮೆ ತೆರಿಗೆಗಳನ್ನು ಅವರು ಕೊಡಬೇಕಾಗಿ ಬಂದೀತು ಮತ್ತು ಬೇರಾವ ಪದ್ಧತಿಗಿಂತಲೂ ಅತಿ ಹೆಚ್ಚಿನ ಪ್ರಮಾಣದ ಸುಖಸಾಧನೆ ಆದೀತು ಎಂದು ತೋರಿಸಿಕೊಡಬಹುದು.

ಅಹಿಂಸೆಯ ಆಧಾರದ ಮೇಲೆ ನಿಂತ ಸ್ವರಾಜ್ಯದಲ್ಲಿ ಯಾರೂ ಯಾರ ಶತ್ರುವೂ ಅಲ್ಲ. ಎಲ್ಲರೂ ಏಕಮೇವ ಧ್ಯೇಯಪೂರ್ತಿಗಾಗಿ ತಮ್ಮ ತಮ್ಮ ಕಾಣಿಕೆ ನೀಡಿಯಾರು. ಎಲ್ಲರೂ ಓದುಬರೆಹ ಬಲ್ಲವರು, ಅವರ ಜ್ಞಾನ ದಿನದಿನಕ್ಕೂ ಬೆಳೆಯುತ್ತಿದ್ದೀತು. ಬೇನೆ-ರೋಗಗಳು ತೀರಾ ಕಡಿಮೆ ಆದಾವು. ಯಾರೂ ದಿವಾಳಿಯಲ್ಲ, ಶ್ರಮಿಕನಿಗೆ ಎಂದೂ ಉದ್ಯೋಗ ಸಿಕ್ಕೇ ಸಿಕ್ಕೀತು. ಅಂಥ ಸರಕಾರದಡಿಯಲ್ಲಿ ಜೂಜು, ಕುಡಿತ, ಅನೀತಿ ಅಥವಾ ವರ್ಗವಿದ್ವೇಷಕ್ಕೆ ಎಡೆ ಇರದು. ಧನಿಕರು ತಮ್ಮ ಸಂಪತ್ತನ್ನು ವಿವೇಕದಿಂದ ಪ್ರಯೋಜನಕರವಾದ ಬಗೆಯಲ್ಲಿ ಬಳಸಿಯಾರು, ಆಡಂಬರ ಅಥವಾ ಐಹಿಕ ಸುಖೋಪಭೋಗ ಹೆಚ್ಚಿಸಿಕೊಳ್ಳಲು ದುಂದುಮಾಡರು. ಹಿಡಿಯಷ್ಟು ಜನ ಧನಿಕರು ವಜ್ರಖಚಿತ ಅರಮನೆಗಳಲ್ಲೂ ಕೋಟಿ ಕೋಟಿ ಜನತೆ ಗಾಳಿ-ಬೆಳಕೂ ಕಾಣದ ಕೆಟ್ಟ ಗೂಡುಗಳಲ್ಲೂ ಇರುವಂತಾಗತಕ್ಕದ್ದಲ್ಲ. ಹಿಂದೂ-ಮುಸ್ಲಿಂ ಭೇದ, ಅಸ್ಪೃಶ್ಯತೆ, ಮೇಲು-ಕೀಳೆಂಬ ತಾರತಮ್ಯ ಇರತಕ್ಕದ್ದಲ್ಲ.೬೪

ನನ್ನ ಕಲ್ಪನೆಯ ಗ್ರಾಮಸ್ವರಾಜ್ಯವೆಂದರೆ ಅದೊಂದು ಪರಿಪೂರ್ಣ ಗಣರಾಜ್ಯ. ತನ್ನ ಪ್ರಧಾನ ಅಗತ್ಯಗಳಲ್ಲಿ ಅದು ನೆರೆಹೊರೆಯವರಿಂದ ಸ್ವತಂತ್ರ. ಆದರೂ ಅವಲಂಬನ ಅಗತ್ಯವಾದಲ್ಲಿ ಎಷ್ಟೋ ವಿಷಯಗಳಲ್ಲಿ ಪರಸ್ಪರಾವಲಂಬಿ. ಹೀಗೆ ತನ್ನ ಆಹಾರದ ಬೆಳೆ ಬೆಳೆಯುವುದು, ಬಟ್ಟೆಗಾಗಿ ಹತ್ತಿ ಬೆಳೆಯುವುದು ಪ್ರತಿ ಹಳ್ಳಿಯ ಮೊದಲ ಗಮನ, ದನಕರುಗಳಿಗಾಗಿ ಕಾವಲು, ಮಕ್ಕಳಿಗಾಗಿಯೂ ಪ್ರೌಢರಿಗಾಗಿಯೂ ಆಟಕ್ಕೆ, ಮನೋರಂಜನೆಗೆ ಸ್ಥಳ ಇರಬೇಕು. ಇದಕ್ಕೆಲ್ಲಾ ಆಗಿ ಹೆಚ್ಚು ಭೂಮಿ ಮಿಕ್ಕರೆ ಅದರಲ್ಲಿ ಗಾಂಜಾ, ತಂಬಾಕು, ಅಫೀಮುಗಳ ಹೊರತಾಗಿ ಉಪಯೋಗಕರ ಹಣದ

ಬೆಳೆಗಳನ್ನು ಬೆಳೆಯುಬಹುದು. ಹಳ್ಳಿಹಳ್ಳಿಯಲ್ಲೂ ನಾಟಕಮಂದಿರ, ಶಾಲೆ, ಸಭಾಭವನಗಳು ಇದ್ದಾವು. ಶುದ್ಧವಾದ ನೀರನ್ನು ಪೂರೈಸುವ ನೀರಿನ ಪೂರೈಕೆ ಕೇಂದ್ರ ಇದ್ದೀತು. ಹತೋಟಿಗೆ ಒಳಪಡಿಸಿದ ಬಾವಿಗಳು ಅಥವಾ ಕೆರೆಗಳ ಮೂಲಕ ಈ ಕೆಲಸ ಮಾಡಬಹುದು. ಮೂಲಶಿಕ್ಷಣದ ಅವಧಿಯು ಪೂರಾ ಶಿಕ್ಷಣ ಕಡ್ಡಾಯವಿದ್ದೀತು. ಸಾಧ್ಯವಿದ್ದಷ್ಟುಮಟ್ಟಿಗೂ ಪ್ರತಿಯೊಂದು ಕೆಲಸವನ್ನೂ ಸಹಕಾರ ತತ್ತ್ವದ ಆಧಾರದ ಮೇಲೆ ಕೈಗೊಳ್ಳಲಾದೀತು. ಘಟ್ಟಘಟ್ಟಗಳ ಅಸ್ಪೃಶ್ಯತೆಯುಳ್ಳ ಇಂದಿನಂಥ ಜಾತಿಗಳಿರವು. ಸತ್ಯಾಗ್ರಹ ಹಾಗೂ ಅಸಹಕಾರತಂತ್ರವುಳ್ಳ ಅಹಿಂಸೆಯೇ ಗ್ರಾಮಸಮಾಜದ ಆಧಾರಶಕ್ತಿ. ಹಳ್ಳಿಯಲ್ಲಿ ಇಡಲಾದ ಒಂದು ಖಾತೆಯಿಂದ ಸರದಿ ಪ್ರಕಾರ ಆರಿಸಲ್ಪಡುವ ಎಲ್ಲರಿಗೂ ಅನಿವಾರ್ಯವಾದ ಗ್ರಾಮರಕ್ಷಕ ಪಡೆ ಇದ್ದೀತು. ಯೋಗ್ಯ-ಕನಿಷ್ಠ ಅರ್ಹತೆಗಳುಳ್ಳ ಹಳ್ಳಿಯ ಎಲ್ಲ ಪ್ರೌಢ ಸ್ತ್ರೀಪುರುಷರೂ ವರ್ಷಕ್ಕೊಮ್ಮೆ ಚುನಾಯಿಸುವ ಐವರ ಪಂಚಾಯತಿ ಹಳ್ಳಿಯ ಆಡಳಿತವನ್ನು ನಡೆಸಿಕೊಂಡು ಹೋಗುವುದು. ಅದಕ್ಕೆ ಬೇಕಾದ ಅಧಿಕಾರ-ವ್ಯಾಪ್ತಿ ಎರಡೂ ಈ ಮಂಡಳಿಗೆ ಇರುವುವು. ಪ್ರಚಲಿತ ಅರ್ಥದ ಶಿಕ್ಷೆಯ ಪದ್ಧತಿ ಇರುವುದಿಲ್ಲವಾದುದರಿಂದ ಪಂಚಾಯತಿಯೇ ಶಾಸಕಾಂಗ, ನ್ಯಾಯಾಂಗ ಹಾಗೂ ಕಾರ್ಯಾಂಗವಾಗಿ ತನ್ನ ಒಂದು ವರ್ಷದ ಅಧಿಕಾರಾವಧಿಯಲ್ಲಿ ಕೆಲಸಮಾಡೀತು. ಹಳ್ಳಿಯಿಂದ ಕೇವಲ ಕಂದಾಯ ವಸೂಲಿಯೊಂದೇ ಪರಿಣಾಮಕಾರೀ ಸಂಬಂಧವಾಗಿ ಉಳ್ಳ ಇಂದಿನ ಸರಕಾರದ ಹೆಚ್ಚಿನ ಹಸ್ತಕ್ಷೇಪವೂ ಇಲ್ಲದಂತೆ ಯಾವ ಹಳ್ಳಿ ಬೇಕಾದರೂ ಇಂದೂ ಇಂಥ ಗಣರಾಜ್ಯವಾಗಬಹುದು. ಕೇಂದ್ರ ದೊಡನೆ, ಇತರ ನೆರೆಯ ಹಳ್ಳಿಗಳೊಡನೆ ಸಂಬಂಧದ ಪ್ರಶ್ನೆಯನ್ನು ನಾನು ಪರಿಶೀಲಿಸಿಲ್ಲ. ಗ್ರಾಮರಾಜ್ಯದ ರೂಪರೇಷೆ ಕೊಡುವುದೇ ನನ್ನ ಉದ್ದೇಶ್ಯ. ಇಲ್ಲಿ ವ್ಯಕ್ತಿಸ್ವಾತಂತ್ರ್ಯದ ಆಧಾರದ ಮೇಲೆ ಪರಿಪೂರ್ಣ ಜನತಂತ್ರವಿದೆ. ವ್ಯಕ್ತಿಯೇ ತನ್ನ ಪ್ರಭುತ್ವದ ಶಿಲ್ಪಿ. ಅವನಿಗೂ ಅವನ ಸರಕಾರಕ್ಕೂ ಅಹಿಂಸೆಯ ನಿಯಮವೇ ಕಟ್ಟಳೆ. ಅವನೂ ಅವನ ಹಳ್ಳಿಯೂ ಇಡೀ ಲೋಕದ ಶಕ್ತಿಯನ್ನೇ ಬೇಕಾದರೂ ಎದುರಿಸಬಲ್ಲರು. ತನ್ನ, ತನ್ನೂರಿನ ಗೌರವ ರಕ್ಷಿಸಲು ತಾನೇ ಸಾವನ್ನು ಅಪ್ಪಿಯಾನು ಎಂಬುದೇ ಪ್ರತಿಯೊಬ್ಬ ಹಳ್ಳಿಗನ ಮೂಲ ನೇಮ.

ಇಲ್ಲಿ ಚಿತ್ರಿಸಿರುವ ಚಿತ್ರದಲ್ಲಿ ಸ್ವಾಭಾವಿಕವಾಗಿ ಅಶಕ್ಯವಾದುದೇನೂ ಇಲ್ಲ. ಅಂಥ ಹಳ್ಳಿಯನ್ನು ರೂಪಿಸುವುದು ಒಂದು ಜೀವಮಾನದ ಕೆಲಸವೇ ಆಗಬಹುದು. ನಿಜವಾದ ಜನತಂತ್ರಾಭಿಮಾನಿ, ಗ್ರಾಮಜೀವನದ ಪ್ರೇಮಿ ಒಂದು ಹಳ್ಳಿ ತೆಗೆದುಕೊಂಡು, ಅದೇ ತನ್ನ ಲೋಕ—ಕಾರ್ಯಸರ್ವಸ್ವ ಎಂದು ತಿಳಿದರೆ ಒಳ್ಳೆಯ ಫಲ ಸಿಕ್ಕೀತು. ಹಳ್ಳಿಯ ಭಂಗಿಯಾಗಿ, ನೂಲುವವ, ಕಾವಲುಗಾರ, ವೈದ್ಯ, ಮಾಸ್ತರ—ಎಲ್ಲವೂ ಆಗಿ ಆರಂಭ ಮಾಡಬಹುದು. ಅವನ ಹತ್ತಿರ ಯಾರೂ ಸುಳಿಯದೇ ಹೋದರೂ ಕಸ ಉಡುಗಿ, ನೂಲೆಳೆದು ತೃಪ್ತನಾದಾನು ಆತ.೬೫

ತಾವು ತಯಾರಿಸಿದ ವಸ್ತುಗಳಿಗೆ ಕೂಡಲೇ ಮಾರುಕಟ್ಟೆ ಸಿಗುವಂಥ ಉನ್ನತಮಟ್ಟದ ಕೌಶಲವನ್ನು ಹಳ್ಳಿಗರು ಬೆಳೆಸಿಕೊಳ್ಳಬೇಕು. ನಮ್ಮ ಹಳ್ಳಿಗಳು ಪೂರಾ ವಿಕಾಸಗೊಂಡಾಗ ಉನ್ನತಮಟ್ಟದ ಕೌಶಲ, ಕಲಾಪ್ರತಿಭೆ ಉಳ್ಳ ಜನರ ಅಭಾವವಿರದು. ಗ್ರಾಮಕವಿಗಳು, ಗ್ರಾಮಕಲಾವಿದರು, ಗ್ರಾಮ ಶಿಲ್ಪಿಗಳು, ಬಹುಭಾಷಾಪ್ರವೀಣರು, ಸಂಶೋಧಕರು ಇದ್ದಾರು. ಹಳ್ಳಿಗಳಲ್ಲಿ ಜೀವನದಲ್ಲಿ ಇರಬೇಕಾದಂಥದು ಯಾವುದೂ ಇಲ್ಲ ಎಂದಾಗದು. ಇಂದು ಗ್ರಾಮಗಳು ಗೊಬ್ಬರದ ಗುಂಡಿಗಳು. ನಾಳೆ ಅವು ಸಣ್ಣ ಸಣ್ಣ ಉದ್ಯಾನ ಗಳಾಗುತ್ತವೆ. ಅಲ್ಲಿನ ಜನ ತುಂಬ ಬುದ್ಧಿವಂತರು, ಯಾರೂ ಅವರನ್ನು ವಂಚಿಸುವಂತಿಲ್ಲ, ಶೋಷಿಸುವಂತಿಲ್ಲ.

ಈ ಬಗೆಯ ಗ್ರಾಮಪುನರ್ನಿರ್ಮಾಣ ಇಲ್ಲೇ ಈಗಲೇ ಪ್ರಾರಂಭವಾಗ ಬೇಕು. ಗ್ರಾಮಪುನರ್ನಿರ್ಮಾಣದ ಕೆಲಸ ತಾತ್ಕಾಲಿಕವಾಗಿ ಆಗತಕ್ಕದ್ದಲ್ಲ, ಶಾಶ್ವತ ರೀತಿಯಲ್ಲಿ ಆಗಬೇಕು.

ಕೆಲಸ, ಕಲೆ, ಸ್ವಾಸ್ಥ್ಯ ಮತ್ತು ಶಿಕ್ಷಣ—ಇವು ನಾಲ್ಕೂ ಒಂದೇ ಯೋಜನೆಯಲ್ಲಿ ಅಡಕವಾಗಬೇಕು. ನಯೀ ತಾಲೀಂ—ಹೊಸ ಶಿಕ್ಷಣ ಇವು ನಾಲ್ಕರ ಸುಂದರ ಸಮ್ಮಿಲನ, ಗರ್ಭದಿಂದ ಗೋರಿಯವರೆಗೆ ವ್ಯಕ್ತಿಯ ಇಡೀ ಶಿಕ್ಷಣವನ್ನು ಆವರಿಸಿದೆ. ಮೊದಲಿನಿಂದಲೂ ಅಂತಲೇ ಗ್ರಾಮಾಭ್ಯುದಯದ ಕೆಲಸವನ್ನು ನಾನು ಬೇರೆ ಬೇರೆ ಭಾಗಗಳಾಗಿ ವಿಭಜಿಸುವುದಿಲ್ಲ. ಈ ನಾಲ್ಕೂ ಅಂಶಗಳನ್ನೊಳಗೊಳ್ಳುವ ಕಾರ್ಯ ಕೈಗೊಳ್ಳಬೇಕು ಎನ್ನುತ್ತೇನೆ. ಕೈಗಾರಿಕೆ–

ಉದ್ಯೋಗಗಳನ್ನು ಶಿಕ್ಷಣದಿಂದ ಭಿನ್ನವೆಂದು ತಿಳಿಯದೆ ಕೈಗಾರಿಕೆಯೇ ಶಿಕ್ಷಣದ ಮಾಧ್ಯಮವೆಂದು ನಾ ಭಾವಿಸುತ್ತೇನೆ. ಆದುದರಿಂದ ನಯೀ ತಾಲೀಂ— ಹೊಸ ಶಿಕ್ಷಣವನ್ನು ಯೋಜನೆಯಲ್ಲಿ ಅಳವಡಿಸಬೇಕು.೬೬

## ಗ್ರಾಮಸ್ವಚ್ಛತೆ

ಹಳ್ಳಿಯಲ್ಲಿ ಗಮನ ಕೊಡಬೇಕಾದುದು ಕೆರೆಗಳು ಬಾವಿಗಳ ಶುದ್ಧೀಕರಣ ಹಾಗೂ ಅವುಗಳನ್ನು ಶುದ್ಧವಾಗಿ ಇಟ್ಟಿರುವುದರ ಕಡೆಗೆ, ಕಸದ ರಾಶಿಗಳನ್ನು ತೆಗೆದುಹಾಕುವುದರ ಕಡೆ ಕಾರ್ಯಕರ್ತರು ತಾವೇ ಕೂಲಿ ಪಡೆವ ಭಂಗಿಗಳಂತೆ ಭಾವಿಸಿಕೊಂಡು ದಿನದಿನವೂ ಕೆಲಸಕ್ಕೆ ತೊಡಗಬೇಕು. ಕಡೆಗೆ ತಾವೇ ಮಾಡಿಕೊಂಡು ಹೋಗುವಂತೆ ಆಗಲು ಹಳ್ಳಿಗರೂ ಸಹಕರಿಸಬೇಕೆಂಬ ಭಾವನೆ ಅವರಲ್ಲಿ ಉಂಟುಮಾಡಬೇಕು. ಶೀಘ್ರವಾಗಿಯೋ ತಡವಾಗಿಯೋ ಹಳ್ಳಿಗರು ಸಹಕರಿಸಿಯೇ ತೀರುವರೆಂದು ತಿಳಿಯಿರಿ.

ಓಣಿಗಳಲ್ಲೂ ಬೀದಿಗಳಲ್ಲೂ ಇರುವ ಕಸ ಗುಡಿಸಬೇಕು, ಕಸದ ವಿಂಗಡಣೆ ಮಾಡಬೇಕು. ಗೊಬ್ಬರವಾಗುವಂಥ ಕಸ ಇರುತ್ತದೆ, ಹೂತು ಬಿಡಬೇಕಾದ ಕಸ ಉಂಟು, ಕೂಡಲೇ ಸಂಪತ್ತಾಗಿ ಪರಿವರ್ತನೆಯಾಗಬಲ್ಲ ಕಸವೂ ಉಂಟು. ಕೈಗೆ ಸಿಕ್ಕುವ ಪ್ರತಿಯೊಂದು ಎಲುಬಿನ ತುಣುಕಿನಿಂದಲೂ ಏನಾದರೊಂದು ಪದಾರ್ಥ ಮಾಡಲು ಕಚ್ಚಾ ಸಾಮಾನು ಅಥವಾ ಪುಡಿ ಮಾಡಿದರೆ ಉತ್ತಮ ಗೊಬ್ಬರ. ಚಿಂದಿ ಬಟ್ಟೆ, ಹರಕು ಕಾಗದಗಳಿಂದ ಕಾಗದ ತಯಾರಿಸಬಹುದು. ಗುಡಿಸಿದ ಮಲ ಹಳ್ಳಿಯ ಹೊಲಕ್ಕೆ ಬಂಗಾರದಂಥ ಗೊಬ್ಬರ. ಒಂದು ಅಡಿಗೂ ಆಳವಿಲ್ಲದ ಗುಂಡಿ ತೋಡಿ, ಮಲಮೂತ್ರ ಅಲ್ಲಿ ಹಾಕಿ; ಮೇಲೆ ಮಣ್ಣು ಹಾಕಿ ಮುಚ್ಚಿ—ಇದು ಕ್ರಮ. ಡಾ|| ಪೂರ್ ಹಳ್ಳಿಯ ಆರೋಗ್ಯ ಕುರಿತು ಬರೆದಿರುವ ತಮ್ಮ ಗ್ರಂಥದಲ್ಲಿ ಮಲವನ್ನು ಒಂಬತ್ತರಿಂದ ಹನ್ನೆರಡು ಅಂಗುಲದ ಗುಂಡಿಗಳಲ್ಲಿ ಮುಚ್ಚಬೇಕೆಂದು ಬರೆದಿದಾರೆ. (ನೆನಪಿನಿಂದ ಬರೆಯುತ್ತಿದೇನೆ). ಹುಡಿಮಣ್ಣಿನಲ್ಲಿ ಸಣ್ಣ ಜೀವರಾಶಿ ಉಂಟು, ಅದು ಗಾಳಿ–ಬೆಳಕಿನ ಸಂಯೋಗದಿಂದ ಒಂದು ವಾರದ ಒಳಗಾಗಿ ಸುವಾಸನೆಯುಳ್ಳ ಮೆದುಮಣ್ಣಾಗಿ ಮಾರ್ಪಡುತ್ತದೆ ಎನ್ನುತ್ತಾರೆ ಲೇಖಕರು. ಯಾವನೇ ಹಳ್ಳಿಗ

ಇದನ್ನು ತಾನೇ ಪರೀಕ್ಷಿಸಬಹುದು. ಮಡಿಕೆ ಅಥವಾ ಕಬ್ಬಿಣದ ಬಕೆಟ್ಟು ಗಳನ್ನಿಟ್ಟಿರುವ ಶೌಚಕೂಪಗಳನ್ನಾದರೂ ನಿರ್ಮಿಸಬಹುದು. ಅಥವಾ ಮಲ ಮೂತ್ರಗಳನ್ನು ಒಯ್ದು ಅಂಥ ಸ್ಥಳಗಳಲ್ಲಿ ದಿನವೂ ಸುರಿದು ಮಣ್ಣು ಮುಚ್ಚ ಬಹುದು. ಅಥವಾ ಆ ಸ್ಥಳಗಳಲ್ಲೇ ಶೌಚಕ್ರಿಯೆ ಪೂರೈಸಿಕೊಳ್ಳಬಹುದು. ಮಲಮೂತ್ರಗಳನ್ನು ಹಳ್ಳಿಗೆ ಸೇರಿದ ಭೂಮಿಯಲ್ಲೋ ಅಥವಾ ಅವರವರ ಹೊಲಗಳಲ್ಲೋ ಹೀಗೆ ಹೂಳಬಹುದು ಹಳ್ಳಿಗರ ಸಹಕಾರದಿಂದ ಈ ಕೆಲಸ ಆದೀತು. ತೀರಾ ಕೇಡಾದರೆ ಉತ್ಸಾಹೀ ಹಳ್ಳಿಗ ಮಲಮೂತ್ರ ಸಂಗ್ರಹಿಸಿ ತಾನೇ ಗೊಬ್ಬರ ಮಾಡಿಕೊಳ್ಳಬಹುದು. ದಿನವೊಂದಕ್ಕೆ ಆರು ಲಕ್ಷ ರೂಪಾಯಿ ಬೆಲೆಬಾಳುವಷ್ಟು ಉತ್ತಮ ಗೊಬ್ಬರ ಹಾಳಾಗುತ್ತಿದೆ. ಗಾಳಿ ಕೆಡಿಸುತ್ತದೆ, ಬದಲಾಗಿ ರೋಗ ಬರಿಸುತ್ತದೆ.

ಹಳ್ಳಿಗಳಲ್ಲಿ ಕೆರೆಗಳನ್ನು ಸ್ನಾನಕ್ಕೆ, ಬಟ್ಟೆ ಒಗೆಯಲು, ಕುಡಿಯಲು, ಅಡಿಗೆಗೆ ಎಲ್ಲಕ್ಕೂ ವಿವೇಚನೆಯಿಲ್ಲದೆ ಬಳಸುತ್ತಾರೆ. ಎಷ್ಟೋ ಹಳ್ಳಿಯ ಕೆರೆ ಗಳನ್ನು ದನಕರುಗಳೂ ಬಳಸುತ್ತವೆ. ಎಮ್ಮೆಗಳು ಅವುಗಳಲ್ಲಿ ಖುಷಿಯಾಗಿ ಬಿದ್ದಿರುವುದನ್ನು ಕಾಣಬಹುದು. ಹಳ್ಳಿಗಾಡಿನಲ್ಲಿ ಕೆರೆಗಳನ್ನು ಇಷ್ಟು ಪಾಪಕರ ವಾಗಿ ದುರುಪಯೋಗ ಪಡಿಸುತ್ತಿದ್ದರೂ ಸಾಂಕ್ರಾಮಿಕ ರೋಗಗಳು ಹಳ್ಳಿ ಗಳನ್ನು ಇನ್ನೂ ನಾಶಗೊಳಿಸಿಲ್ಲ, ಆಶ್ಚರ್ಯವೇ! ಹಳ್ಳಿಗರು ಅನುಭವಿಸುತ್ತಿರುವ ಅನೇಕ ರೋಗರುಜಿನಗಳಿಗೆ ಶುದ್ಧ ನೀರಿನ ಪೂರೈಕೆಯ ಅಲಕ್ಷ್ಯವೇ ಕಾರಣ ಎಂದು ಎಲ್ಲ ವೈದ್ಯರ ಸಾಕ್ಷ್ಯ.

ಇದು ಅದ್ಭುತವಾಗಿ ಆಸಕ್ತಿಕರ ಹಾಗೂ ಶಿಕ್ಷಣಪ್ರದ ಸೇವೆಯೆಂಬುದನ್ನು ಎಲ್ಲರೂ ಒಪ್ಪಿಯಾರು. ಭಾರತದ ನೊಂದ ಮಾನವವರ್ಗಕ್ಕೆ ಅಮೂಲ್ಯ ಲಾಭವೂ ಉಂಟು ಇದರಿಂದ. ಸಮಸ್ಯೆಯನ್ನು ಪರಿಹರಿಸಲು ನಾನು ವಿವರಿ ಸಿರುವ ವಿಧಾನದಂತೆ ಲೇಖಣಿಯನ್ನು ಹಿಡಿಯುವಷ್ಟೇ ಹೆಮ್ಮೆಯಿಂದ ಕಸಬರಿಗೆ ಯನ್ನೂ ಪಿಕಾಶಿಯನ್ನೂ ಹಿಡಿದು ದುಡಿಯುವ ಸ್ವಯಂಸೇವಕರು ಸಿಕ್ಕಿದರೆ ವೆಚ್ಚದ ಪ್ರಶ್ನೆಯಂತೂ ಏಳುವುದೇ ಇಲ್ಲ. ಬೇಕಾದುದು ಇಷ್ಟೇ: ಕಸಬರಿಗೆ, ಬುಟ್ಟಿ, ಗುದ್ದಲಿ, ಪಿಕಾಶಿ, ಬಹುಶಃ ಯಾವುದಾದರೂ ಕ್ರಿಮಿನಾಶಕ ಪುಡಿ. ಒಣ ಬೂದಿಯೂ ಪ್ರಾಯಶಃ ರಾಸಾಯನಿಕ ಕ್ರಿಮಿನಾಶಕದಷ್ಟೇ ಪರಿಣಾಮಕಾರಿ.೬೨

ನನ್ನ ಅಭಿಪ್ರಾಯದಲ್ಲಿ ಡಾ॥ ಪೂರ್ ಹೇಳುವಂತೆ ಮೇಲು ಮೇಲೆ ಮಲವನ್ನು ಹೂಳುವುದೇ ಹೆಚ್ಚು ಶಾಸ್ತ್ರೀಯ, ಹೆಚ್ಚು ಲಾಭಕರ. ಆಗೆತದ ಖರ್ಚು ಕಡಿಮೆ, ಸಾಗಿಸುವುದಂತೂ ಬೇಕಿಲ್ಲ ಅಥವಾ ಕಡಿಮೆ. ಜತೆಗೆ ಒಂದು ವಾರದಲ್ಲೇ ಮಲ ಉತ್ತಮ ಗೊಬ್ಬರವಾಗುತ್ತದೆ. ಏಕೆಂದರೆ ಭೂಮಿಯ ಮೇಲ್ಮೈಯಿಂದ ಆರರಿಂದ ಒಂಬತ್ತು ಅಂಗುಲ ಕೆಳಗೆ ಇರುವ ಜೀವಾಣುಗಳು, ಗಾಳಿ, ಸೂರ್ಯನ ಬೆಳಕು ಕೂಡಿ ಆಳವಾಗಿ ಹೂತದ್ದರಕಿಂತ ಬೇಗನೆ ಗೊಬ್ಬರ ವಾಗಿ ಪರಿವರ್ತಿಸುತ್ತವೆ.

ಕಸವನ್ನು ವಿಲೇವಾರಿ ಮಾಡುವ ಬೇರೆ ಬೇರೆ ಕ್ರಮಗಳು ಮುಖ್ಯವಲ್ಲ. ಹಳ್ಳಿಗರ ಆರೋಗ್ಯಲಾಭ, ಆರ್ಥಿಕಲಾಭಗಳೆರಡಕ್ಕಾಗಿ ಅವನ್ನು ಹೂಳ ಬೇಕಾದ ಅಗತ್ಯ ಮುಖ್ಯ. ಅದರಿಂದಾದ ಗೊಬ್ಬರದಿಂದ ಹೆಚ್ಚಿನ ಬೆಳೆ ಬರಲೇ ಬೇಕಲ್ಲವೇ? ಮಲಮೂತ್ರವಲ್ಲದ ಬೇರೆ ಜೀವಸಂಬಂಧ ಕಸವನ್ನು ಪ್ರತ್ಯೇಕ ವಾಗಿ ಹೂಳಬೇಕು. ಆರೋಗ್ಯದ ಕಡೆ ಗಮನ ಗ್ರಾಮಪುನರ್ನಿರ್ಮಾಣದಲ್ಲಿ ನಿಸ್ಸಂಶಯವಾಗಿ ಮೊದಲ ಹೆಜ್ಜೆ.೬೮

ತಮ್ಮ 'ವೆಲ್ತ್ ಎಂಡ್ ವೇಸ್ಟ್' (ಸಂಪತ್ತು ಹಾಗೂ ಕಸ) ಎಂಬ ಪುಸ್ತಕ ದಲ್ಲಿ ಜಿ. ಐ. ಫೌಲರ್ ಮನುಷ್ಯರ ಮಲವನ್ನು ಸರಿಯಾದ ಕ್ರಮದಲ್ಲಿ ವಿಲೇವಾರಿ ಮಾಡಿದರೆ ಒಬ್ಬೊಬ್ಬನಿಗೂ ವರ್ಷಕ್ಕೆ ೨ ರೂಪಾಯಿ ಬಂದೀತೆಂದು ಹೇಳುತ್ತಾರೆ. ಬಹಳ ಮಟ್ಟಿಗೆ ಈ ಸಂಪತ್ಪೂರಿತ ಗೊಬ್ಬರವನ್ನು ಹಾಳುಮಾಡು ತ್ತಾರೆ, ರೋಗ ತಂದುಕೊಳ್ಳುತ್ತಾರೆ. ಪ್ರೊ. ಬ್ರುಲ್ಲಿನಿ ಬರೆದಿರುವ 'ರದ್ದಿ ಪದಾರ್ಥಗಳ ಉಪಯೋಗ' ಎಂಬ ಗ್ರಂಥದಿಂದ ಅವರು ಎತ್ತಿ ಹೇಳುತ್ತಾರೆ: "ದೆಹಲಿಯ ೨,೮೨,೦೦೦ ನಗರವಾಸಿಗಳಿಂದ ಉತ್ಪತ್ತಿಯಾಗುವ ಸಾರಜನಕ ಅತಿ ಕಡಿಮೆಯೆಂದರೆ ೧೦ ಸಾವಿರ ಎಕರೆಗೆ, ಅತಿ ಹೆಚ್ಚೆಂದರೆ ೬೫ ಸಾವಿರ ಎಕರೆಗೆ ಸಾಕಾಗುವಷ್ಟು ಗೊಬ್ಬರ ಒದಗಿಸುತ್ತದೆ'—ಎಂದು. ನಮ್ಮ ಭಂಗಿ ಗಳನ್ನು ನೋಡಿಕೊಳ್ಳುವ ಬಗೆ ನಮಗೆ ತಿಳಿಯದುದರಿಂದ ಪುರಾತನಪ್ರಸಿದ್ಧಿಯ ದೆಹಲಿ ನಾವು ನಾಚಿಕೆಪಡಬೇಕಾದಂಥ ಹೊಲಸು ಪ್ರದೇಶಗಳಿಂದ ಕಲಂಕಿತ ವಾಗಿವೆ. ನಾವೆಲ್ಲರೂ ಭಂಗಿಗಳೇ ಆಗುವುದಾದರೆ ನಮ್ಮನ್ನು ನಾವು ಕಂಡು ಕೊಳ್ಳುವ ಬಗೆಯನ್ನೂ ಕಲಿತೇವು, ಇಂದು ವಿಷವಾಗಿರುವುದನ್ನು ಸಸ್ಯರಾಶಿಗೆ ಪುಷ್ಟಿಕರ ಅನ್ನವಾಗುವ ಬಗೆಯನ್ನೂ ತಿಳಿದೇವು. ಡಾ॥ ಫೌಲರ್‌ರಂತೆ

ಭಾರತದ ೩೦ ಕೋಟಿ ಜನರೆಂದರೆ ದೇಶಕ್ಕೆ ೬೦ ಕೋಟಿ ರೂಪಾಯಿ ವಾರ್ಷಿಕ ಲಾಭ, ಮನುಷ್ಯಮಲವನ್ನು ವಿವೇಕದಿಂದ ಉಪಯೋಗಿಸಿಕೊಂಡುದಾದರೆ.೬೯

ಈ ತಿಂಗಳಲ್ಲಿ ದೆಹಲಿಯಲ್ಲಿ ಅಖಿಲ ಭಾರತ ಕಾಂಪೋಸ್ಟ್ ಸಮ್ಮೇಳನವೊಂದು ನವದೆಹಲಿಯಲ್ಲಿ ನಡೆದು, ಆದಷ್ಟು ವ್ಯಾಪಕ ಪ್ರಮಾಣದಲ್ಲಿ ಕಾಂಪೋಸ್ಟ್ ಬೆಳವಣಿಗೆಯ ಪ್ರಶ್ನೆಯನ್ನು ಪರಿಶೀಲಿಸಿತು. ಹಳ್ಳಿಗಳ, ಪಟ್ಟಣಗಳ ಯೋಜನೆ ಬಗೆಗೆ ಹಲವಾರು ಮುಖ್ಯ ಗೊತ್ತುವಳಿಗಳು ಸ್ವೀಕೃತವಾದುವು. ಈ ಗೊತ್ತುವಳಿಗಳು ಕೇವಲ ಕಾಗದದ ಮೇಲಷ್ಟೇ ಉಳಿಯದಿದ್ದಲ್ಲಿ ಒಳ್ಳೆಯವೇ. ಭಾರತದಾದ್ಯಂತ ಇವು ಅನ್ವಯಗೊಳಿಸಲ್ಪಡುವುವೇ ಎಂಬುದೇ ಮುಖ್ಯ. ಭಾರತದ ಜನಕೋಟಿಯ ಇಚ್ಛಾಪೂರ್ವಕ ಸಹಕಾರ ಸಿಕ್ಕರೆ ಈ ದೇಶ ಆಹಾರಾಭಾವವನ್ನು ಹೊಡೆದೋಡಿಸುವುದಷ್ಟೇ ಅಲ್ಲ ಭಾರತಕ್ಕೆ ಬೇಕಾದುದಕ್ಕಿಂತ ಹೆಚ್ಚಾದುದನ್ನೂ ಉತ್ಪತ್ತಿ ಮಾಡಿಕೊಡಬಹುದು. ಈ ಜೀವಜನ್ಯ ಗೊಬ್ಬರ ಯಾವಾಗಲೂ ಮಣ್ಣನ್ನು ಫಲವತ್ತಾಗಿಸುತ್ತದೆ, ಎಂದೂ ಕ್ಷೀಣಿಸದು. ದಿನದಿನದ ಕಸವನ್ನು ಯುಕ್ತವಾಗಿ ಹೂತಿಟ್ಟರೆ ಭೂಮಿಗೆ ಬಂಗಾರದಂಥ ಗೊಬ್ಬರ ಕೊಡುತ್ತದೆ_ಎಷ್ಟೋ ಲಕ್ಷ ರೂಪಾಯಿಗಳನ್ನು ಉಳಿಸುತ್ತದೆ, ಆಹಾರ ಧಾನ್ಯಗಳ ಉತ್ಪಾದನೆಯನ್ನು ಎಷ್ಟೋ ಪಟ್ಟು ಹೆಚ್ಚಿಸುತ್ತದೆ. ಜತೆಗೆ ಕಸದ ಯೋಗ್ಯ ಉಪಯೋಗ ಸುತ್ತಮುತ್ತಲ ಸ್ಥಳವನ್ನು ಚೊಕ್ಕಟಗೊಳಿಸುತ್ತದೆ. ಚೊಕ್ಕಟತನ ದೇವತ್ವಕ್ಕೆ ನೆರೆಯಷ್ಟೇ ಅಲ್ಲ, ಆರೋಗ್ಯವರ್ಧಕವೂ ಸಹ.

### ಅಧ್ಯಾಯ – ೬

# ಭೂ ಹಿಡುವಳಿ–ರೈತ–ಜಮೀನುದಾರ

## " ಎಲ್ಲ ಭೂಮಿಯೂ ಗೋಪಾಲನದು "

ನಮ್ಮ ಪೂರ್ವಜರು ನಿಜವಾದ ಸಮಾಜವಾದವನ್ನು ವಹಿಸಿಕೊಟ್ಟಿದಾರೆ. ಅವರು ಕಲಿಸಿದರು : " ಭೂಮಿಯೆಲ್ಲ ಗೋಪಾಲನದು. ಅಂದಬಳಿಕ ಗಡಿ ರೇಷೆಯೆಲ್ಲಿ ? ಆ ಗೆರೆ ಎಳೆದವ ಮನುಷ್ಯನಲ್ಲವೇ ? ಆದಕಾರಣ ಅವನು ಅದನ್ನು ಅಳಿಸಲೂ ಬಹುದು." ಗೋಪಾಲ ಎಂದರೆ ಅಕ್ಷರಶಃ ಕುರುಬ— ದನಗಾಹಿ. ಹಾಗೆಂದರೆ ದೇವರೂ ಹೌದು. ಆಧುನಿಕ ಪರಿಭಾಷೆಯಲ್ಲಿ ರಾಜ್ಯ. ಅರ್ಥಾತ್ ಜನತೆ. ಇಂದು ಭೂಮಿ ಜನತೆಗೆ ಸೇರಿಲ್ಲವೆಂಬುದು ತೀರಾ ಸತ್ಯ. ಆದರೆ ಈ ಉಪದೇಶದ ತಪ್ಪೇನೂ ಅಲ್ಲ ಅದು. ಅದರಂತೆ ಬದುಕದ ನಮ್ಮದೇ ತಪ್ಪು.

ಯಾವುದೇ ರಾಷ್ಟ್ರಕ್ಕೆ — ರಷ್ಯವನ್ನೂ ಬಿಡದೆ — ಸಾಧ್ಯವಿರುವಂಥ ರೀತಿಯಲ್ಲಿ ನಾವೂ ಈ ಪ್ರಶ್ನೆಯನ್ನು ಸರಿಯಾಗಿ ಎದುರಿಸಬಹುದು, ಅದೂ ಹಿಂಸೆಯಿಲ್ಲದೆ.೭೦

## ವಿಶೇಷಾಧಿಕಾರಗಳು – ಸರ್ವಮಾನ್ಯಗಳು

ಯೂರೋಪಿಯನರು ಅನುಭವಿಸುತ್ತಿರುವ ವಿಷೇಷಾಧಿಕಾರಗಳು, ಸರ್ವ ಮಾನ್ಯಗಳನ್ನು ಚೆನ್ನಾಗಿ ಅಭ್ಯಸಿಸಿರುವವರು ನಮ್ಮಲ್ಲಿ ಹಲವರು ಇಲ್ಲಿದೇವೆ— ಬರಿಯ ಯೂರೋಪಿಯನರಷ್ಟೇ ಅಲ್ಲ, ಅಂಥವರಲ್ಲಿ ನನ್ನ ಮನಸ್ಸಿನಲ್ಲಿ ಅನೇಕ ಭಾರತೀಯರೂ ಇದಾರೆ— ಉಚಿತ ಕೊಡುಗೆಯಾಗಿ ಭೂಮಿ ಪಡೆದುಕೊಂಡಿರು ವವರು, ರಾಷ್ಟ್ರಕ್ಕೆ ಸಲ್ಲಿಸಿದ ಯಾವುದೇ ಸೇವೆಗೆ ಪ್ರತಿಯಾಗಿಯಲ್ಲ, ಸರಕಾರಕ್ಕೆ ಸಲ್ಲಿಸಿದ ಸೇವೆಗಾಗಿ ಎಂದೂ ಹೇಳಲು ಬಾರದು, ಏಕೆಂದರೆ ಅವರಿಂದ ಸರಕಾ ರಕ್ಕೇನೂ ಲಾಭವಾಗಿಲ್ಲ, ಯಾವನೋ ಒಬ್ಬ ಅಧಿಕಾರಿಗೆ ಸಂದ ಸೇವೆಗಾಗಿ

ಅವರಿಗೆ ಆ ಭೂಮಿ ಸಿಕ್ಕಿದೆ. ಈ ರಿಯಾಯಿತಿಗಳನ್ನೂ ವಿಶೇಷ ಅಧಿಕಾರಗಳನ್ನೂ ಪ್ರಭುತ್ವ ವಿಮರ್ಶಿಸಬಾರದೆಂದು ಹೇಳುವುದಾದರೆ ದರಿದ್ರರು ಹಾಗೂ ಹತಾಧಿಕಾರರ ಪರವಾಗಿ ಆಡಳಿತಯಂತ್ರವನ್ನು ನಡೆಸುವುದೇ ಅಶಕ್ಯವಾದೀತು. ಅಂದಿನ ಅಧಿಕಾರಿಗಳು ಕೆಲವರಿಗೆ ಮಾಡಿದ ಸೇವೆಗಾಗಿ ಹಲವಾರು ಮೈಲಿಯುದ್ದ ಭೂಮಿಯನ್ನು ಪಡೆದಿರುವಾಗ ಸರಕಾರ ನನ್ನ ಕೈಲಿದ್ದರೆ ಅವರಿಂದ ಶೀಘ್ರವೇ ಆ ಭೂಮಿ ಕಸಿದುಕೊಳ್ಳುವೆ. ಭಾರತೀಯರು ಎಂಬ ಕಾರಣದಿಂದ ಅವರನ್ನು ಪರಿಶೀಲಿಸೆ. ಅವರು ಎಂಥ ಮೆಚ್ಚುವಂಥವರೇ ಇರಲಿ, ಎಷ್ಟೇ ಸ್ನೇಹಪರರಾಗಿರಲಿ ಸರ್ ಹ್ಯೂಬರ್ಟ್ ಕಾರ್ ಅಥವಾ ಬೆಂಥಾಲರನ್ನು ಹೇಗೋ ಇವರನ್ನೂ ಕೂಡಲೇ ಆಸ್ತಿರಹಿತಗೊಳಿಸಿಯೇನು. ಶಾಸನಕ್ಕೆ ವ್ಯಕ್ತಿಗೌರವವೆಂಬುದು ಎಷ್ಟೂ ಇಲ್ಲವಲ್ಲ.[೭೧]

**ಪ್ರೊಫೆಸರ್ ರಂಗಾ**—ಭೂಮಿ ನ್ಯಾಯವಾಗಿ ರೈತನಿಗೆ ಸೇರಿದುದು ಅಥವಾ ಸೇರಬೇಕಾದುದು ಎನ್ನುತ್ತೀರಿ. ತಾನು ಸಾಗುವಳಿ ಮಾಡುವ ಭೂಮಿಯ ನಿಯಂತ್ರಣ ಅವನಿಗೆ ಸಿಗಬೇಕೆಂದಷ್ಟೇ ಇದರ ಅರ್ಥವೋ? ಅಥವಾ ತಾನು ಬದುಕಬೇಕಾಗಿರುವ ಸಮಾಜದಲ್ಲಿ, ಪ್ರಭುತ್ವದ ಮೇಲೆ ಪರಿಣಾಮಕಾರಿಯಾದ ವಾಣಿ ಅಥವಾ ಅಧಿಕಾರ ಅವನದಾಗಬೇಕೆನ್ನುವಿರೋ? ರೈತರಿಗೆ ಬರಿಯ ಭೂಮಿ ಕೊಟ್ಟು ಪರಿಣಾಮಕಾರಿಯಾದ ರಾಜಕೀಯ ಅಧಿಕಾರ ಕೊಡದಿದ್ದರೆ ಸೋವಿಯಟ್ ರಷ್ಯದಲ್ಲಿನಷ್ಟೇ ನಮ್ಮವರ ಸ್ಥಿತಿಯೂ ಕೆಟ್ಟದಾದೀತು. ರಷ್ಯದಲ್ಲಿ ಶ್ರಮಜೀವಿವರ್ಗದ ಸರ್ವಾಧಿಕಾರೀ ರಾಜ್ಯದ ಕೈಲಿ ಅಧಿಕಾರವೆಲ್ಲ ಇದೆ. ಮೊದಲಲ್ಲಿ ರೈತರಿಗೆ ಸಣ್ಣ ಹಿಡುವಳಿಗಳ ಹತೋಟಿ ಕೊಟ್ಟರು. ಆಮೇಲೆ ಸಾಮೂಹಿಕ ಬೇಸಾಯದ ಹೆಸರಿನಲ್ಲಿ ಇವನ್ನೆಲ್ಲ ಕಸಿದುಕೊಂಡರು.

**ಗಾಂಧೀಜೀ**—ರಷ್ಯದಲ್ಲಿ ಏನಾಗಿದೆಯೋ ನನಗೆ ತಿಳಿಯದು. ನಮ್ಮಲ್ಲಿ ಜನತಂತ್ರಾತ್ಮಕ ಸ್ವರಾಜ್ಯ ಇರುವುದಾದರೆ—ಅಹಿಂಸಾತ್ಮಕವಾಗಿ ಸ್ವಾತಂತ್ರ್ಯ ಗಳಿಸಿದರೆ ಅದು ಹಾಗೆಯೇ ಇರಬೇಕು—ರಾಜಕೀಯ ಅಧಿಕಾರವನ್ನೂ ಒಳಗೊಂಡು ಸಮಸ್ತ ರೀತಿಯ ಅಧಿಕಾರವೂ ರೈತರ ಕೈಲಿ ಇರಬೇಕು.

**ಪ್ರೊ. ರಂಗಾ —** 'ಸ್ಥಳದಲ್ಲಿಲ್ಲದ ಭೂಒಡೆಯನಿಗೆ ಅಥವಾ ಜಮೀನುದಾರನಿಗೆ ಭೂಮಿ ಸೇರಿರತಕ್ಕದ್ದಲ್ಲ' ಎಂದೂ, ಕೊನೆಗೆ ಜಮೀನುದಾರಿ ಪದ್ಧತಿ ರದ್ದಾಗಲೇಬೇಕೆಂದು—ಖಂಡಿತ ಅಹಿಂಸಾಮಾರ್ಗದಿಂದ—ಎಂದು ನಿಮ್ಮ ಹೇಳಿಕೆಗೆ ಅರ್ಥಮಾಡಿದರೆ ಸರಿ ತಾನೇ ?

**ಗಾಂಧೀಜೀ—** ಹೌದು. ಆದರೆ 'ಪ್ರಭುತ್ವದ ನಿಯಮನಕ್ಕೆ ಒಳಪಟ್ಟ' ಧರ್ಮದರ್ಶಿತ್ವ ಪದ್ಧತಿಯ ಕಲ್ಪನೆಯ ಪದ್ಧತಿ ನನ್ನದೆಂಬುದನ್ನು ನೆನಪಿಡಿ. ಅಂದರೆ ಅಕಾರಣವಾಗಿ ನಾನು ಜಮೀನುದಾರರನ್ನು (ಆ ಅರ್ಥದಲ್ಲಿ ಯಾವುದೇ ವರ್ಗವನ್ನು) ಎದುರುಹಾಕಿಕೊಳ್ಳಬಯಸುವುದಿಲ್ಲ.

**ಪ್ರೊ. ರಂಗಾ—** ರೈತ 'ಜಮೀನುದಾರ ಶೋಷಣೆ ಮಾಡಲು ಆಸ್ಪದ ವಾಗದಂಥ ರೀತಿಯಲ್ಲಿ ಕೆಲಸಮಾಡಬೇಕು' ಎಂದು ನೀವು ಹೇಳುವುದರಲ್ಲಿ ಸತ್ಯಾಗ್ರಹ ಚಳುವಳಿಗಳಿಲ್ಲದೆ ರೈತರು ತಮ್ಮ ಮತಾಧಿಕಾರ ಹಾಗೂ ರಾಜಕೀಯ ಪ್ರಭಾವದ ಪ್ರಯೋಗದ ಮೂಲಕವಾಗಿ ತಮ್ಮ ವ್ಯಕ್ತಿಗತ, ಸಾಮೂಹಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ಮತ್ತು ಭೂಒಡೆಯರ ಅಧಿಕಾರಗಳನ್ನು ಕಡಿಮೆ ಮಾಡಲೂ ಪ್ರಭುತ್ವಶಾಸನವೇ ಮುಂತಾದ ಆಡಳಿತ ಸುಧಾರಣೆಗಳ ಮೂಲಕ ಪ್ರಯತ್ನಿಸುವಂತೆ ಮಾಡಬಹುದಲ್ಲವೇ ?

**ಗಾಂಧೀಜೀ—** ಜನರಿಗೆ, ಉಳುಮೆಗಾರರಿಗೆ ರಾಜಕೀಯ ಅಧಿಕಾರ ಇಲ್ಲದಾಗ ಬಳಸಲೆಂದು ಸವಿನಯ ಶಾಸನೋಲ್ಲಂಘನೆ ಮತ್ತು ಅಸಹಕಾರ ಯೋಜಿತವಾಗಿವೆ. ಅವರಿಗೆ ರಾಜಕೀಯ ಅಧಿಕಾರ ಲಭಿಸಿದ ಕೂಡಲೇ ಸ್ವಾಭಾವಿಕವಾಗಿ ಅವರ ತೊಂದರೆಗಳು ಎಂಥದೇ ಇದ್ದರೂ ಅವು ಶಾಸನದ ಮೂಲಕ ನಿವಾರಣೆ ಆದಾವು.

ಆದರೆ 'ರೈತನಿಗೆ ಅಷ್ಟೆಲ್ಲ ರಾಜಕೀಯ ಅಧಿಕಾರ ಇರಲಿಕ್ಕಿಲ್ಲ' ಎಂದೀರಿ ನೀವು. ಅಹಿಂಸಾತ್ಮಕ ಪದ್ಧತಿಯಲ್ಲಿ ಆಗಲೇಬೇಕಾದಂತೆ ಸ್ವರಾಜ್ಯ ಇಡೀ ಜನತೆಯ ಪ್ರಯತ್ನದಿಂದ ಪ್ರಾಪ್ತವಾಗುತ್ತದೆ. ಆಗ ರೈತರು ತಮ್ಮ ಸಹಜ ಸ್ಥಾನಕ್ಕೆ ಬರಲೇಬೇಕು, ಅವರ ವಾಣಿಯೇ ಅತ್ಯಂತ ಮೇಲ್ಗೈಯಲ್ಲಿರಬೇಕು. ಹಾಗಿರದೆ ಜನಕ್ಕೂ ಸರಕಾರಕ್ಕೂ ಪರಿಮಿತ ಮತದಾನದ ಪದ್ಧತಿಯ ಆಧಾರದ ಮೇಲೆ ವ್ಯಾವಹಾರಿಕ ಒಪ್ಪಂದವಾಗುವುದಾದರೆ ಉಳುಮೆಗಾರನ ಹಿತವನ್ನು

ಎಚ್ಚರದಿಂದ ಕಾಯಬೇಕಾದೀತು. ರೈತರ ಹಿತರಕ್ಷಣೆಯನ್ನು ಶಾಸಕಾಂಗ ಮಾಡಲಾರದೆಹೋದರೆ ಅವರಿಗೆ ಸವಿನಯ ಶಾಸನಭಂಗ ಹಾಗೂ ಅಸಹಕಾರದ ಪರಮ ಪರಿಹಾರೋಪಾಯವಂತೂ ಇದ್ದೇ ಇರುತ್ತದೆ. ೧೯೨೨ರಷ್ಟು ಹಿಂದೆಯೆ ಚಿರಾಲಾ ಪೆರಾಲಾ ಸಂದರ್ಭದಲ್ಲಿ ಹೇಳಿದಂತೆ ಅಂತಿಮವಾಗಿ ಅನ್ಯಾಯ ದಬ್ಬಾಳಿಕೆಗಳ ವಿರುದ್ಧ ಜನಕ್ಕೆ ನಿಜವಾದ ರಕ್ಷಣೆ ಕಾಗದದ ಮೇಲಿನ ಕಾನೂನಲ್ಲ, ಧೀರವಚನವಲ್ಲ, ಉಗ್ರಭಾಷಣಗಳಲ್ಲ, ಅಹಿಂಸಾತ್ಮಕ ಸಂಘಟನಾ ಶಕ್ತಿ, ಶಿಸ್ತು, ತ್ಯಾಗಗಳೇ ಅವು.೭೨

## ದಲಿತೋದ್ಧಾರಕ್ಕೆ ಶಾಸನ

ಬಂಡವಾಳಗಾರರು, ಜಮೀನುದಾರರು, ಮೇಲಿನ ವರ್ಗಗಳವರೆಂದು ಕರೆದುಕೊಳ್ಳುವವರು ಮತ್ತು ಬಳಿಕ ಶಾಸ್ತ್ರೀಯವಾಗಿ ಬ್ರಿಟಿಷ್ ಆಳರಸರು—ಇವರುಗಳಿಂದ ಕೆಸರಿಗೆ ದೂಡಲ್ಪಟ್ಟು, ಅಧಃಪತನ ಹೊಂದಿ ದಲಿತರಾಗಿರುವವರನ್ನು ಮೇಲಕ್ಕೆ ಎತ್ತುವಂಥ ಶಾಸನಗಳನ್ನು ರಚಿಸುವುದರಲ್ಲೇ ಭಾರತ ಎಷ್ಟೋ ವರ್ಷಗಳ ಕಾಲ ತೊಡಗಿರಬೇಕಾದೀತು. ಈ ಜನರನ್ನು ಕೆಸರಿನಿಂದ ಮೇಲೆ ಎತ್ತಬೇಕಾದರೆ, ತನ್ನ ಮನೆಯನ್ನು ಚೊಕ್ಕಪಡಿಸಬೇಕಾದಲ್ಲಿ ಭಾರತದ ರಾಷ್ಟ್ರೀಯ ಸರಕಾರ ಈ ಜನರಿಗೆ ಸತತವಾಗಿ ವಿಶೇಷ ಸೌಲಭ್ಯ ನೀಡಬೇಕಾದೀತು, ಅವರನ್ನು ತುಳಿದು ಪುಡಿ ಮಾಡುತ್ತಿರುವ ಹೊರೆಗಳಿಂದ ಅವರನ್ನು ಮುಕ್ತಮಾಡಬೇಕಾದೀತು. ಭೂಮಾಲಿಕರು, ಜಮೀನುದಾರರು, ಧನಿಕರು ಹಾಗೂ ಇಂದು ವಿಶೇಷಾಧಿಕಾರಗಳನ್ನು ಅನುಭವಿಸುತ್ತಿರುವವರು—ಯೂರೋಪಿಯನರೋ ಭಾರತೀಯರೋ ನನಗೆ ಅದು ಲೆಕ್ಕವಿಲ್ಲ—ತಮ್ಮ ವಿರುದ್ಧ ಪಕ್ಷಪಾತ ನಡೆದಿದೆಯೆಂದು ಹೇಳಿದರೆ ಅವರ ವಿಷಯದಲ್ಲಿ ಅನುಕಂಪ ತೋರಿಯೇನು. ಆದರೆ ನಾನು ಒಂದುಪಕ್ಷ ಅವರಿಗೆ ನೆರವು ನೀಡಬಲ್ಲೆನಾದರೂ ಅದು ನನ್ನಿಂದ ಸಾಧ್ಯವಾಗದು. ಏಕೆಂದರೆ ದಲಿತ ಜನರನ್ನು ಮೇಲೆತ್ತುವ ಕಾರ್ಯದಲ್ಲಿ ನಾನು ಈ ಜನರ ನೆರವು ಬಯಸಿಯೇನು. ಅವರ ನೆರವಿಲ್ಲದೆ ದಲಿತ ಜನತೆಯನ್ನು ಅವರು ಬಿದ್ದಿರುವ ಪಂಕದಿಂದ ಮೇಲೆತ್ತುವುದು ಸಾಧ್ಯವಿಲ್ಲ.

ಅಸ್ಪೃಶ್ಯರ ಗತಿಯನ್ನು ನೋಡಿಯಾದರೂ ನೋಡಿ. ಶಾಸನ ಅವರ ನೆರವಿಗೆ ಬಂದು ಮೈಲುಗಟ್ಟಲೆ ಪ್ರದೇಶವನ್ನು ಅವರಿಗೆ ಕಾದಿರಿಸಿತೆನ್ನಿ. ಈಗಂತೂ ಅವರಿಗೆ ನೆಲವೇ ಇಲ್ಲ. ಮೇಲಿನ ಜಾತಿಯವರೆನ್ನಿಸಿಕೊಳ್ಳುವವರ ಕೃಪೆಯ ಮೇಲೆ, ಪ್ರಭುತ್ವದ ಕೃಪೆಯಿಂದ ಅವರು ಬದುಕುತ್ತಿದಾರೆ ಈಗ. ಒಂದೆಡೆಯಿಂದ ಇನ್ನೊಂದೆಡೆಗೆ ಅವರನ್ನು ಸುಲಭವಾಗಿ ದೂಡಿಬಿಡಬಹುದು, ಕಿಂಚಿತ್ತೂ ತಕರಾರು ಅವರಿಂದ ಬಾರದು, ಕಾನೂನಿನ ಸಹಾಯ ಪಡೆವುದಕ್ಕೂ ಅವರಿಗೆ ಸಾಧ್ಯವಿಲ್ಲ. ಹೀಗಿರುವಾಗ ಸ್ಥಿತಿಗತಿಗಳನ್ನು ಸ್ವಲ್ಪಮಟ್ಟಿಗೆ ಸಮಗೊಳಿಸಲು ಇವರಿಗೆ ಉಚಿತವಾಗಿ ಕೊಡುಗೆಗಳನ್ನು ನೀಡಬೇಕಾದುದು ಶಾಸಕಾಂಗದ ಮೊದಲ ಕೆಲಸವಾದೀತು.

ಈ ಕೊಡುಗೆಗಳು ಯಾರ ಕಿಸೆಯಿಂದ ಬರಬೇಕು? ಆಗಸದ ಕಿಸೆಯಿಂದೇನೂ ಅವು ಬೀಳವು. ಪ್ರಭುತ್ವಕ್ಕಾಗಿ ಆಕಾಶ ಹೊನ್ನಿನ ಮಳೆಗರೆಯದು. ಯೂರೋಪಿಯನರನ್ನೂ ಒಳಗೊಂಡ ಧನಿಕ ವರ್ಗದಿಂದಲೇ ಸಹಜವಾಗಿ ಈ ಹಣ ಬರಬೇಕಾದೀತು.

ಆದುದರಿಂದ ಇದು 'ಉಳ್ಳವರ' ಹಾಗೂ 'ಇಲ್ಲದವರ' ನಡುವಣ ಸಮರ. ಅದರ ಅಂಜಿಕೆಯೇ ಇರುವುದಾದರೆ, ಎಲ್ಲ ವರ್ಗಗಳೂ ಈ ಮೂಕ ಜನಕೋಟಿಯ ತಲೆಬುರುಡೆಗೆ ಪಿಸ್ತೂಲು ಹಿಡಿದು, "ನಮ್ಮ ಆಸ್ತಿ, ನಮ್ಮ ಹಕ್ಕುಗಳ ಸಂರಕ್ಷಣೆಯ ಭರವಸೆ ಕೊಡದ ಹೊರತು ನಿಮ್ಮದೇ ಆದ ಸರಕಾರ ಪಡೆಯಲಾರಿರಿ"—ಎಂದು ಹೇಳುವುದಾದರೆ ರಾಷ್ಟ್ರೀಯ ಸರ್ಕಾರ ಅಸ್ತಿತ್ವಕ್ಕೆ ಬರಲಾರದೆಂದೇ ನನ್ನ ಅಂಜಿಕೆ.[೭೪]

## ಆದರ್ಶ ಜಮೀನುದಾರ

ಭಾರತೀಯ ಸಮಾಜ ಶಾಂತಿಯುತವಾಗಿ ನಿಜವಾದ ಪ್ರಗತಿ ಸಾಧಿಸಬೇಕಾದರೆ, ಧನಿಕ ವರ್ಗಗಳವರು ರೈತನಲ್ಲೂ ತಮಗಿರುವಂಥ ಆತ್ಮವೇ ಇದೆ, ತಮ್ಮ ಸಿರಿವಂತಿಕೆಯಿಂದಾಗಿ ಬಡವರಿಗಿಂತ ತಮಗೇನೂ ಹೆಚ್ಚುಗಾರಿಕೆ ಬಾರದು ಎಂದು ನಿರ್ದಿಷ್ಟವಾಗಿ ಮಾನ್ಯಮಾಡಬೇಕಾದೀತು. ಜಪಾನೀ ಶ್ರೀಮಂತ ಕುಲದವರಂತೆ ಇವರೂ ತಮ್ಮ ಆಶ್ರಿತರಾದ ರೈತರಿಗಾಗಿ ತಮ್ಮ ಶ್ರೀಮಂತಿಕೆಯನ್ನು ಕಾಯ್ದುಕೊಳ್ಳುವ ಧರ್ಮದರ್ಶಿಗಳು ತಾವು—ಎಂದು

ತಿಳಿಯಬೇಕು. ಆಗ ತಾವು ಮಾಡಿದ ಪರಿಶ್ರಮಕ್ಕೆ ಪ್ರತಿಯಾಗಿ ಸೂಕ್ತ ಪಾರಿಶ್ರಮಿಕಕ್ಕಿಂತ ಹೆಚ್ಚಾಗಿ ತೆಗೆದುಕೊಳ್ಳುವಂತಿಲ್ಲ. ಇಂದಾದರೋ ಧನಿಕ ವರ್ಗದ ತೀರಾ ಅನಾವಶ್ಯಕ ಆಡಂಬರ, ದುಂದುಗಾರಿಕೆ ಹಾಗೂ ಅವರ ಸುತ್ತಲೂ ಜೀವಿಸುವ ರೈತರ ಹೊಲಸು ಸನ್ನಿವೇಶ, ಅರೆಯುವಂಥ ದಿವಾಳಿ ತನಗಳ ಹೋಲಿಕೆ ಎಲ್ಲಿಂದೆಲ್ಲಿಗೆ? ಆದುದರಿಂದ ಆದರ್ಶ ಜಮೀನುದಾರ, ರೈತರು ಇಂದು ಹೊರುತ್ತಿರುವ ಹೊರೆಯ ಬಹುಪಾಲನ್ನು ಕೂಡಲೇ ಇಳಿಸಿಯಾನು. ರೈತರೊಡನೆ ನಿಕಟಸಂಪರ್ಕ ಬೆಳೆಸಿ, ಅವರ ಅಗತ್ಯಗಳನ್ನು ಅರಿತುಕೊಂಡಾನು. ಇಂದು ಅವರ ಜೀವವನ್ನೇ ಹಿಂಡುತ್ತಿರುವ ನಿರಾಶೆಯ ಬದಲು ಅವರಲ್ಲಿ ಆಸೆ ಮೊಳೆಸಿಯಾನು. ಸ್ವಚ್ಛತೆ ಹಾಗೂ ಆರೋಗ್ಯ ನಿಯಮಗಳ ವಿಷಯದಲ್ಲಿ ರೈತನ ಅಜ್ಞಾನದಿಂದ ತೃಪ್ತಿಗೊಳ್ಳ. ರೈತನಿಗೆ ಜೀವನಾವಶ್ಯಕ ವಸ್ತುಗಳು ಸಿಗುವುದಕ್ಕಾಗಿ ತಾನು ಬಡತನದ ಬಾಳಿಗೆ ಇಳಿದಾನು. ತನ್ನ ರೈತರ ಆರ್ಥಿಕ ಸ್ಥಿತಿಯನ್ನು ಅಭ್ಯಸಿಸಿ, ಅವರಿಗಾಗಿ ಶಾಲೆಗಳನ್ನು ತೆರೆದು, ಅವರ ಮಕ್ಕಳಿಗೂ ತನ್ನ ಮಕ್ಕಳಿಗೂ ಜತೆಗೇ ಶಿಕ್ಷಣ ಕೊಡುವ ವ್ಯವಸ್ಥೆ ಮಾಡಿಯಾನು. ಹಳ್ಳಿಯ ಬಾವಿಯನ್ನೂ ಕೆರೆಯನ್ನೂ ಸ್ವಚ್ಛಗೊಳಿಸಿಯಾನು. ತಾನೂ ಅಗತ್ಯವಾದ ಶ್ರಮಮಾಡಿ ರೈತರು ತಮ್ಮ ರಸ್ತೆಗಳನ್ನೂ ಶೌಚಕೂಪಗಳನ್ನೂ ಸ್ವಚ್ಛಗೊಳಿಸಿ ಕೊಳ್ಳುವಂತೆ ಮಾಡಿಯಾನು. ಯಾವ ಹಿಂಜರಿಕೆಯೂ ಇಲ್ಲದೆ ತನ್ನ ತೋಟವನ್ನು ನಿರ್ಬಂಧವಿಲ್ಲದೆ ಬಳಸಲು ರೈತರಿಗೆ ತೆರೆದು ಇಡುವ. ತನ್ನ ಸುಖಭೋಗಕ್ಕಾಗಿ ಇಟ್ಟುಕೊಂಡಿರುವ ಬಹುಪಾಲು ಕಟ್ಟಡಗಳನ್ನು ಆಸ್ಪತ್ರೆ, ಶಾಲೆಗಳಾಗಿ ಬಳಸುವ. ಬಂಡವಾಳಗಾರವರ್ಗ ಕಾಲಧರ್ಮವನ್ನರಿತುದೇ ಆದರೆ, ತಮ್ಮ ಆಸ್ತಿಪಾಸ್ತಿಯ ದೈವದತ್ತ ಅಧಿಕಾರದ ಕಲ್ಪನೆಯನ್ನು ಬದಲಾ ಯಿಸಿಕೊಂಡುದೇ ಆದರೆ ಇಂದು ಹಳ್ಳಿಗಳೆನಿಸಿಕೊಳ್ಳುವ ಏಳುಲಕ್ಷ ತಿಪ್ಪೆಗುಂಡಿ ಗಳನ್ನು ಅತ್ಯಲ್ಪ ಅವಧಿಯಲ್ಲಿ ಶಾಂತಿ, ಸ್ವಾಸ್ಥ್ಯ, ಸೌಖ್ಯಗಳ ನಿಕೇತನಗಳಾಗಿ ಪರಿವರ್ತಿಸಬಹುದು. ನಮ್ಮ ಬಂಡವಾಳಗಾರ ಜಪಾನಿನ ಸಾಮುರಾಯನ್ನು ಅನುಸರಿಸಿದಲ್ಲಿ ಆತ ಏನೂ ಕಳೆದುಕೊಳ್ಳ, ಎಲ್ಲವನ್ನೂ ಪಡೆದುಕೊಂಡಾನು, ಇದು ನನ್ನ ನಿಶ್ಚಿತ ಮತ. ತನ್ನ ಬಳಿಯ ಹೆಚ್ಚಿನದನ್ನು ತಾನಾಗಿಯೇ ಬಿಟ್ಟು ಕೊಟ್ಟು ಅದಕ್ಕೆ ಪ್ರತಿಯಾಗಿ ಎಲ್ಲರ ಸುಖ ಸಾಧಿಸುವುದೊಂದೇ ದಾರಿ. ಹಾಗಲ್ಲದೆ ಬಂಡವಾಳಗಾರ ಕಾಲವಿರುವಾಗಲೆ ಎಚ್ಚರಗೊಳ್ಳದಿದ್ದರೆ ಜಾಗೃತ

ರಾದ ಅಜ್ಞ, ಹಸಿದ ಜನಕೋಟಿ ದೇಶವನ್ನು ಅರಾಜಕತೆಗೆ ದೂಡಿಯಾರು. ಸಶಕ್ತ ಸರ್ಕಾರದ ಶಸ್ತ್ರಬಲವೂ ಅದನ್ನು ತಪ್ಪಿಸದು. ಇಂಥ ವಿನಾಶವನ್ನು ಭಾರತ ಯಶಸ್ವಿಯಾಗಿ ತಡೆಗಟ್ಟೀತೆಂದು ಆಶಿಸಿದೇನೆ.೭೪

ಎಷ್ಟೋ ಜಮೀನುದಾರರು ತಮ್ಮ ರೈತರ ಬಗೆಗೆ ಸಹಾನುಭೂತಿಯುತ ರಾಗಿದಾರೆ. ಅವರೊಡನೆ ಕೂಡಿ ಬಾಳುತ್ತಾರೆ. ಆದರೆ ಈ ಕೆಲಸ ಈಗಿನ ದಕ್ಕಿಂತ ತೀವ್ರಗತಿಯಿಂದ ಸಾಗಬೇಕು. ಜಮೀನುದಾರರು ರೈತರ ನಿಲುವಿನ ಔಚಿತ್ಯವನ್ನು ಕಂಡುಕೊಂಡು ತಮ್ಮ ದೃಷ್ಟಿಯನ್ನು ಸೂಕ್ತವಾಗಿ ಮಾರ್ಪಡಿಸಿ ಕೊಂಡಾರೆಂದು ನಂಬಿದೇನೆ.

ಜಮೀನುದಾರರು ಕಾಲದೊಡನೆ ಪೋಟಿ ಹೂಡಲಿ. ಕೇವಲ ಗೇಣಿ ವಸೂಲಿಗಾರರು ಮಾತ್ರ ಆಗುವುದು ಬೇಡ. ಧರ್ಮದರ್ಶಿಗಳಾಗಲಿ, ತಮ್ಮ ರೈತರ ನೆಚ್ಚಿನ ಗೆಳೆಯರಾಗಲಿ. ತಮ್ಮ ಖಾಸಗಿ ಧನಕ್ಕೆ ಮಿತಿ ಹಾಕಿಕೊಳ್ಳಲಿ. ಮದುವೆ-ಮುಂಜಿಗಳಲ್ಲಿ ರೈತರಿಂದ ಒಪ್ಪಿಸಿಕೊಳ್ಳುವ ಒತ್ತಾಯದ ಮುಯ್ಯಿ, ಒಬ್ಬ ರೈತನಿಂದ ಇನ್ನೊಬ್ಬನಿಗೆ ಹಿಡುವಳಿ ವರ್ಗವಾದಾಗ ಅಥವಾ ಒಕ್ಕಲು ಬಿಡಿಸಿದ ರೈತನಿಗೆ ಮತ್ತೆ ಭೂಮಿ ಕೊಟ್ಟಾಗ ಒಪ್ಪಿಸುವ ನಜರು ಮುಂತಾದ ಗೌರವರಹಿತ ಕಾಣಿಕೆಗಳನ್ನು ತೆಗೆದುಕೊಳ್ಳುವುದನ್ನು ಅವರು ಬಿಡಲಿ. ಗೇಣಿ ಗುತ್ತಿಗೆಯ ಭದ್ರತೆ ನೀಡಬೇಕು ರೈತರಿಗೆ. ಅವರ ಕಷ್ಟಸುಖದಲ್ಲಿ ಸಜೀವ ಆಸಕ್ತಿ ವಹಿಸಬೇಕು. ಪ್ರಾಥರಿಗೆ ಸುವ್ಯವಸ್ಥಿತ ಶಾಲೆಗಳು, ಬೇನೆಬಿದ್ದವರಿಗೆ ಆಸ್ಪತ್ರೆ, ಔಷಧೋಪಚಾರ ಸೌಕರ್ಯ ಏರ್ಪಡಿಸಲಿ. ಗ್ರಾಮದ ನೈರ್ಮಲ್ಯ ರಕ್ಷಣೆ ಮುಂತಾಗಿ ಎಷ್ಟೋ ಮಾರ್ಗಗಳಿಂದ ಜಮೀನುದಾರರು ರೈತರ ನಿಜವಾದ ಗೆಳೆಯರೆಂದೆನ್ನಿಸಿಕೊಳ್ಳಲಿ. ತಮ್ಮ ವಿವಿಧ ಸೇವೆಗೆ ಒಂದು ನಿರ್ದಿಷ್ಟ ಪ್ರತಿಫಲ ಮಾತ್ರ ಸ್ವೀಕರಿಸಲಿ. ಒಟ್ಟಿನಲ್ಲಿ ತಮ್ಮ ಸ್ಥಾನವನ್ನು ಅವರು ಯೋಗ್ಯತೆಯಿಂದ ಕಾಪಾಡಿಕೊಳ್ಳಬೇಕು.

ರಾಮ ಹಾಗೂ ಜನಕರ ಆದರ್ಶ ನನಗೆ ಪ್ರಿಯ. ಅವರು ತಮ್ಮದಾಗಿ ಏನೂ ಇಟ್ಟುಕೊಳ್ಳಲಿಲ್ಲ. ಎಲ್ಲವೂ, ತಾವೂ ಜನತೆಗೇ ಸೇರಿಹೋದಂತಿದ್ದರು. ಅವರಿಗಿಂತ ಮೇಲಾಗಿ ಇವರು ಬಾಳಲಿಲ್ಲ, ಜನರ ಸ್ಥಿತಿಗೆ ಅನುಗುಣವಾಗಿ ಬದುಕಿದರು. ಅವರನ್ನು ಇತಿಹಾಸದ ಪುರುಷರೆಂದು ಎಣಿಸುವುದಿಲ್ಲವೇನೋ? **ಮಹಾಪುರುಷ ಉಮರ್ ಕಾಲಿಫ್‌ನ ಉದಾಹರಣೆ ತೆಗೆದುಕೊಳ್ಳಿ. ತನ್ನ**

ಮಹಾಪ್ರತಿಭೆ ಪ್ರಯತ್ನಶೀಲತೆಗಳಿಂದ ನಿರ್ಮಿಸಿದ ಮಹಾಸಾಮ್ರಾಜ್ಯದ ಚಕ್ರವರ್ತಿಯಾಗಿದ್ದರೂ ನಿರ್ಗತಿಕನ ಬಾಳು ಬಾಳಿದ. ತನ್ನ ಕಾಲ ಕೆಳಗೆ ಬಿದ್ದಿದ್ದ ಅಪಾರ ನಿಧಿನಿಕ್ಷೇಪದ ಒಡೆಯ ತಾನೆಂದು ಎಂದೂ ತಿಳಿಯಲೇ ಇಲ್ಲ. ಭೋಗವಿಲಾಸಗಳಲ್ಲಿ ಜನತೆಯ ಹಣವನ್ನು ದುಂದುಮಾಡಿದ ಅಧಿಕಾರಿಗಳಿಗೆ ಸಿಂಹಸ್ವಪ್ನವಾಗಿದ್ದ.೭೫

ತಮ್ಮ ಹಿಡುವಳಿಗಳು ಜಮೀನುದಾರರಿಗೆ ಸಂಬಂಧಪಟ್ಟಿದ್ದಲ್ಲ, ಕೇವಲ ತಮ್ಮದೇ ಎಂಬ ತತ್ತ್ವವನ್ನು ರೈತರು ತಿರಸ್ಕರಿಸಬೇಕು. ತಾವೆಲ್ಲ ಒಂದು ಒಟ್ಟುಕುಟುಂಬದ ಸದಸ್ಯರು, ಜಮೀನುದಾರ ಆಕ್ರಮಣದ ವಿರುದ್ಧ ತಮ್ಮನ್ನು ಕಾಯುವ ಯಜಮಾನ ಎಂದು ತಿಳಿಯಬೇಕು ಅಥವಾ ಹಾಗೆ ಆಗಬೇಕು. ಕಾನೂನು ಹೇಗೇ ಇರಲಿ, ಜಮೀನುದಾರೀ ಪದ್ಧತಿ ಸಮರ್ಥನೀಯವಾಗ ಬೇಕಾದರೆ ಒಟ್ಟುಕುಟುಂಬದ ಸ್ಥಿತಿಗತಿಯ ಹತ್ತಿರ ಹತ್ತಿರ ಅದು ಬರಲೇ ಬೇಕು.೭೬

ನನ್ನ ಮಟ್ಟಿಗೆ ರಾಜಮಹಾರಾಜರ ಸ್ವೇಚ್ಛಾಧಿಕಾರದ ನಿರ್ನಾಮವನ್ನು ಬಯಸೆ, ಅದು ಧರ್ಮದರ್ಶಿತ್ವವಾಗಿ ಪರಿವರ್ತನೆಯಾಗಲಿ ಎಂದು ಆಶಿಸು ತ್ತೇನೆ. ಹೆಸರಿಗೆ ಮಾತ್ರವಲ್ಲ, ನಿಜಕ್ಕೂ. ಅವರು ಅನುಭವಿಸಿದ ಅನಿರ್ಬಂಧ ಅಧಿಕಾರ ಹೋಗಬೇಕು. ಎಷ್ಟೇ ಉದಾತ್ತ ಮನುಷ್ಯನಾಗಿರಲಿ, ಎಂಥ ಪ್ರಾಚೀನ ವಂಶಜನಾಗಿರಲಿ ಜನತೆಯ ಸ್ವಾತಂತ್ರ್ಯ ಒಬ್ಬ ವ್ಯಕ್ತಿಯ ಮರ್ಜಿ ಯನ್ನವಲಂಬಿಸಬಾರದು. ರಾಜಮಹಾರಾಜರಿರಲಿ, ಜಮೀನುದಾರನಿರಲಿ, ವರ್ತಕನಿರಲಿ ಸ್ವಯಾರ್ಜಿತ ಅಥವಾ ವಂಶಪಾರಂಪರ್ಯ ಆಸ್ತಿಪಾಸ್ತಿಯ ಏಕಮಾತ್ರ ಒಡೆಯ ಅಥವಾ ಪರಭಾರೆದಾರನಾಗಲಾರ. ತನ್ನ ನೆರೆಯವರಿಂದ ಅವರ ಪ್ರತಿಭೆಯ ಉಪಯೋಗಕ್ಕೆ ಸಮಾನ ಅವಕಾಶ ಕೊಟ್ಟು ತಾನೂ ತನ್ನ ಪ್ರತಿಭೆಯ ಪೂರ್ಣ ಉಪಯೋಗ ಮಾಡಿಕೊಳ್ಳಲು ಪ್ರತಿವ್ಯಕ್ತಿಗೂ ಪೂರ್ಣ ಸ್ವಾತಂತ್ರ್ಯ ಇರತಕ್ಕದ್ದು. ಆದರೆ ತನ್ನ ಪ್ರತಿಭೆಯಿಂದ ಬರುವ ಆದಾಯ-ಲಾಭಗಳನ್ನು ಮನಸ್ವೀ ಭೋಗಿಸಲು ಯಾರಿಗೂ ಹಕ್ಕಿಲ್ಲ. ಪ್ರತಿಯೊಬ್ಬನೂ ರಾಷ್ಟ್ರದ, ಅಥವಾ ತನ್ನ ಸುತ್ತಣ ಸಮಾಜವ್ಯವಸ್ಥೆಯ ಒಂದು ಅಂಶ ಮಾತ್ರ. ಆದಕಾರಣ ಅವನು ತನ್ನ ಪ್ರತಿಭೆಯನ್ನು ಸ್ವಾರ್ಥಕ್ಕಾಗಿ ಮಾತ್ರವೇ ಅಲ್ಲದೆ, ತಾನು ಅಂಶವಾಗಿರುವ ಸಮಾಜವ್ಯವಸ್ಥೆಯ, ತಾನು ಯಾವುದರ ಕೃಪೆಯಿಂದ

ಬಾಳುತ್ತಿರುವನೋ ಆ ಸಮಾಜದ ಹಿತಕ್ಕಾಗಿಯೂ ಬಳಸಬೇಕು. ಇಂದಿನ ಅಸಮಾನತೆಗಳು ನಿಜಕ್ಕೂ ಜನರ ಅಜ್ಞಾನದಿಂದ ಆದುವು. ಅವರಿಗೆ ತಮ್ಮ ಸಹಜಶಕ್ತಿಯ ಅರಿವಾದಂತೆಲ್ಲ ಇವು ಮಾಯವಾಗಲೇಬೇಕು. ಹಿಂಸೆಯಿಂದ ಈ ಕ್ರಾಂತಿ ಆದಲ್ಲಿ ಪರಿಸ್ಥಿತಿ ತಿರುವುಮುರುವು ಆದೀತು, ಉತ್ತಮಗೊಳ್ಳದು. ಅಹಿಂಸೆಯಿಂದ, ಪರಿವರ್ತನೆಯಿಂದ ಆದರೆ ಜನ ಆಶಿಸುವ ನವ-ಯುಗ ಉದಯಿಸಲೇಬೇಕು. ನನ್ನ ದಾರಿ, ಬಿನ್ನಹ, ಶುದ್ಧ ನಿಷ್ಕಲಂಕ ಅಹಿಂಸೆಯದು. ಸ್ವಾತಂತ್ರ್ಯ, ಸಮತೆ, ಸೋದರತೆ—ಇವು ಫ್ರೆಂಚರ ಉದಾತ್ತಧ್ಯೇಯವಾಕ್ಯ. ಅದು ಕೇವಲ ಫ್ರೆಂಚರ ಕುಲಧನ ಮಾತ್ರವಲ್ಲ, ಇಡೀ ಮಾನವತೆಗೇ ಕುಲಧನ.

ಫ್ರೆಂಚರು ಎಂದೂ ಸಾಧಿಸದುದನ್ನು ನಾವು ಸಾಧಿಸಬಲ್ಲೆವು. ರಾಜರು, ಜಮೀನುದಾರರು, ವರ್ತಕರು ಈ ದಿಕ್ಕಿನಲ್ಲಿ ದಾರಿ ತೋರಿಯಾರೇ? ಅವರೇ ದಾರಿ ತೋರಬೇಕಾದವರು, ಏನೂ ಇಲ್ಲದ ಬಡಬಗ್ಗರಲ್ಲ. ತಮ್ಮ ದಿವಾಳಿತನ ಕಾರ್ಪಣ್ಯಗಳ ಹೊರತಾಗಿ ಹಂಚಿಕೊಳ್ಳಲು ಮತ್ತೇನಿದೆ ಅವರ ಬಳಿ?೭೭

ನ್ಯಾಯವಾದ ಕಾರಣವಿಲ್ಲದೆ ಆಸ್ತಿವಂತ ವರ್ಗಗಳವರ ಖಾಸಗಿ ಆಸ್ತಿಯನ್ನು ವಶಪಡಿಸಿಕೊಳ್ಳುವುದರಲ್ಲಿ ನಾನು ಭಾಗಿಯಾಗಲಾರೆನೆಂದು ನಿಮಗೆ ಭರವಸೆ ಕೊಡುವೆ. ನಿಮ್ಮ ಹೃದಯಪ್ರವೇಶಮಾಡಿ ನೀವು ನಿಮ್ಮ ಎಲ್ಲ ಖಾಸಗಿ ಸೊತ್ತನ್ನೂ ನಿಮ್ಮ ರೈತರಿಗಾಗಿಯೇ ಧರ್ಮದರ್ಶಿಗಳಾಗಿ ಇಟ್ಟುಕೊಳ್ಳುವಂತೆ, ಅವರ ಕ್ಷೇಮಲಾಭಕ್ಕಾಗಿಯೇ ಮುಖ್ಯವಾಗಿ ಅದನ್ನು ಬಳಸುವಂತೆ ನಿಮ್ಮನ್ನು ಪರಿವರ್ತಿಸುವುದೇ ಗುರಿ. ಕಾಂಗ್ರೆಸ್ಸಿನೊಳಗೆ ಸಮಾಜವಾದೀ ಪಕ್ಷವೆಂಬೊಂದು ಪಕ್ಷ ಹುಟ್ಟಿಬರುತ್ತಿದೆಯೆಂಬುದನ್ನು ಬಲ್ಲೆ. ಆ ಪಕ್ಷ ತನ್ನೊಡನೆ ಕಾಂಗ್ರೆಸ್ಸನ್ನೂ ಒಯ್ಯುವುದಾದರೆ ಏನಾದೀತೆಂದು ನಾ ಹೇಳಲಾರೆ. ಆದರೆ ಕಟ್ಟುನಿಟ್ಟಾಗಿ ಪ್ರಾಮಾಣಿಕವಾದ ಹಾಗು ಪ್ರತಿಭಟಿಸಲಾಗದಂಥ ಜನಮತಗಣನೆ ನಡೆದುದಾದರೆ ನಮ್ಮ ಜನಕೋಟಿ ಆಸ್ತಿವಂತ ವರ್ಗಗಳವರ ಸೊತ್ತನ್ನು ಒಟ್ಟಾರೆ ಮುಟ್ಟುಗೋಲು ಹಾಕಿಕೊಳ್ಳುವುದರ ಪರವಾಗಿ ಮತ ಕೊಡರೆಂಬುದು ಬಹು ಸ್ಪಷ್ಟ. ಬಂಡವಾಳ ಹಾಗೂ ಶ್ರಮದ, ಜಮೀನುದಾರ-ರೈತರ ನಡುವಿನ ಸಹಕಾರ, ಅನ್ಯೋನ್ಯತೆಗಳಿಗಾಗಿ ದುಡಿಯುತ್ತಿದೇನೆ.

ಆದರೆ ಎಚ್ಚರಿಕೆಯ ಮಾತೊಂದನ್ನು ಹೇಳಲೇಬೇಕು. ಗಿರಣಿಗಳಿಗೆ ನೀವೊಬ್ಬರೇ ಒಡೆಯರಲ್ಲ, ಕಾರ್ಮಿಕರೂ ಒಡೆತನದಲ್ಲಿ ಸಮಭಾಗಿಗಳು ಎಂದು ಗಿರಣಿಪತಿಗಳಿಗೆ ಸದಾ ನಾ ಹೇಳಿದೇನೆ. ಅದೇ ರೀತಿ ನಿಮ್ಮ ಭೂಮಿಯ ಒಡೆತನ ನಿಮಗೆ ಸೇರಿದಷ್ಟೇ ನಿಮ್ಮ ರೈತರಿಗೂ ಸೇರಿದ್ದು, ನಿಮಗೂ ಹೇಳುವೆ. ನಿಮ್ಮ ಲಾಭವನ್ನು ಭೋಗವಿಲಾಸದ ಜೀವನದಲ್ಲಿ ಅಥವಾ ದುಂದುಗಾರಿಕೆಯಿಂದ ಬದುಕಲು ಪೋಲುಮಾಡಬಾರದು. ರೈತರ ಕಲ್ಯಾಣಕ್ಕಾಗಿ ಬಳಸಬೇಕು. ರೈತರು ನಿಮ್ಮ ಬಾಂಧವ್ಯ ಅನುಭವಿಸುವಂತೆ, ಭದ್ರತೆ ಅರಿಯುವಂತೆ, ಒಂದೇ ಕುಟುಂಬದವರಂತೆ ಅವರ ಹಿತಕ್ಕೆ ನಿಮ್ಮಿಂದ ಧಕ್ಕೆ ಬಾರದು ಎಂಬ ಭಾವನೆ ಅವರಲ್ಲಿ ಮೂಡುವಂತೆ ಒಮ್ಮೆ ಮಾಡಿದ್ದಾದರೆ ನಿಮಗೂ ಅವರಿಗೂ ಘರ್ಷಣೆ ಬರಲಿಕ್ಕೇ ಇಲ್ಲ, ವರ್ಗಕಲಹವೂ ಉಂಟಾಗದು.

ವರ್ಗಸಂಘರ್ಷವು ಭಾರತದ ಪ್ರಧಾನ ಪ್ರಕೃತಿಗೇ ಹೊರತಾದುದು. ಸಮಾನ ನ್ಯಾಯದ ಆಧಾರವುಳ್ಳ, ಎಲ್ಲರ ಮೂಲಭೂತ ಹಕ್ಕುಗಳ ಮೇಲೆ ನಿಂತ ಸಾಮ್ಯವಾದವನ್ನು ಭಾರತ ವಿಕಸಿತಗೊಳಿಸೀತು. ನನ್ನ ಕನಸಿನ **ರಾಮರಾಜ್ಯ**ದಲ್ಲಿ ರಾಜನಿಗೂ ರಂಕನಿಗೂ ಒಂದೇ ರೀತಿಯ ಹಕ್ಕುಗಳು ಸಿಕ್ಕಾವು.

ವರ್ಗಸಂಘರ್ಷವನ್ನು ತಪ್ಪಿಸಲು ನನ್ನ ಪ್ರಭಾವ ಸರ್ವಸ್ವವನ್ನೂ ಬಳಸಿಯೇನೆಂದು ನೀವು ಖಂಡಿತ ತಿಳಿಯಬಹುದು. ಅನ್ಯಾಯವಾಗಿ ನಿಮ್ಮ ಸೊತ್ತನ್ನು ಕಸಿಯುವ ಪ್ರಯತ್ನವೇನಾದರೂ ನಡೆದರೆ ನಿಮ್ಮ ಕಡೆ ನಿಂತು ನಾನು ಹೋರಾಡುವುದನ್ನು ನೀವು ನೋಡೀರಿ.

ನಿಮ್ಮ ಅಂಜಿಕೆ ಅಪನಂಬಿಕೆಗಳೆಲ್ಲ ಅಳುಕಿನ ಅಂತಃಕರಣದಿಂದ ಹುಟ್ಟಿದುವು ಎನ್ನುತ್ತೇನೆ. ಅರಿತೋ ಅರಿಯದೆಯೋ ನೀವು ಎಸಗಿರುವ ಅನ್ಯಾಯಗಳನ್ನು ತೊಡೆದುಹಾಕಿಬಿಡಿ. ಕಾಂಗ್ರೆಸ್ಸಿನ, ಕಾಂಗ್ರೆಸ್ಸಿಗರ ಎಲ್ಲ ಹೆದರಿಕೆಯನ್ನೂ ತೊರೆಯಿರಿ. ಜಮೀನುದಾರ–ರೈತರ ಸಂಬಂಧದಲ್ಲಿ ಹೊಸ ಪುಟ ತಿರುವಿದ ಕೂಡಲೆ ನಿಮ್ಮ ಖಾಸಗಿ ಹಕ್ಕು, ಆಸ್ತಿಗಳ ರಕ್ಷಣೆಗಾಗಿ ನಾವು ನಿಮ್ಮ ಕಡೆ ನಿಂತು ಹೋರಾಡುವುದನ್ನು ಕಂಡೀರಿ.

'ನಾವು' ಎನ್ನುವಾಗ ನನ್ನ ಮನಸ್ಸಿನಲ್ಲಿ ಪಂಡಿತ ಜವಾಹರಲಾಲರೂ ಇದಾರೆ. ಏಕೆಂದರೆ ಅಹಿಂಸೆಯ ಈ ಪ್ರಧಾನ ತತ್ತ್ವದ ವಿಷಯದಲ್ಲಿ ನಮ್ಮಿಬ್ಬ

ರಲ್ಲಿ ಯಾವ ಭಿನ್ನಭಾವವೂ ಇಲ್ಲ. ಅವರು ಆಸ್ತಿಯ ರಾಷ್ಟ್ರೀಯಕರಣದ ವಿಷಯ ಮಾತಾಡುತ್ತಾರೆ, ನಿಜ. ಆದರೆ ಅದಕ್ಕೆ ನೀವು ಹೆದರಬೇಕಿಲ್ಲ. ವ್ಯಕ್ತಿಗಳಲ್ಲಿ ಇಟ್ಟಿರದೆ ರಾಷ್ಟ್ರ ಆಸ್ತಿಯ ಒಡೆಯನಾಗಿರುವುದು ಹೇಗೆ ಸಾಧ್ಯ? ಅದರ ನ್ಯಾಯ್ಯ, ಸಮಾನೋಚಿತ ಉಪಯೋಗವು ಆಗುವಂತೆ ನೋಡಿ ಕೊಂಡೀತು, ದುರುಪಯೋಗ ತಡೆದೀತು, ಅಷ್ಟೆ. ರೈತರ ಲಾಭಕ್ಕಾಗಿ ನಿಮ್ಮ ಆಸ್ತಿಯನ್ನು ನೀವು ಪಡೆದಿರಲು ನಿಮ್ಮ ಆಕ್ಷೇಪಣೆ ಇರುವುದು ಸಾಧ್ಯವಿಲ್ಲವೆಂದು ನನ್ನ ಭಾವನೆ. ಶಾಂತಿಯಿಂದ, ಸ್ವತಂತ್ರರಾಗಿ ಬದುಕುವುದಕ್ಕಿಂತ ಹೆಚ್ಚಿನ ಆಕಾಂಕ್ಷೆ ರೈತರಿಗೇನೂ ಇಲ್ಲ. ನೀವು ಅವರಿಗಾಗಿ ಆಸ್ತಿ ಬಳಸಿದರೆ ಒಡೆತನಕ್ಕಾಗಿ ಅವರೇನೂ ಕರುಬುವುದಿಲ್ಲ.೭೮

## ವರ್ಗಸಂಘರ್ಷ ಅನಿವಾರ್ಯವಲ್ಲ

"ಜಮೀನುದಾರನ ಪಾಡೇನು? ಅವನನ್ನು ತೊಡೆದುಹಾಕುವಿರಾ? ನಾಶಮಾಡುವಿರಾ?"

ಜಮೀನುದಾರನನ್ನು ನಾಶಗೊಳಿಸಬಯಸೆ ನಾನು. ಜಮೀನುದಾರ ಅನಿವಾರ್ಯನೆಂದೂ ನನಗೆ ಅನಿಸದು. ನನ್ನ ಧರ್ಮದರ್ಶಿತ್ವ ತತ್ತ್ವವನ್ನು ನಡೆಸಿಕೊಂಡುಬರುವ ಕ್ರಮವನ್ನು ವಿವರಿಸುತ್ತೇನೆ. ಈ ಹಳ್ಳಿಯಲ್ಲಿ ಜಮುನಾ ಲಾಲಜೀಗೆ ಶೇಕಡಾ ೭೫ರಷ್ಟು ಪಾಲಿದೆ. ನಾನೇನೂ ಇಲ್ಲಿ ಯೋಜನಾಪೂರ್ವಕ ಬರಲಿಲ್ಲ. ಆಕಸ್ಮಿಕವಾಗಿ ಬಂದಿದೇನೆ. ಜಮುನಾಲಾಲರನ್ನು ಸಹಾಯಕ್ಕಾಗಿ ಕೇಳಿದೆ. ಅವರು ನನಗೆ ಬೇಕಾದ ಗುಡಿಸಲನ್ನೂ ಇತರ ಮನೆಗಳನ್ನೂ ಕಟ್ಟಿಕೊಟ್ಟು ನನಗೆ ಹೇಳಿದರು: "ಸೇಗಾಂವ್ ಹಳ್ಳಿಯಿಂದ ಬರುವ ಲಾಭ ವನ್ನೆಲ್ಲ ಹಳ್ಳಿಗರ ಯೋಗಕ್ಷೇಮಕ್ಕಾಗಿ ನೀವೇ ತೆಗೆದುಕೊಳ್ಳಿ." ಇತರ ಜಮೀನು ದಾರರಲ್ಲೂ ಇದೇ ಬಗೆಯ ಪರಿವರ್ತನೆ ಉಂಟುಮಾಡಬಲ್ಲೆನಾದರೆ ಗ್ರಾಮ ಸುಧಾರಣೆ ಸುಲಭವಾದೀತು. ಮುಂದಿನ ಪ್ರಶ್ನೆ ಭೂಮಿವ್ಯವಸ್ಥೆಯದು, ಸರಕಾರದ ಶೋಷಣೆಯದು, ದಿಟ. ಪ್ರಶ್ನೆಯ ಆ ಮುಖಗಳನ್ನು ಸದ್ಯಕ್ಕೆ ಆವಶ್ಯಕ ಅನಿಷ್ಟಗಳೆಂದು ಭಾವಿಸುತ್ತೇನೆ. ಈ ಕಾರ್ಯಕ್ರಮವನ್ನು ಮುಂದು ವರಿಸಿದುದಾದರೆ ಸರಕಾರದ ಶೋಷಣೆಯನ್ನು ಎದುರಿಸುವ ದಾರಿಯೂ ಬಹುಶಃ ಹೊಳೆಯಬಹುದು.

"ನಿಮ್ಮ ಅರ್ಥನೀತಿ ಶ್ರೀ ನೆಹರೂರವರದಕ್ಕಿಂತ ಭಿನ್ನವೆಂದು ತೋರುತ್ತದೆ. ನಾ ತಿಳಿದಮಟ್ಟಿಗೆ ಅವರು ಜಮೀನುದಾರರನ್ನು ತೊಡೆದುಬಿಟ್ಟಾರು."

"ಹೌದು, ಗ್ರಾಮದ ಅಭ್ಯುದಯ, ಪುನರ್ನಿರ್ಮಾಣದ ವಿಷಯಗಳಲ್ಲಿ ನಾವು ಭಿನ್ನ ಭಿನ್ನ ವಿಚಾರದವರೆಂದು ತೋರುತ್ತದೆ. ಭಿನ್ನತೆ ಸ್ವರಭಾರದ್ದು. ಗ್ರಾಮಾಭ್ಯುದಯದ ಆಂದೋಲನಗಳಿಗೆ ಅವರದು ಅಷ್ಟು ಪರಿವೆಯಿಲ್ಲ. ಔದ್ಯೋಗೀಕರಣದಲ್ಲಿ ಅವರ ನಂಬಿಕೆ. ನನಗೆ ಭಾರತಕ್ಕೆ ಅದರ ಪ್ರಯೋಜನದ ಬಗೆಗೆ ಶಂಕೆ ಇದೆ. ವರ್ಗಸಂಘರ್ಷ ಕೊನೆಗೆ ಅನಿವಾರ್ಯವೆಂದು ಅವರ ನಂಬಿಕೆ, ಸಾಧ್ಯವಿದ್ದರೆ ಅದನ್ನು ತಡೆಗಟ್ಟಲು ಅವರು ಬಯಸಿದರೂ ಸಹ. ನಾನಾದರೋ ಜಮೀನುದಾರರನ್ನೂ ಮತ್ತು ಇತರ ಬಂಡವಾಳಗಾರರನ್ನೂ ಅಹಿಂಸಾತ್ಮಕವಾಗಿ ಪರಿವರ್ತಿಸಬಯಸುತ್ತೇನೆ. ಆದಕಾರಣ ವರ್ಗಸಂಘರ್ಷದ ಅನಿವಾರ್ಯತೆ ಎಂಬುದು ಯಾವುದೂ ಇಲ್ಲ. ಏಕೆಂದರೆ ಆದಷ್ಟು ಕಡಿಮೆ ಪ್ರತಿಭಟನೆಯ ಹಾದಿಹಿಡಿಯುವುದೇ ಅಹಿಂಸೆಯ ಪ್ರಧಾನ ಅಂಶ. ಮಣ್ಣಿನ ಮಕ್ಕಳು ತಮ್ಮ ಶಕ್ತಿಯನ್ನು ಅರಿತುಕೊಂಡ ಕ್ಷಣವೇ ಜಮೀನುದಾರಿಯ ಪೌರುಷ ಹರಣವಾಗಿಹೋದೀತು. ತಮ್ಮ ಹಾಗೂ ತಮ್ಮ ಮಕ್ಕಳ ಊಟ, ಬಟ್ಟೆ ಹಾಗೂ ಶಿಕ್ಷಣಕ್ಕೆ ಯೋಗ್ಯ ರೀತಿಯಲ್ಲಿ ನಾಕಷ್ಟು ಸಿಗದಿದ್ದರೆ ತಾವು ಬೇಸಾಯ ಮಾಡೆವು—ಎಂದು ಹೇಳಿಬಿಟ್ಟರೆ ಆ ಬಡ ಜಮೀನುದಾರ ಏನು ಮಾಡಿಯಾನು, ಪಾಪ? ನಿಜವಾಗಿ ನೋಡಿದರೆ ದುಡಿಮೆಗಾರನೇ ಅವನ ಉತ್ಪಾದನೆಯ ಒಡೆಯ. ದುಡಿಮೆಗಾರರು ಬುದ್ಧಿವಂತಿಕೆಯಿಂದ ಒಟ್ಟಾಗಿ ಬಿಟ್ಟರೆ ಅಪ್ರತಿಹತಶಕ್ತಿಯಾದಾರು. ವರ್ಗಸಂಘರ್ಷ ಅನಿವಾರ್ಯವಲ್ಲ ಎಂದು ನಾನು ಹೇಳುವುದು ಹೀಗೆ. ಅದು ಅನಿವಾರ್ಯ ಎಂದು ನಾನು ಭಾವಿಸಿದುದೇ ಆದರೆ ಅದನ್ನು ಪ್ರಸಾರಮಾಡಲು, ಬೋಧಿಸಲು ನನಗೆಂಥ ಹಿಂಜರಿಕೆ?"೭೯

"ಜಮೀನುದಾರಿ ಪದ್ಧತಿಯನ್ನು ತಿದ್ದಬೇಕೇ ತೊಡೆಯಬೇಕೇ ಎಂಬುದರ ಮೇಲೆ ನಿಂತಿದೆ ನಿಮ್ಮ-ನನ್ನ ಅಭಿಪ್ರಾಯಭೇದ. ತಿದ್ದೋಣ ಎನ್ನುತ್ತೇನೆ ನಾನು. ತಿದ್ದುವುದು ಸಾಧ್ಯವಿಲ್ಲವಾದರೆ ತನ್ನಷ್ಟಕ್ಕೆ ತಾನೇ ಅದು ತೊಡೆದು ಹೋದೀತು. ಆದರೆ ಅದನ್ನು ತಿದ್ದುವುದೇ ಸಾಧ್ಯವಿಲ್ಲ—ಎನ್ನುತ್ತೀರಿ ನೀವು." ಸಮಾಜವಾದೀ ವಿಚಾರಸರಣಿಗೂ ಸತ್ಯಾಗ್ರಹೀ ವಿಚಾರಸರಣಿಗೂ ಇರುವ ವ್ಯತ್ಯಾಸವನ್ನು ಹೀಗೆ ತಾತ್ಪರ್ಯ ಮಾಡಿ ಮಂಡಿಸಿದರು ಕಲ್ಕತ್ತೆಯ

ಕಾಂಗ್ರೆಸ್ಸಿಗರ ಅನೌಪಚಾರಿಕ ಸಭೆಯ ಮುಂದೆ ಗಾಂಧೀಜೀ. ಈ ವಿಷಯವಾಗಿ ಉದ್ಭವಿಸುವ ಅನೇಕ ಪ್ರಶ್ನೆಗಳ ಮೂಲದಲ್ಲಿ ಈ ಆಧಾರಭೂತ ಅಂತರವಿದೆ. ಆದುದರಿಂದ ಅಂಥ ಪ್ರಶ್ನೆಗಳ ಉತ್ತರಗಳಲ್ಲಿ ಉತ್ತರ ಕೊಡುವವರ ಸಿದ್ಧಾಂತ ಸಹಜವಾಗಿ ಮೂಡಿಬರುತ್ತದೆ. ಎಷ್ಟೋ ಜನರನ್ನು ಕಾಡುವ ಪ್ರಶ್ನೆ ಇದೊಂದು :

"ಜಮೀನುದಾರ ಸಾಹುಕಾರರು ನೌಕರಶಾಹಿಯ ಕೈವಾರಿಗಳು. ಅವರು ಎಂದೂ ಅವರ ಕಡೆಗೇ ಇದ್ದಾರೆ. ನಮ್ಮ ಪ್ರಗತಿ–ಸ್ವಾತಂತ್ರ್ಯಗಳಿಗೆ ಅವರು ಎಂದೂ ಅಡ್ಡಿಯೇ. ಈ ಅಡ್ಡಿಯನ್ನೇಕೆ ನಾವು ನಿವಾರಿಸಬಾರದು ?"

ಇದಕ್ಕೆ ಗಾಂಧೀಜೀಯ ಸಿದ್ಧಾಂತಗರ್ಭಿತ ಅರ್ಥ ಇದು : "ಹೌದು, ನಿಜಕ್ಕೂ ಅವರು ನೌಕರಶಾಹಿಯ ಅಂಗವೇ. ಆದಗೆ ಅವರು ಆದರ ಅಸಹಾಯಕ ಕೈವಾರಿಗಳು, ಅಷ್ಟೆ. ಎಂದೆಂದಿಗೂ ಅವರು ಹಾಗೆಯೇ ಉಳಿಯಬೇಕೇ ? ಅವರನ್ನು ನಮ್ಮಿಂದ ದೂರಗೊಳಿಸಲು ನಾವು ಏನೂ ಮಾಡದಿರಬಹುದು. ಅವರು ತಮ್ಮ ತಾಟಸ್ಥ್ಯವನ್ನು ಬದಲಾಯಿಸಿಕೊಂಡರೆ ಅವರ ಸೇವೆಯನ್ನು ರಾಷ್ಟ್ರಕ್ಕೆ ಉಪಯೋಗಿಸಿಕೊಳ್ಳಬಹುದು. ಅವರು ಪರಿವರ್ತನೆಯಾಗದಿದ್ದರೆ ಸ್ವಾಭಾವಿಕವಾದ ಸಾವೇ ಬಂದೀತು ಅವರಿಗೆ. ನಮ್ಮಲ್ಲಿ ಅಹಿಂಸೆ ಇದ್ದುದಾದರೆ ನಾವು ಅವರನ್ನು ಅಂಜಿಸೆವು."

**ಪ್ರಶ್ನೆ**—ಜಮೀನುದಾರೀ ಪದ್ಧತಿ ಕಾಲವಿರೋಧ ಅಸಂಗತಿ, ಆದುದರಿಂದ ಹೋಗಬೇಕು, ಅಹಿಂಸಾತ್ಮಕವಾಗಿಯೇ—ಎಂದೇಕೆ ಹೇಳಬಾರದು ?

**ಉತ್ತರ**—ನಿಜ, ಹೇಳಬಹುದು. 'ಹೇಳಲೇ ಬೇಕೇ'—ಎಂಬುದು ಪ್ರಶ್ನೆ. ಜಮೀನುದಾರರನ್ನು ಕುರಿತು : "ಇವೆಲ್ಲ ನಿಮ್ಮ ದೋಷಗಳು, ಅವನ್ನು ತಿದ್ದಿಕೊಳ್ಳಿ" ಎಂದೇಕೆ ನಾವು ಹೇಳಬಾರದು ? ಇದಕ್ಕೆ ಮಾನವಸ್ವಭಾವದಲ್ಲಿ ನಂಬಿಕೆ ಇರಬೇಕು ಎಂದು ಒಪ್ಪಿಕೊಳ್ಳುತ್ತೇನೆ.

**ಪ್ರಶ್ನೆ** — ಕಾಯಂ ಸೆಟಲ್‌ಮೆಂಟ್ ಪದ್ಧತಿ ಹಾಗೆಯೇ ಉಳಿಯಬೇಕೆನ್ನುವಿರಾ ?

**ಉತ್ತರ**—ಇಲ್ಲ, ಹೋಗಲೇಬೇಕು. ತಮ್ಮ ಇಂದಿನ ಸ್ಥಿತಿಗತಿಯ ಕಾರಣ, ಅದನ್ನು ಸುಧಾರಿಸುವ ಬಗೆ ಕುರಿತು ರೈತರಿಗೆ ಶಿಕ್ಷಣ ಕೊಡುವುದ

ರಿಂದಲೇ ಅವರನ್ನು ಸುಖಿಗಳನ್ನಾಗಿಯೂ ಸಮೃದ್ಧರನ್ನಾಗಿಯೂ ಮಾಡಬಹುದು. ಅಹಿಂಸೆಯದೋ ಅಥವಾ ಹಿಂಸೆಯದೋ ಯಾವುದೋ ಹಾದಿಯನ್ನು ನಾವು ಅವರಿಗೆ ತೋರಿಸಬಹುದು. ಹಿಂಸೆಯ ಹಾದಿ ಆಕರ್ಷಕವಾಗಿ ಕಾಣಬಹುದು, ಆದರೆ ಅಂತಿಮವಾಗಿ ಸರ್ವನಾಶದ ಹಾದಿ ಅದು.

**ಪ್ರಶ್ನೆ**—ಉಳುವವನಿಗೇ ಭೂಮಿ ಸೇರಬೇಕೆಂಬುದನ್ನು ನೀವು ಒಪ್ಪುವುದಿಲ್ಲವೇ ?

**ಉತ್ತರ**—ಖಂಡಿತ ಒಪ್ಪುತ್ತೇನೆ. ಜಮೀನುದಾರನನ್ನು ತೊಡೆದು ಹಾಕಿಬಿಡಬೇಕೆಂದು ಅದರ ಅರ್ಥವಲ್ಲ. ಕೈಕಾಲುಗಳಿಂದ ದುಡಿಯುವವನಷ್ಟೇ ಬುದ್ಧಿಸಾಹಸಗಳನ್ನು ನೀಡುವವನೂ ಬೇಸಾಯಗಾರನೇ. ಅವರಿಬ್ಬರ ನಡುವೆ ಇಂದು ಇರುವ ಭಯಂಕರ ಅಸಮಾನತೆಯನ್ನು ನಿವಾರಿಸುವುದೇ ನಮ್ಮ ಉದ್ದೇಶ್ಯವಾಗಬೇಕು.

**ಪ್ರಶ್ನೆ**—ಆದರೆ ಈ ಸುಧಾರಣೆಯ ಕ್ರಮ ಸುದೀರ್ಘವಾದೀತು.

**ಉತ್ತರ**—ಅತಿ ದೀರ್ಘವೆಂದು ತೋರುವ ವಿಧಾನವೇ ಎಷ್ಟೋ ವೇಳೆ ಅತಿ ಶೀಘ್ರಕ್ರಮ.

**ಪ್ರಶ್ನೆ**—ಉಳುಮೆಗಾರರಿಗೇ ಭೂಮಿಯನ್ನು ಹಂಚಿಬಿಡಬಾರದೇಕೆ ?

**ಉತ್ತರ**—ಇದು ಅವಸರದ ವಿಚಾರ. ಭೂಮಿ ಇಂದು ಅವರ ಕೈಲೇ ಇದೆ. ಅವರಿಗೆ ಅವರ ಹಕ್ಕುಗಳ ಅರಿವೂ ಇಲ್ಲ, ಅವನ್ನು ಚಲಾಯಿಸುವುದನ್ನೂ ಅರಿಯರು. ಭೂಮಿಯನ್ನೂ ಬಿಡಬೇಡಿ, ಜಮೀನುದಾರರಿಗೆ ಕೊಡಬೇಕಾದುದನ್ನೂ ಕೊಡಬೇಡಿ ಎಂದು ಅವರಿಗೆ ಹೇಳಿದ ಮಾತ್ರಕ್ಕೇ ಅವರ ಸಂಕಟ ನಿವಾರಣೆಯಾದೀತೇ ? ಆಗಲೂ ಬೇಕಾದಷ್ಟು ಮಾಡಬೇಕಾದುದು ಉಳಿದೀತು. ಅವನ್ನೆಲ್ಲ ಈಗ ಕೈಗೊಳ್ಳಬೇಕು ಉಳಿದುದು ಕತ್ತಲ ಹಿಂದೆ ಬೆಳಕು ಬರುವಂತೆ ಬಂದಾವು.[೮೦]

ಒಬ್ಬ ಭೂಮಾಲಿಕ ತನ್ನ ರೈತರನ್ನು ಶೋಷಿಸುತ್ತಾನೆ, ಅವರ ದುಡಿತದ ಫಲವನ್ನು ಕಸಿದು ತನಗಾಗಿ ಇಟ್ಟುಕೊಳ್ಳುತ್ತಾನೆ. ಅವನೊಡನೆ ಚರ್ಚೆ ಮಾಡಿದರೆ ಕೇಳ. ತನ್ನ ಹೆಂಡತಿಗೆ ಇಷ್ಟು, ತನ್ನ ಮಕ್ಕಳಿಗೆ ಇಷ್ಟು ಎಂದೆಲ್ಲ

ತಕರಾರು ಮಾಡುತ್ತಾನೆ. ರೈತರು ಅಥವಾ ಅವರ ಪಕ್ಷಪಾತಿಗಳು, ಪ್ರಭಾವ ಶೀಲರು ಆತನ ಹೆಂಡತಿಗೆ ಬಿನ್ನವಿಸಿಕೊಂಡು ಆಕೆಯು ಗಂಡನೊಂದಿಗೆ ಚರ್ಚೆ ಮಾಡಲು ಹೇಳುತ್ತಾರೆ—ಎಂದು ಭಾವಿಸಿ. ಆಕೆ ತನ್ನಮಟ್ಟಿಗೆ ತನಗೆ ಈ ಸುಲಿಗೆಯ ಹಣ ಬೇಡವೆನ್ನಬಹುದು. ಆತನ ಮಕ್ಕಳೂ ತಮಗೆ ಬೇಕಾದು ದನ್ನು ತಾವೇ ಗಳಿಸಿಕೊಳ್ಳುವೆವೆಂದು ಹೇಳಿ ತಮಗೂ ಆ ಹಣ ಬೇಡವೆನ್ನ ಬಹುದು.

ಹಾಗೂ ಆತ ಯಾರ ಮಾತನ್ನೂ ಕೇಳಲಿಲ್ಲ. ಅಥವಾ ಆತನ ಹೆಂಡತಿ ಮಕ್ಕಳೂ ರೈತರ ವಿರುದ್ಧ ಆತನೊಟ್ಟಿಗೆ ಒಂದಾದರೆನ್ನಿ. ಆಗ ರೈತರು ಮಣಿಯ ತಕ್ಕದ್ದಲ್ಲ. ಭೂಮಿ ಬಿಡಿ ಎಂದು ಕೇಳಿದರೆ ಬಿಟ್ಟಾರು. ಆದರೆ ಭೂಮಿ ಉಳುವವನಿಗೇ ಸೇರಿದ್ದೆಂದು ಸ್ಪಷ್ಟಪಡಿಸಿಯಾರು ಮಾಲಿಕ ಎಲ್ಲ ಭೂಮಿ ಯನ್ನೂ ತಾನೇ ಬೇಸಾಯಮಾಡಲಾರ. ರೈತರ ನ್ಯಾಯವಾದ ಬೇಡಿಕೆಗಳಿಗೆ ಮಣಿಯಬೇಕಾದೀತು. ಬಿಡಿಸಿದ ರೈತರ ಬದಲು ಬೇರೆ ರೈತರಿಗೆ ಭೂಮಿ ಕೊಡಲೂ ಬಹುದು. ಹೊಸದಾಗಿ ಬಂದ ರೈತರು ತಮ್ಮ ತಪ್ಪನ್ನು ಮನಗಂಡು ನೊಂದ ರೈತರೊಡನೆ ಒಂದುಗೂಡುವ ತನಕ ಹಿಂಸಾರಹಿತ ಚಳುವಳಿ ಮುಂದು ವರಿಯಬೇಕು. ಹೀಗೆ ಸತ್ಯಾಗ್ರಹ ಲೋಕಮತವನ್ನು ರೂಪಿಸುವ ಒಂದು ಕ್ರಮ. ಸಮಾಜದ ಎಲ್ಲ ಭಾಗಗಳನ್ನೂ ಅದು ಆವರಿಸುವಂಥದು. ಕೊನೆಗೆ ಅದು ಅಪ್ರತಿಪತವಾಗುತ್ತದೆ. ಹಿಂಸೆ ಈ ವಿಧಾನಕ್ಕೆ ಭಂಗ ತರುತ್ತದೆ. ಸಮಾಜ ವ್ಯವಸ್ಥೆಯಲ್ಲಿ ನಿಜವಾದ ಕ್ರಾಂತಿ ತರುವುದನ್ನು ವಿಲಂಬಗೊಳಿಸುತ್ತದೆ.

ಸತ್ಯಾಗ್ರಹದ ಸಫಲತೆಗೆ ಅಗತ್ಯವಾದ ಷರತ್ತುಗಳು ಇವು :

೧. ಇದಿರಾಳಿಯ ವಿಷಯದಲ್ಲಿ ಸತ್ಯಾಗ್ರಹಿಯ ಹೃದಯದಲ್ಲಿ ಯಾವ ದ್ವೇಷವೂ ಇರಬಾರದು ;

೨. ಪ್ರಶ್ನೆ ನಿಜವಾದುದು, ಪ್ರಬಲವಾದುದು ಆಗಿರಬೇಕು ;

೩. ಕಡೆತನಕ ಕಷ್ಟ ಅನುಭವಿಸಲು ಸತ್ಯಾಗ್ರಹಿ ಸಿದ್ಧನಿರಬೇಕು ೮೧

# ಕಿಸಾನ್ – ರೈತ

ಕಿಸಾನ್ ಅಥವಾ ರೈತ, ಭೂಮಿಹೀನ ಕೂಲಿಗಾರನಾಗಿರಲಿ ಅಥವಾ ಉಳುಮೆಗಾರ ಒಡೆಯನಾಗಿರಲಿ—ಅವನಿಗೆ ಪ್ರಥಮ ಸ್ಥಾನ. ಅವನೇ ಅವನ ಭೂಮಿಯ ಉಪ್ಪು, ಸಾರ. ಆ ನೆಲ ನ್ಯಾಯವಾಗಿ ಅವನದೇ ಅಥವಾ ಅವನಿಗೇ ಸಲ್ಲಬೇಕು, ದೂರದ ಒಡೆಯನಿಗಲ್ಲ, ಜಮೀನುದಾರನಿಗಲ್ಲ. ಆದರೆ ಅಹಿಂಸಾ ವಿಧಾನದಲ್ಲಿ ದುಡಿಮೆಗಾರ ದೂರದ ವಿರಾಮಜೀವಿ ಒಡೆಯನನ್ನು ಬಲಾತ್ಕಾರ ವಾಗಿ ಓಡಿಸುವಂತಿಲ್ಲ. ತನ್ನನ್ನು ಶೋಷಿಸಲು ಸಾಧ್ಯವೇ ಆಗದಂಥ ಪರಿಸ್ಥಿತಿ ಒಡೆಯನಿಗೆ ಉಂಟುಮಾಡಬೇಕು. ಇದಕ್ಕೆ ರೈತರಲ್ಲಿ ಅತ್ಯಂತ ನಿಕಟ ಸಹಕಾರ ಅತ್ಯವಶ್ಯ. ಇದಕ್ಕಾಗಿ ವಿಶೇಷವಾಗಿ ವ್ಯವಸ್ಥಾ ಸಮಿತಿಗಳನ್ನು ಇಲ್ಲದಿರುವೆಡೆ ರಚಿಸಬೇಕು. ಹಳೆಯವು ಇದ್ದರೆ ಆವಶ್ಯಕವಿದ್ದರೆ ಪುನರ್ವ್ಯವಸ್ಥೆಗೊಳಿಸಬೇಕು. ಬಹುಪಾಲು ರೈತರು ಅನಕ್ಷರಸ್ಥರು. ಪ್ರೌಢರಿಗೂ, ಶಾಲೆಯ ವಯಸ್ಸಿನ ಮಕ್ಕಳಿಗೂ ಶಿಕ್ಷಣ ಕೊಡಬೇಕಾದೀತು. ಗಂಡಸರಿಗೂ ಹೆಂಗಸರಿಗೂ —ಭೂಮಿಹೀನ ಕೂಲಿಗಾರರಾಗಿದ್ದಲ್ಲಿ ಸಮವಾದ ಊಟ, ಆರೋಗ್ಯಕ್ಕೆ ಯೋಗ್ಯವಾದ ವಸತಿ, ವಸ್ತ್ರಗಳುಳ್ಳ ಯೋಗ್ಯ ಜೀವನ ಕೊಡುವಂಥ ವೇತನ ಪ್ರಮಾಣದ ಭರವಸೆ ಇರಬೇಕು.

ಭೂಶಾಸನಗಳನ್ನು ಪರಿಶೀಲಿಸಬೇಕು. ರೈತರ ಋಣಸ್ಥಿತಿ ಪರಿಶೋಧನೆಗೆ ಅಪಾರ ಕ್ಷೇತ್ರ. ಪಶುವಿನ ಸಮಸ್ಯೆಯೂ ಭಾರತದ ಬೇನಾಯದ ಅಖಂಡ ಅಂಗವೇ. ಅಂತಲೇ ಈ ಜಟಿಲ, ಭ್ರಾಮಕ ಸಮಸ್ಯೆಯತ್ತ ಕುಶಲ ಕಾರ್ಯ ಕರ್ತರ ಗಮನ ಅತ್ಯಗತ್ಯ.೮೨

### ಅಧ್ಯಾಯ – ೭

# ಗೋ ೀ ಸೇ ೀ ವೆ

## ಗೋವನ್ನು ಉಳಿಸುವುದು ಹೇಗೆ?

ಗೋಸೇವಾಸಂಸ್ಥೆಗಳು ದನಕರುಗಳ ಮೇವು, ಅವುಗಳ ಪೀಡನೆಯ ನಿವಾರಣೆ, ನಿರ್ನಾಮವಾಗಿ ಹೋಗುತ್ತಿರುವ ಹುಲ್ಲುಗಾವಲಿನ ಸಂರಕ್ಷಣೆ, ತಳಿಯ ಅಭಿವೃದ್ಧಿ, ಬಡ ಕುರುಬರಿಂದ ಕೊಳ್ಳುವುದು ಹಾಗೂ ಪಿಂಜರಾ ಪೋಲುಗಳನ್ನು ಮಾದರಿ ಸ್ವಾವಲಂಬಿ ಗೋಶಾಲೆಗಳಾಗಿ ಪರಿವರ್ತಿಸುವುದು —ಇವುಗಳತ್ತ ತಮ್ಮ ಲಕ್ಷ್ಯ ಹೊರಳಿಸಬೇಕು ೮೩

ಶ್ರೀ ಆಂಡ್ರ್ಯೂಸರು ಪತ್ರಿಕೆಯ ತುಣುಕೊಂದನ್ನು ಕಳುಹಿಸಿದಾರೆ:

ಬ್ರಿಟಿಷ್ ಕಾಮನ್‌ವೆಲ್ತಿನ ರಾಜಕೀಯ ವಿಮರ್ಶಾ ಪತ್ರಿಕೆಯಾದ 'ರೌಂಡ್‌ಟೇಬಲ್'ನ ಜೂನ್ ಸಂಚಿಕೆ "ಒಂದು ಪ್ರಾಣಿಮಾತ್ರದ ಪೂಜೆಗಾಗಿ ಜಗತ್ತಿನ ಮತ್ತಾವ ದೇಶ ಈ ಭೀಕರ ಬೆಲೆ ತೆತ್ತೀತು?"—ಎಂದು ಕೇಳುತ್ತದೆ. 'ಬ್ರಿಟಿಷ್ ಭಾರತದ ಒಟ್ಟು ಆದಾಯಕ್ಕಿಂತ ವಾರ್ಷಿಕ ಆರ್ಥಿಕ ನಷ್ಟ ಹೆಚ್ಚು' ಎಂದು ತೋರಿಸುವ 'ಗ್ರಾಮಭಾರತದ ದೋಷಗಳು' ಎಂಬ ಅಂಕಿತದ ಲೇಖನದಲ್ಲಿ ಅಂಕಿ–ಅಂಶಗಳನ್ನೂ ಒದಗಿಸಲಾಗಿದೆ. 'ಎಲ್ಲ ಬಗೆಯ ಪ್ರಾಣಿ ವರ್ಗದ ಬಗೆಗೆ ಇರುವ ಆದರವೇ ಅಲ್ಲದೆ, ಪೂಜ್ಯಭಾವನೆಯ ದೆಸೆಯಿಂದಾಗಿ ಅವುಗಳ ಸಂಖ್ಯೆ ಹೆಚ್ಚುವುದನ್ನು ತಡೆಯುವಂತೆಯೇ ಇಲ್ಲ. ಭೂಮಿಯ ಉತ್ಪನ್ನವನ್ನು ಬಳಸಿಕೊಳ್ಳಲು ಆ ಪ್ರಾಣಿಗಳು ಪೈಪೋಟಿ ಹೂಡಿದರೂ ಹೀಗೆಯೇ. ಭೂಮಿಯ ಉತ್ಪನ್ನವನ್ನು ಪೂರಾ ಅಭಿವೃದ್ಧಿಗೊಳಿಸಲು ಅವು ಅಡ್ಡಿಯಾದರೂ ಪರಿವೆ ಇಲ್ಲ' ಎಂಬ ಮಾತು ಹೇಳಿ ಆ ಲೇಖನ ಭಾರತ ಗೋವನ್ನು ಪೂಜಿಸುತ್ತಿರುವುದಕ್ಕಾಗಿ ತೆರುತ್ತಿರುವ 'ಎದೆನಡುಗಿಸುವಂಥ ಬೆಲೆ'ಯನ್ನು ಸೂಚಿಸುವ ಈ ಅಂಕಿ–ಸಂಖ್ಯೆಗಳನ್ನೂ ನೀಡುತ್ತದೆ:

| | | |
|---|---|---|
| ಹೆಚ್ಚುವರಿ ಎತ್ತುಗಳಿಂದ ಭಾರತಕ್ಕಾಗುವ ವೆಚ್ಚ | ....ರೂ. | ೧,೧೫,೨೦,೦೦,೦೦೦ |
| ಹೆಚ್ಚುವರಿ ಹಸುಗಳಿಂದ ಭಾರತಕ್ಕಾಗುವ ವೆಚ್ಚ | ....ರೂ. | ೬೧,೨೦,೦೦,೦೦೦ |
| ಒಟ್ಟು | ರೂ. | ೧,೭೬,೪೦,೦೦,೦೦೦ |

" ೧೫ ರೂ.ಗಳಿಗೆ ಒಂದು ಪೌಂಡಿನಂತೆ ಲೆಕ್ಕ ಹಿಡಿದರೆ ಈ ಹಣ ೧೧೭,೬೦೦,೦೦೦ ಪೌಂಡುಗಳಷ್ಟಾಗುತ್ತದೆ. ಬ್ರಿಟಿಷ್ ಭಾರತದ ಭೂಕಂದಾಯ ವರ್ಷಕ್ಕೆ ೩೬ ಕೋಟಿ ರೂಪಾಯಿಗಳು ಎಂದು ಹೇಳಲಾಗುತ್ತದೆ. ಅಂದರೆ ಹೆಚ್ಚುವರಿ ಗೋಸಂಪತ್ತಿನಿಂದ ವರ್ಷಕ್ಕೆ ಆಗುವ ನಷ್ಟ ಭೂಕಂದಾಯಕ್ಕೆ ನಾಲ್ಕು ಪಟ್ಟಿಗೂ ಮೀರಿದೆ."

ಹೆಚ್ಚುತ್ತಿರುವ ಭಾರತದ ಬಡತನದಂತೆಯೇ ಅದರ ದನಕರುಗಳ ಸಮಸ್ಯೆಯೂ ಹೆಚ್ಚು ಹೆಚ್ಚು ಉಗ್ರವಾಗುತ್ತಿದೆ, ನಿಸ್ಸಂಶಯ. ಆದರೆ ಭಾರತದ ದನಕರುಗಳ ಸಮಸ್ಯೆ ಅದರ ಬಹುಮಂದಿ ಜನಸ್ತೋಮವಾದ ಹಿಂದೂಗಳಿಗೆ ವ್ಯಾಪಕ ಅರ್ಥದಲ್ಲಿ ಗೋರಕ್ಷಣೆಯ ಸಮಸ್ಯೆ. ಆದಕಾರಣ ಈ ' ಎದೆ ನಡುಗಿಸುವಂಥ ಬೆಲೆ 'ಯನ್ನು ನಾವು ಸದಾ ತೆರುತ್ತಲೇ ಇರಬೇಕೆಂಬುದರಲ್ಲಿ ಸಂಶಯವಿಲ್ಲ. ' ಗೋವಿನ ಪೂಜ್ಯತೆ ' ನಮ್ಮಲ್ಲಿ ಇಲ್ಲದಿದ್ದರೆ ಕೆಲಸ ಸುಲಭ, ಹೆಚ್ಚುವರಿಯಾದ ಮುದಿಯಾದ ದನಕರುಗಳನ್ನು ಕೊಂದು ಲೇಖಕ ತೋರಿಸಿ ಕೊಟ್ಟಿರುವ ೧೭೬೪ ದಶಲಕ್ಷ ರೂಪಾಯಿಗಳನ್ನು ಉಳಿಸಿಕೊಳ್ಳಬಹುದು. ಹಾಗೆಯೇ ಹೆಚ್ಚುವರಿ ಜನರನ್ನೂ, ರೋಗಿಗಳು ದುರ್ಬಲರನ್ನೂ ಕೊಂದು ಹಾಕಿ ನಮ್ಮ ನಾಡನ್ನು ದಾರಿದ್ರ್ಯವಿಮುಕ್ತ ಮಾಡಬಹುದು. ಪಿಸ್ತೂಲನ್ನೋ ಅಥವಾ ಅದಕ್ಕೂ ದಕ್ಷವಾದ ಮಾರಕಶಸ್ತ್ರ ಹಿಡಿದು ಈ ವಿಶಾಲ ಭೂಮಂಡಲದ ಮೇಲೆ ನಾವು ಕೆಲವಾರು ಸಾವಿರ ಮಂದಿ ಮಾತ್ರ ಜೀವಿಸಿರಬಹುದು, ನಮಗೆ ಹೊರೆಯೆನಿಸುವ ದುಷ್ಟ ಅಥವಾ ಸಾಧು ಪ್ರಾಣಿಗಳನ್ನೂ, ಮನುಷ್ಯರನ್ನೂ ತೊಡೆಯುತ್ತ ಹೋಗಬಹುದು. ಆದರೆ ಭಾರತದಲ್ಲಿ ಎಲ್ಲೆಡೆ ಇರುವ ಬಡವರು, ರೋಗಪೀಡಿತರಂತೆಯೇ ನಮ್ಮ ಸೋದರರಾದ ದನಕರುಗಳನ್ನೂ ಇಟ್ಟುಕೊಳ್ಳ ಬೇಕಾದೀತು, ದನಕರುಗಳ ಸಮಸ್ಯೆಯನ್ನೂ ನಮ್ಮ ಬಡತನದ ಸಮಸ್ಯೆ ಯಂತೆಯೇ ಕೆಲವರೆನ್ನುವಂತೆ ಕುರುಡುನಂಬಿಕೆಯ ಕ್ರಮದಲ್ಲಿಯೇ ಬಗೆಹರಿಸಿ ಕೊಳ್ಳಬೇಕಾದೀತು. ಧಾರ್ಮಿಕ ವಿಧಿಗಳ ಆವರಣದಲ್ಲಿಯೇ ಅತ್ಯಾಧುನಿಕ ಶಾಸ್ತ್ರೀಯ ಮಾರ್ಗಗಳನ್ನೂ ಅಳವಡಿಸಿಕೊಳ್ಳಬೇಕು. ಶಾಸ್ತ್ರೀಯವಾಗಿ ಹಿಡಮಾಡುವ ಕ್ರಮ ಅನುಸರಿಸಬೇಕು, ದನಕರುಗಳನ್ನು ಮೇಯಿಸುವ ಆರ್ಥಿಕ ಕ್ರಮ ಹುಡುಕಬೇಕು, ಪಶುಗಳ ಕ್ಷೇಮಸಾಧನೆ ಮಾಡುತ್ತ ಆದಷ್ಟು ಹೆಚ್ಚು ಪ್ರಯೋಜನವನ್ನೂ ಅವುಗಳಿಂದ ಪಡೆಯಬೇಕು, ಈಗಿನ ಆಕಳುಗಳು

ಎಮ್ಮೆಗಳು ಕೊಡುವ ಹಾಲನ್ನು ಹೆಚ್ಚಿಸಬೇಕು. ಸತ್ತ ದನಕರುಗಳ ಚರ್ಮಗಳನ್ನು ಅತ್ಯಂತ ಆರ್ಥಿಕವಾಗಿ ಉಪಯೋಗಿಸಿಕೊಳ್ಳಬೇಕು. ಇದನ್ನೆಲ್ಲ ಯಶಸ್ವಿಯಾಗಿ ಮಾಡಿದುದಾದರೆ ಪಶುಗಳ ಸಮಸ್ಯೆಯ ಪರಿಹಾರ ಕಾರ್ಯದಲ್ಲಿ ಬಹುದೂರ ಸಾಗಿದಂತೆ ಆದೀತು.

ಇಷ್ಟಾದಮೇಲೂ ಧಾರ್ಮಿಕ ಭಾವನೆಗೂ ಒಂದು ಬೆಲೆ ತೆರಬೇಕಾದೀತು, ಆದರೆ ಅಂಥ ಬೆಲೆಗೆ ಯೋಗ್ಯವಾಗಿಲ್ಲದುದಾದರೆ ಧಾರ್ಮಿಕ ಭಾವನೆ ಎಂಬ ಹೆಸರೇ ಅದಕ್ಕೆ ಸಲ್ಲದು. ಈಗ ದಿನವೂ ಗೋರಕ್ಷಣೆಗಾಗಿ ಕಣ್ಣುಮುಚ್ಚಿ, ಶಾಸ್ತ್ರೀಯ ಸತ್ಯಸಂಗತಿಗಳ ಪರಿವೆಯಿಲ್ಲದೆ ಕೊಡುತ್ತಿರುವ ಹಣವನ್ನು ಮೇಲೆ ತಿಳಿಸಿದ ಉದ್ದೇಶ್ಯಗಳಿಗಾಗಿ ಸದುಪಯೋಗಪಡಿಸಬಹುದು. ಅದರಿಂದ ಪ್ರತ್ಯಕ್ಷ ಪ್ರತಿಫಲ ಬಾರದೆ ಹೋದರೂ ಇಂದು ಆಗುತ್ತಿರುವ ಕೆಟ್ಟ ವ್ಯರ್ಥವನ್ನು ತಡೆಗಟ್ಟೀತು, ಸಾವಿರಾರು ಗೋವುಗಳನ್ನು ಕಟುಕನ ಕತ್ತಿಯಿಂದ ಪಾರು ಮಾಡೀತು. ಅಂಥ ವಿಪತ್ತಿಗೆ ಗುರಿಯಾಗಲು ಮುಸ್ಲಿಮರ ಅಥವಾ ಇಂಗ್ಲೀಷರ ಮೊಂಡುತನ ಕಾರಣವಲ್ಲ, ಹಿಂದೂಗಳ ಮೂರ್ಖತನವೇ ಕಾರಣ. ನಮ್ಮ ಅಜ್ಞಾನ–ಆಲಸ್ಯಗಳ ದೆಸೆಯಿಂದ ಲಕ್ಷಾಂತರ ಮಾನವರೂ ಪಶುಗಳೂ ಅರೆ ಉಪವಾಸಬಿದ್ದು ಸಾಯುತ್ತಿದಾರೆ—ಧರ್ಮನಿಷ್ಠ ಭಾರತದ ಎಂಥ ದುಃಖಕರ ವಿಡಂಬನ! ೮೪

ಲಾಭಕರವಾಗುವಷ್ಟು ಪ್ರಮಾಣದಲ್ಲಿ ಹಾಲು ಕೊಡದಾದಾಗ ಅಥವಾ ಇತರ ಬಗೆಯಲ್ಲಿ ಲಾಭಕರವಲ್ಲದ ಹೊರೆಯಾದಾಗ ಆಕಳು ಕೊಲೆಯಾಗದಂತೆ ಅದನ್ನು ಉಳಿಸುವುದು ಹೇಗೆ? ಇದಕ್ಕೆ ಉತ್ತರವನ್ನು ಹೀಗೆ ಹೇಳಬಹುದು :

೧. ಹಿಂದೂಗಳು ಗೋವು ಹಾಗು ಅದರ ಸಂತಾನದ ಬಗೆಗೆ ತಮ್ಮ ಕರ್ತವ್ಯ ನೆರವೇರಿಸುವುದರಿಂದ. ಅವರು ಹಾಗೆ ಮಾಡಿದುದಾದರೆ ನಮ್ಮ ದನಕರುಗಳು ಭಾರತದ ಹಾಗೂ ಜಗತ್ತಿನ ಹೆಮ್ಮೆ ಎನಿಸಿಯಾವು. ಆದರೆ ಇಂದಾದರೋ ತದ್ವಿರುದ್ಧ ಸ್ಥಿತಿ.

೨. ಪಶುಸಂಗೋಪನಶಾಸ್ತ್ರ ಕಲಿಯುವುದರಿಂದ. ಇಂದು ಈ ಕ್ಷೇತ್ರದಲ್ಲಿ ಪೂರಾ ಅರಾಜಕತೆ ಇದೆ.

೩. ಬೀಜ ಒಡೆಯುವ ಇಂದಿನ ಕ್ರೂರ ಪದ್ಧತಿಯ ಬದಲು ಪಶ್ಚಿಮದೇಶಗಳಲ್ಲಿರುವ ಮಾನವೀಯ ಪದ್ಧತಿಯನ್ನು ಅನುಸರಿಸುವುದರಿಂದ.

೪. ಭಾರತದ ಪಿಂಜರಾಪೋಲುಗಳನ್ನು ಪೂರಾ ಸುಧಾರಿಸುವುದರಿಂದ. ಇಂದಾದರೋ ಇವುಗಳ ಮೇಲ್ವಿಚಾರಣೆ ಅಜ್ಞಾನದಿಂದ, ಆ ಕೆಲಸ ಅರಿಯದ ಜನರಿಂದ ನಡೆಯುತ್ತಿದೆ.

೫. ಈ ಪ್ರಾಥಮಿಕ ಕಾರ್ಯಗಳನ್ನು ಮಾಡಿದರೆ ಮುಸ್ಲಿಮರು ತಮ್ಮ ಹಿಂದೂ ಸೋದರರಿಗೋಸ್ಕರವಾಗಿ ಗೋಮಾಂಸ ಅಥವಾ ಇತರ ಉದ್ದೇಶ್ಯಗಳ ಸಲುವಾಗಿ ಗೋಹತ್ಯೆ ಮಾಡದೆ ಇರುವ ಅಗತ್ಯವನ್ನು ತಾವಾಗಿಯೇ ಮನಗಂಡಾರೆಂಬುದು ಅರಿವಾದೀತು.

ಮೇಲೆ ತಿಳಿಸಿದ ಅಗತ್ಯಗಳ ಹಿಂದೆ ಒಂದು ವಿಷಯ ಇರುವುದನ್ನು ಓದುಗ ಕಾಣಬಹುದು—ಅದು **ಅಹಿಂಸೆ** ಅರ್ಥಾತ್ ವಿಶ್ವಾನುಕಂಪ. ಆ ಪರಮ ವಸ್ತುವನ್ನು ಸಾಧಿಸಿದರೆ ಉಳಿದುದೆಲ್ಲ ಸುಲಭ. ಅಹಿಂಸೆ ಇರುವೆಡೆ ಅಪಾರ ಸಹನೆ, ಅಂತಶ್ಶಾಂತಿ, ವಿವೇಕ, ಸ್ವಾರ್ಥತ್ಯಾಗ ಹಾಗೂ ಸಮ್ಯಕ್ ಜ್ಞಾನ ಇರುತ್ತವೆ. ಗೋಪಾಲನೆ ಸುಲಭವಲ್ಲ. ಆ ಹೆಸರಲ್ಲಿ ಬಹಳ ಹಣ ಹಾಳಾಗುತ್ತಿದೆ. ಅಹಿಂಸೆ ಇಲ್ಲದೆ ಗೋರಕ್ಷಕರಾಗುವ ಬದಲು ಹಿಂದೂಗಳು ಅದರ ವಿನಾಶಕರಾಗುತ್ತಿದಾರೆ. ಭಾರತದಿಂದ ವಿದೇಶೀ ಆಳ್ವಿಕೆ ತೊಡೆಯುವುದಕ್ಕಿಂತ ಹೆಚ್ಚು ಕಠಿಣ ಈ ಕೆಲಸ.

[ಟಿಪ್ಪಣಿ: ಭಾರತದಲ್ಲಿ ಒಂದು ಆಕಳು ದಿನವೊಂದಕ್ಕೆ ಸರಾಸರಿ ಕೊಡುವ ಹಾಲು ೨ ಪೌಂಡಿನಷ್ಟು, ನ್ಯೂಜಿಲೆಂಡಿನಲ್ಲಿ ೧೪ ಪೌಂಡುಗಳಷ್ಟು, ಇಂಗ್ಲೆಂಡಿನಲ್ಲಿ ೧೫ ಪೌಂಡುಗಳಷ್ಟು, ಹಾಲೆಂಡಿನಲ್ಲಿ ೨೦ ಪೌಂಡುಗಳಷ್ಟು. ಆರೋಗ್ಯಸೂಚಿಸಂಖ್ಯೆ ಹಾಲಿನ ಉತ್ಪತ್ತಿಪ್ರಮಾಣದ ಹೆಚ್ಚಳವನ್ನು ಅನುಸರಿಸಿ ಮೇಲೆ ಹೋಗುತ್ತದೆ.]೪೫

## ಚರ್ಮಾಲಯಗಳು – ದುಗ್ಧಾಲಯಗಳು

[ಅಖಿಲಭಾರತ ಗೋಸೇವಾಸಂಘದ ಕರಡು ಅಂಗರಚನೆಯನ್ನು ಅನುಮೋದನೆಗೆ ಮಂಡಿಸುತ್ತ ಗಾಂಧೀಜೀ ಮುಂದೆ ಕಂಡ ವಿಚಾರ ವ್ಯಕ್ತಪಡಿಸಿದರು.]

ಈ ಅಂಗರಚನೆಯಲ್ಲಿರುವ ಎರಡು ಮುಖ್ಯ ಸಂಗತಿಗಳತ್ತ ನಿಮ್ಮ ಗಮನ ಸೆಳೆಯಬಯಸುತ್ತೇನೆ. ಅವು: ಚರ್ಮಾಲಯಗಳ, ದುಗ್ಧಾಲಯಗಳ ಸ್ಥಾಪನೆ.

ಇದು ತೀರಾ ವ್ಯಾವಹಾರಿಕ, ತೀರಾ ಲೌಕಿಕ ಎಂದೀರಿ ನೀವು. ಆದರೆ ಲೋಕ ವ್ಯವಹಾರವನ್ನು ಪರಿಗಣಿಸದ, ಅವುಗಳನ್ನು ಪರಿಹರಿಸಲು ನೆರವಾಗದ ಧರ್ಮ ಧರ್ಮವೇ ಅಲ್ಲ. ರಾಜರ್ಷಿ ಜನಕನ ಜೀವನ ನಮಗೆ ಇದನ್ನೇ ಬೋಧಿಸಿತು. ಅಂತಲೇ ಧಾರ್ಮಿಕ ವಿಷಯವೊಂದನ್ನು ವ್ಯಾವಹಾರಿಕ ರೂಪದಲ್ಲಿ ನಿಮ್ಮೆದುರು ನಾ ಇಡುತ್ತಿದೇನೆ.

ಹಾಲಿನ ಪೂರೈಕೆಯು ಮತ್ತು ಸತ್ತ ದನದ ವಿಲೇವಾರಿಯ ಪ್ರಶ್ನೆಗಳು ಎರಡನ್ನೂ ನಾವು ವಹಿಸಿಕೊಳ್ಳಬೇಕಾದೀತು. ಚರ್ಮ, ಚರ್ಮಾಲಯಗಳ ವಿಷಯ ಕುರಿತು ನಾ ಹೇಳುವಾಗ ನೀವು ಬೆಚ್ಚಿಬೀಳಬಹುದು. ನಾವು ಆ ಕೆಲಸವನ್ನು ವಹಿಸಿಕೊಳ್ಳದುದರಿಂದಲೇ ಆ ಕೆಲಸ ಮಾಡುವ 'ಹೊಲೆಯ' ಸತ್ತ ದನದ ಮಾಂಸ ತಿಂದೂ, ಕೊಳಕನಾಗಿದ್ದೂ ತನ್ನನ್ನು ತಾನೇ ಕ್ಷಮಿಸಿ ಕೊಳ್ಳುತ್ತಾನೆಂಬುದು ನಿಮಗೆ ಗೊತ್ತೇ? ಆ ಕೆಲಸಗಳನ್ನು ಸರಿಯಾಗಿ ಮಾಡುವ ಬಗೆಯನ್ನು ಅವನಿಗೆ ತೋರಿಸೋಣ, ಆಗ ಆತ ತನ್ನ ದಾರಿಯನ್ನು ಸುಧಾರಿಸಿಕೊಂಡಾನು. ನಾ ಹೇಳುವುದರ ಪೂರಾ ಅರ್ಥವನ್ನು ಅರಿತೇ ಇವನ್ನು ಸೂಚಿಸುತ್ತಿದೇನೆ. ದಕ್ಷಿಣ ಆಫ್ರಿಕದಲ್ಲಿ ಹಾಲಿನ ಕೊನೆಯ ತೊಟ್ಟನ್ನೂ ಹೇಗೆ ಕ್ರೂರವಾಗಿ ಹಿಂಡುವರೆಂದು ತಿಳಿದ ಬಳಿಕ ಎಂದೆಂದೂ ಆಕಳಿನ ಅಥವಾ ಎಮ್ಮೆ ಹಾಲನ್ನು ತೆಗೆದುಕೊಳ್ಳುವುದಿಲ್ಲವೆಂದು ಪಣ ತೊಟ್ಟವನು ನಾನೇ. ವೈಷ್ಣವರಲ್ಲಿ ಗೋಮಾಂಸಭಕ್ಷಕರಿರುವುದನ್ನೂ ಬಲ್ಲೆ, ವೈದ್ಯರು ವಿಧಿಸಿದ್ದಾರೆ ಎಂದು ಹೇಳಿ ಲೀಜಿಗ್‌ನ ಗೋಮಾಂಸಸಾರವನ್ನು ತೆಗೆದುಕೊಳ್ಳಲು ಹಿಂಜರಿಯದ ವೈಷ್ಣವರಿರುವುದನ್ನೂ ನಾನು ಬಲ್ಲೆ. ಅಂದಮೇಲೆ ಧರ್ಮದೃಷ್ಟಿಯಿಂದ ಚರ್ಮಾಲಯಗಳನ್ನು ನಡೆಸಲು ನಾವು ಹಿಂಜರಿಯಬೇಕೇಕೆ? ಶರೀರದಾರ್ಢ್ಯ ಕಳೆದುಕೊಂಡ ಹಾಗೂ ಸತ್ತುಹೋದ ದನಗಳ ಯೋಗಕ್ಷೇಮ ವಹಿಸಿಕೊಳ್ಳದೆ ಅಮೆರಿಕಕ್ಕೆ ಅವನ್ನು ರಫ್ತು ಮಾಡಿದುದರಿಂದಲೇ ಈ ಸ್ಥಿತಿಗೆ ಬಂದಿದೇವೆ.

ಆದಕಾರಣ ಚರ್ಮಾಲಯಗಳನ್ನು ಸ್ಥಾಪಿಸಿ ಸತ್ತ ದನಗಳ ವಿಲೇವಾರಿಗೆ ಗಮನ ಕೊಡೋಣ. ದುಗ್ಧಾಲಯಗಳನ್ನು ಸ್ಥಾಪಿಸಿ ಅಗ್ಗವಾಗಿ ಉತ್ತಮ ತರವಾಗಿ ಹಾಲನ್ನು ಪೂರೈಸೋಣ. ಈ ವಿಷಯದಲ್ಲಿ ಸರಕಾರದ ಸಹಕಾರ ವನ್ನು ಕೇಳಲೂ ನಾ ಹಿಂಜರಿಯಲಾರೆ. ಏಕೆಂದರೆ ಅವರ ಬಳಿ ಒಳ್ಳೆಯ ಗೋಪಾಲನಾಪ್ರವೀಣರಿದಾರೆ. ಈ ಎರಡು ಕೆಲಸಗಳನ್ನು ಮಾಡಿದರೆ ಮಾತ್ರವೇ

ವರ್ಷವರ್ಷವೂ ನಡೆಯುತ್ತಿರುವ ನಿಲ್ಲಿಸಬಹುದಾದ ಗೋಹತ್ಯೆಯನ್ನು ತಡೆಯುವುದು ಸಾಧ್ಯ.೮೬

ಆದರ್ಶ ಗೋಶಾಲೆ ತಾನು ಇರುವ ನಗರಕ್ಕೆ ತನ್ನ ಶಾಲೆಯಲ್ಲಿರುವ ಆಕಳಿನ ಶುದ್ಧ ಹಾಲನ್ನು ಅಗ್ಗವಾಗಿ ಒದಗಿಸೀತು; ಕೊಲ್ಲಲ್ಪಟ್ಟ ದನದಿಂದಲ್ಲದೆ ಸತ್ತ ದನದ ಚರ್ಮದಿಂದಾದ ಅಗ್ಗವೂ ಬಾಳಿಕೆ ಬರುವಂಥದೂ ಆದ ಪಾದ ರಕ್ಷೆಗಳನ್ನೂ ಪೂರೈಸೀತು. ಅಂಥ ಗೋಶಾಲೆ ನಗರದ ಮಧ್ಯದಲ್ಲಿ ಒಂದೆರಡು ಎಕರೆ ಪ್ರದೇಶದಲ್ಲಿ ಇರದು, ನಗರದ ತೀರಾ ಸಮೀಪದಲ್ಲಿಯೂ ಇರದು. ನಗರಕ್ಕೆ ಸ್ವಲ್ಪ ದೂರವಾಗಿ ಆದರೆ ಸುಲಭವಾಗಿ ಹೋಗಿ ಬರುವಂತೆ ಐವತ್ತು ಅಥವಾ ನೂರು ಎಕರೆ ಪ್ರದೇಶದಲ್ಲಿ ಆಧುನಿಕ ಗೋಶಾಲೆ, ಆಧುನಿಕ ಚರ್ಮಾಲಯಗಳನ್ನು ಕಟ್ಟಿಸಿಟ್ಟಾಗಿ ವ್ಯಾಪಾರೀ ರೀತಿಯಲ್ಲಿ, ಆದರೆ ರಾಷ್ಟ್ರೀಯ ದೃಷ್ಟಿಯಿಂದ ನಡೆಸುವಂಥದಿರಬೇಕು. ಹೀಗೆ ಅದರಿಂದ ಲಾಭ ಪಡೆಯತಕ್ಕದ್ದಲ್ಲ, ಲಾಭ ಹಂಚಿಕೊಳ್ಳುವಂತೆಯೂ ಇಲ್ಲ, ನಷ್ಟವೂ ಆಗತಕ್ಕದ್ದಲ್ಲ. ಅಂತಿಮವಾಗಿ ದೇಶದಾದ್ಯಂತ ಅಲ್ಲಲ್ಲಿ ನೆಲೆಗೊಂಡಿರುವ ಇಂಥ ಸಂಸ್ಥೆಗಳು ಹಿಂದೂ ಧರ್ಮದ ವಿಜಯಸಂಕೇತಗಳಾದಾವು, ಗೋವು ಹಾಗೂ ಅದರ ರಕ್ಷಣೆಯ ಬಗೆಗೆ ಹಿಂದೂಗಳ ಕಾತರಕ್ಕೆ, ಶ್ರದ್ಧೆಗೆ ಸಾಕ್ಷಿಯಾದಾವು. ಸುಶಿಕ್ಷಿತರೂ ಸೇರಿ ಸಾವಿರಾರು ಮಂದಿಗೆ ಚೊಕ್ಕ ಉದ್ಯೋಗ ಇವು ನೀಡಿಯಾವು. ಗೋಶಾಲೆಗೂ ಚರ್ಮಾಲಯಕ್ಕೂ ಶಾಸ್ತ್ರೀಯ ಜ್ಞಾನವುಳ್ಳ ಪ್ರವೀಣರು ಬೇಕೇ ಬೇಕಲ್ಲ. ಅತ್ಯುತ್ತಮ ಗೋಶಾಲೆಯ ಪ್ರಯೋಗಗಳಿಗೆ ಆದರ್ಶ ರಾಷ್ಟ್ರವಾಗಬೇಕಾದುದು ಭಾರತ—ಡೆನ್ಮಾರ್ಕ್ ಅಲ್ಲ. ವರ್ಷ ವರ್ಷವೂ ಅಪಮಾನಕಾರಕವಾಗಿ ಒಂಬತ್ತು ಕೋಟಿ ರೂಪಾಯಿಗಳ ಬೆಲೆಬಾಳುವ ಕೊಲ್ಲಲ್ಪಟ್ಟ ದನದ ಚರ್ಮವನ್ನು ರಫ್ತು ಮಾಡಬೇಕಾಗದು. ಅಂಥ ಪರಿಸ್ಥಿತಿ ಭಾರತಕ್ಕೇ ಅಪಮಾನಕಾರಕವೆಂದರೆ ಹಿಂದೂಗಳಿಗಂತೂ ಮತ್ತೂ ಹೆಚ್ಚು. ಎಲ್ಲ ಗೋಶಾಲಾಸಮಿತಿಗಳೂ ತಮ್ಮ ಗೋಶಾಲೆಗಳನ್ನು ಮಾದರಿ ದುಗ್ಧಾಲಯ ಚರ್ಮಾಲಯಗಳನ್ನಾಗಿಸಿ, ನಿಶ್ಶಕ್ತ ಮುದಿ ದನಗಳಿಗೆ ಆಶ್ರಯಸ್ಥಾನವೂ ಆಗುವಂತೆ ಮಾಡಿಯಾವೆಂದು ಆಶಿಸುತ್ತೇನೆ.೮೭

ಗೆಳೆಯರು ಹಲವರೊಡನೆ ನಡೆಸಿರುವ ಖಾಸಗಿ ಸಂಭಾಷಣೆಗಳಲ್ಲಿ ಈ ಚಳುವಳಿಯಲ್ಲಿ ಆಸಕ್ತಿವಹಿಸಿ ವಿಧಾಯಕವಾಗಿ ನೆರವಾಗುವಂತೆ ಅವರನ್ನು

ಕೇಳಿದೇನೆ. ಅವರ ಅಪೇಕ್ಷೆಯಂತೆ ಅವರಲ್ಲಿ ಕೆಲವರೊಡನೆ ಚರ್ಚಿಸಿರುವ ಯೋಜನೆಯನ್ನು ಪ್ರಕಟಿಸುತ್ತಿದೇನೆ:

೧. ಗೋರಕ್ಷಣೆಯ ಕಾರ್ಯಕ್ರಮ ಅಂಗವಾದ ಚರ್ಮಾಲಯಗಳ ಯುಕ್ತತೆಯನ್ನು ಪರೀಕ್ಷೆ ಮಾಡುವ ಸಲುವಾಗಿ ಒಂದು ಚರ್ಮಾಲಯವನ್ನು ಸ್ಥಾಪಿಸುವುದು. ಲಾಭಕ್ಕಾಗಿ ಅದನ್ನು ನಡೆಸದೆಯೇ ಗೋಪಾಲನೆಯ ಉದ್ದೇಶ್ಯದಿಂದಲೇ ನಡೆಸುವುದು. ಇದಕ್ಕೋಸ್ಕರ ಸದ್ಯದಲ್ಲಿ ನಡೆಯುತ್ತಿರುವ ಚರ್ಮಾಲಯವೊಂದರಲ್ಲಿ ತೊಡಗಿಸಲು ೧,೨೫,೦೦೦ ರೂಪಾಯಿಗಳು ಬೇಕಿದೆ. ನನ್ನ ಬಳಿ ಇರುವ ಸಮಾಚಾರದ ಪ್ರಕಾರ ಈಗಿನ ಚರ್ಮಾಲಯಗಳಲ್ಲಿ ಬಹುಸಂಖ್ಯೆಯವು ಕೊಲ್ಲಲ್ಪಟ್ಟ ದನಗಳ ಚರ್ಮಗಳನ್ನು ಕೊಂಡು ಹದಮಾಡುತ್ತವೆ. ಸತ್ತ ದನದ ಚರ್ಮದ ಬಹುಪಾಲನ್ನು ಭಾರತ ರಫ್ತು ಮಾಡುತ್ತದೆ. ಈ ಸ್ಥಿತಿಗತಿಯನ್ನು ಸುಧಾರಿಸಬೇಕಾದರೆ ಗೋಪ್ರೇಮಿಗಳು ಚರ್ಮಾಲಯಗಳ ಮೇಲೆ ಹತೋಟಿ ಪಡೆದು ತಮ್ಮ ಔದಾರ್ಯದಿಂದ ಚರ್ಮ ವ್ಯಾಪಾರೀಸ್ಪರ್ಧೆಯ ವಸ್ತುವಾಗದಂತೆ ಮಾಡುವುದರಿಂದಲೇ ಸಾಧ್ಯ.

೨. ಲಾಭದಾಯಕವಲ್ಲದಂತೆ, ಆದರೂ ಅಂತಿಮವಾಗಿ ನಷ್ಟವಾಗದಂತೆ ಗೋಶಾಲೆಗಳನ್ನು ನಡೆಸುವ ಸಾಧ್ಯತೆಗಳನ್ನು ಕುರಿತು ಪೂರ್ವಭಾವೀ ಪರಿಶೋಧನೆ ನಡೆಸಬೇಕು. ಈ ಕೆಲಸಕ್ಕಾಗಿ ೧೨ ತಿಂಗಳಲ್ಲಿ ೧೦ ಸಾವಿರ ರೂಪಾಯಿ ಖರ್ಚುಮಾಡಿ ತಜ್ಞರ ಸೇವೆ ಪಡೆಯಬೇಕು ಮತ್ತು ಹತ್ತಾರು ಸಾವಿರ ದನಗಳನ್ನು ಕಟ್ಟಲು ಸೂಕ್ತ ಸ್ಥಳ ಏರ್ಪಡಿಸಬೇಕು. ಈ ಬಗೆಯ ನಿಯಂತ್ರಣ ಪಡೆಯದೆ ಹೋದರೆ ದುರುಪಯೋಗ ಅಥವಾ ಅಜ್ಞಾನದ ಕಾರಣದಿಂದ ಅದು ಲಾಭದಾಯಕವಲ್ಲದಂತಾಗಿ ಕೊನೆಗೆ ಕಸಾಯಿಖಾನೆಗೆ ಮಾರಾಟವಾಗುವ ದನಗಳ ವಧೆ ಹಾಗೆಯೇ ಸಾಗೀತು. ಆರ್ಥಿಕವಾಗಿ ಹೊರೆಯಾಗಿಬಿಟ್ಟರೆ ಕಟುಕನ ಕತ್ತಿಯಿಂದ ಗೋವನ್ನು ಯಾವುದೂ ಉಳಿಸಲಾರದು.

೩. ಚರ್ಮಾಲಯದ, ಗೋಶಾಲೆಯ ಕೆಲಸ ಕಲಿಯುವ ವಿದ್ಯಾರ್ಥಿಗಳಿಗೆ ವ್ಯಾಸಂಗವೇತನಗಳನ್ನು ಕೊಡುವ ವ್ಯವಸ್ಥೆ ಏರ್ಪಡಿಸಬೇಕು. ಇದಕ್ಕೆ ವರ್ಷಕ್ಕೆ ಐದು ಸಾವಿರ ರೂಪಾಯಿಗಳು ಅಗತ್ಯ.

೪. ಗೋಪಾಲನ, ದುಗ್ಧಾಲಯ, ಚರ್ಮಾಲಯ ಕುರಿತ ಪುಸ್ತಕಗಳಿಗಾಗಿ ೩೦೦೦ ರೂಪಾಯಿಗಳು ಬೇಕು.

ಹೀಗೆ ಬಂಡವಾಳವಾಗಿ ೧,೨೫,೦೦೦ ರೂಪಾಯಿಗಳು, ಸಂಶೋಧನೆ, ಸಿದ್ಧತೆಗಳಿಗಾಗಿ ೧೫೦೦೦ ರೂಪಾಯಿಗಳು. ಆವರ್ತ ವೆಚ್ಚವನ್ನು ಬಿಟ್ಟಿದೇನೆ, ಅದನ್ನು ಅಖಿಲ ಭಾರತ ಗೋಸೇವಾ ಸಂಘದ ಸದಸ್ಯತ್ವದಿಂದ ಬರುವ ಆದಾಯದಿಂದ ನಿರ್ವಹಿಸಬೇಕು. ಈ ವೆಚ್ಚ ವಹಿಸಲಾಗದಿದ್ದರೆ ಸಂಘವನ್ನು ವಿಸರ್ಜಿಸತಕ್ಕದ್ದು.೮೮

## ಗೋಪಾಲನೆಗೆ ಷರತ್ತುಗಳು

ಈಚೆಗೆ ಮುಂಬಯಿಯ ಘಾಟಕೋಪರದಲ್ಲಿ ಭೂತದಯಾ ಸಂಘದವರ ಸಂಸ್ಥೆಗೆ ಭೇಟಿಕೊಟ್ಟಿದ್ದೆ. ಅದರ ಕಾರ್ಯದರ್ಶಿ ಶ್ರೀ ನಗಿನ್‌ದಾಸ್ ಸಂಸ್ಥೆಯನ್ನು ಚೆನ್ನಾಗಿ ನಡೆಸುತ್ತಿದಾರೆ. ಅಲ್ಲಿ ಗೋಪಾಲನೆಯ ಷರತ್ತುಗಳನ್ನು ಮಂಡಿಸುವ ಸಾಹಸ ಮಾಡಿದೆ. ಅದು ಪುನರುಚ್ಚರಿಸಬಹುದಾದಂಥದು.

೧. ಇಂಥ ಸಂಸ್ಥೆ ಪ್ರತಿಯೊಂದೂ ಸಾವಿರಾರು ಎಕರೆಯಷ್ಟು ಸ್ಥಳವಿರುವ, ಮೇವನ್ನು ಬೆಳೆಯಲು, ದನಕರುಗಳಿಗೆ ವ್ಯಾಯಾಮಕ್ಕೆ ನಾಕಷ್ಟು ಬಯಲು ಪ್ರದೇಶವಿರುವ ಸ್ಥಳದಲ್ಲಿ ಇರಬೇಕು. ಇಂದಿನ ಗೋಶಾಲೆಗಳ ಸ್ವಾಮ್ಯ ನನ್ನ ಕಡೆಗೇನಾದರೂ ಇದ್ದರೆ ಅವುಗಳಲ್ಲಿ ಬಹುಸಂಖ್ಯೆಯವನ್ನು ಒಳ್ಳೆ ಲಾಭಕ್ಕೆ ಮಾರಿ ಅವುಗಳ ಸಮೀಪದಲ್ಲಿ—ಹಾಲಿನ ಸಂಗ್ರಹ ಶಾಲೆಗಳನ್ನು ಬಿಟ್ಟು—ಯೋಗ್ಯ ಪ್ರದೇಶಗಳನ್ನು ಕೊಳ್ಳುತ್ತಿದ್ದೆ.

೨. ಪ್ರತಿಯೊಂದು ಗೋಶಾಲೆಯನ್ನೂ ಮಾದರಿ ದುಗ್ಧಾಲಯ ಹಾಗೂ ಮಾದರಿ ಚರ್ಮಾಲಯವಾಗಿ ಪರಿವರ್ತಿಸಬೇಕು. ಸತ್ತುಹೋದ ಒಂದೊಂದು ಪಶುವನ್ನೂ ಅಲ್ಲೇ ಇಟ್ಟುಕೊಂಡು ವೈಜ್ಞಾನಿಕವಾಗಿ ಅದರ ಚರ್ಮ, ಎಲುಬುಗಳು ಹಾಗೂ ನರಗಳೇ ಮುಂತಾದುವನ್ನು ಪೂರಾ ಉಪಯೋಗ ಪಡಿಸಿಕೊಳ್ಳಬೇಕು. ಕೊಲ್ಲಲ್ಪಟ್ಟ ದನದ ಅಂಗಾಂಗಗಳಂತಲ್ಲದೆ ಸತ್ತ ದನದ ಚರ್ಮ ಹಾಗೂ ಇತರ ಭಾಗಗಳನ್ನು ಪವಿತ್ರ ಹಾಗೂ ಉಪಯೋಗ ಯೋಗ್ಯವೆಂದು ತಿಳಿದೇನು. ಕೊಲ್ಲಲ್ಪಟ್ಟ ದನದ ಅವಶೇಷಗಳಾದರೋ

ಮಾನವನ ಉಪಯೋಗಕ್ಕೆ, ಅದರಲ್ಲೂ ಹಿಂದೂಗಳ ಉಪಯೋಗಕ್ಕಾದರೂ ನಿಷಿದ್ಧವೆಂದೇ ತಿಳಿಯಬೇಕು.

೩. ಸಗಣಿ ಗಂಜಲಗಳನ್ನು ಎಷ್ಟೋ ಗೋಶಾಲೆಗಳಲ್ಲಿ ಎಸೆದುಬಿಡುತ್ತಾರೆ. ಇದು ಪಾಪಕರ ಪೋಲು ಎಂದು ನನ್ನ ಎಣಿಕೆ.

೪. ಎಲ್ಲ ಗೋಶಾಲೆಗಳೂ ವೈಜ್ಞಾನಿಕ ಮೇಲ್ವಿಚಾರಣೆ, ಮಾರ್ಗದರ್ಶನಕ್ಕೆ ಒಳಪಟ್ಟು ನಡೆಯಬೇಕು.

೫. ಸರಿಯಾಗಿ ನಡೆಸಿದುದಾದರೆ ಪ್ರತಿಯೊಂದು ಗೋಶಾಲೆಯನ್ನೂ ಸ್ವಾವಲಂಬಿಯಾಗಿ ಮಾಡಬಹುದು. ಹಣದ ಕೊಡುಗೆಗಳನ್ನು ಅದರ ವಿಸ್ತರಣಕ್ಕೆ ಬಳಸಬಹುದು. ಈ ಸಂಸ್ಥೆಗಳನ್ನು ಲಾಭಕೋರ ಸಂಸ್ಥೆಗಳನ್ನಾಗಿ ಮಾಡುವ ಉದ್ದೇಶ್ಯ ಎಂದೂ ಇಲ್ಲ. ಬಂದ ಲಾಭವನ್ನೆಲ್ಲ ಅಂಗವಿಕಲ, ಅಶಕ್ತ ದನಕರುಗಳನ್ನೂ, ಕಸಾಯಿಖಾನೆಗೆಂದು ತೀರ್ಮಾನವಾದ ದನಗಳನ್ನು ಬಹಿರಂಗ ಮಾರುಕಟ್ಟೆಯಲ್ಲಿ ಕೊಳ್ಳಲೂ ಉಪಯೋಗವಾಗತಕ್ಕದ್ದು.

೬. ಗೋಶಾಲೆಗಳು ಎಮ್ಮೆಗಳನ್ನೂ ಆಡುಗಳನ್ನೂ ಸೇರಿಸಿಕೊಂಡಲ್ಲಿ ಈ ಘಟ್ಟ ಮುಟ್ಟುವುದು ಅಶಕ್ಯ. ನಾನು ಎಷ್ಟೇ ಆಸೆಪಟ್ಟರೂ, ಇಡೀ ಹಿಂದೂಸ್ತಾನ ಸಸ್ಯಾಹಾರಿ ಆದ ಹೊರತು ಆಡುಕುರಿಗಳನ್ನು ಕಟುಕನ ಕತ್ತಿಯಿಂದ ಉಳಿಸುವುದು ನಾ ನೋಡುವ ಮಟ್ಟಿಗೆ ಸಾಧ್ಯವೇ ಇಲ್ಲ. ನಾವು ಎಮ್ಮೆ ಹಾಲೇ ಬೇಕೆನ್ನದೆ ಅದರ ಬದಲು ಆಕಳ ಹಾಲನ್ನೇ ವ್ರತಪೂರ್ವಕವಾಗಿ ಬಳಸುವುದಾದರೆ ಎಮ್ಮೆಗಳನ್ನು ರಕ್ಷಿಸಬಹುದು.

ಆಕಳು ಹಾಗೂ ಅದರ ಸಂತಾನವನ್ನು ಉಳಿಸಲೋಸುಗ ಹಿಂದೂಗಳು ಆಕಳು ಹಾಗೂ ಅದರಿಂದ ಆದ ಪದಾರ್ಥಗಳಿಂದ ಬರುವ ಲಾಭವನ್ನು ಬಿಟ್ಟು ಕೊಡಬೇಕು. ಇದು ವ್ಯವಹಾರ್ಯವಾದ ಸೂಚನೆ, ಅನ್ಯಥಾ ಅಲ್ಲ. ಧರ್ಮ ನಿಜವಾದುದಾಗಬೇಕಾದಲ್ಲಿ ಮಾನವೀಯ ಅರ್ಥಶಾಸ್ತ್ರಕ್ಕೆ ಅನುಗುಣವಾದುದಾಗಿರಬೇಕು. ಅಂದರೆ ಆಯ-ವ್ಯಯ ಸರಿತೂಗಬೇಕು. ಅಂಥ ಅರ್ಥಶಾಸ್ತ್ರದ ಸಾಧನೆ ಆಕಳಿನ ವಿಷಯದಲ್ಲಿ, ಧರ್ಮಾತ್ಮರಾದ ಹಿಂದೂಗಳಿಗೆ ಸಾಧ್ಯ. ಈ ಭಾರಿ ಮಾನವೀಯ ಪ್ರಯತ್ನವನ್ನು ಗೋಮಾಂಸಭಕ್ಷಕ ಜಗತ್ತಿನೆದುರು

ಮಾಡುತ್ತಿದೇವೆಂಬುದು ನೆನಪಿರಲಿ. ಇಡೀ ಜಗತ್ತೇ ಬಹುಪಾಲು ಶಾಕಾಹಾರಿ ಆಗುವವರೆಗೆ ನಾನು ವಿವರಿಸಿರುವ ಪರಿಮಿತಿಗಳಿಂದಾಚೆ ಪ್ರಗತಿ ಸಾಧಿಸುವುದು ಅಶಕ್ಯ. ಆವರೆಗೆ ಯಶಸ್ಸು ಗಳಿಸಿದರೆ ಮುಂದಿನ ಪೀಳಿಗೆಗಳವರಿಗೆ ಹೆಚ್ಚಿನ ಪ್ರಯತ್ನಕ್ಕೆ ಬಾಗಿಲು ತೆರೆದಂತೆ, ಮಿತಿ ಮೀರಿದುದಾದರೆ ಎಮ್ಮೆ ಹಾಗೂ ಇತರ ಪ್ರಾಣಿಗಳ ಜತೆಗೆ ಗೋವನ್ನೂ ಕಸಾಯಿಖಾನೆಗೆ ಅಟ್ಟಿದಂತೆಯೇ ಸರಿ.

ಗೋಶಾಲೆಗಳನ್ನೂ ಪಿಂಜರಾಪೋಲುಗಳನ್ನೂ ನಡೆಸುತ್ತಿರುವ ಹಿಂದೂಗಳೂ ಭೂತದಯಾ ಸಂಘಗಳೂ ವಿವೇಕಯುಕ್ತವಾಗಿ ಧಾರ್ಮಿಕವಾಗಿದ್ದಲ್ಲಿ ಗೋಪಾಲನೆಯ ಮೇಲಿನ ಷರತ್ತುಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅವನ್ನು ಕೃತಿಗೆ ಇಳಿಸಲು ಕೂಡಲೇ ತೊಡಗಲಿ.೮೯

[೧೯೪೨ರ ಫೆಬ್ರುವರಿ ೧೧ರಂದು ಗೋಸೇವಾಸಂಘದ ಸಮ್ಮೇಲನದಲ್ಲಿ ಪಿಂಜರಾಪೋಲುಗಳ ಪ್ರಶ್ನೆಯನ್ನು ಚರ್ಚಿಸುತ್ತಾ ಗಾಂಧೀಜೀ ಹೀಗೆ ಹೇಳಿದರು.]

"ಪಿಂಜರಾಪೋಲುಗಳ ಸ್ಥಾನವನ್ನು ಮನಗಂಡು ಅವುಗಳ ಯೋಗ್ಯ ಕರ್ತವ್ಯಗಳನ್ನೂ ನಿಗದಿಗೊಳಿಸದಿದ್ದರೆ ಅವು ಇಂದಿನಂತೆಯೇ ಆರ್ಥಿಕವಾಗಿ ವ್ಯರ್ಥಪ್ರಯಾಸವಾಗಿಯೇ ಇರುತ್ತವೆ. ಖಾಸಗಿ ವ್ಯಕ್ತಿಗಳು ನೋಡಿಕೊಳ್ಳಲು ಅಸಾಧ್ಯವಾದಂಥ ಹಾಲು ಕೊಡದ, ಮುದಿಯಾದ, ಅಶಕ್ತ ದನಗಳ ಯೋಗಕ್ಷೇಮವೇ ಅವುಗಳ ಸೂಕ್ತ ಕರ್ತವ್ಯ. ಪಟ್ಟಣಗಳು ನಗರಗಳಲ್ಲಂತೂ ವ್ಯಕ್ತಿಗಳು ಈ ಕೆಲಸ ನೋಡಿಕೊಳ್ಳುವುದು ಸಾಧ್ಯವೇ ಇಲ್ಲ. ದುಗ್ಧಾಲಯದ ಕೆಲಸ ಅವುಗಳದಲ್ಲ. ಸಣ್ಣ ಪ್ರತ್ಯೇಕ ದುಗ್ಧಾಲಯವನ್ನು ಬೇಕಾದರೂ ಅವರು ನಡೆಸಬಹುದು. ಆದರೆ ಮುದಿಯಾದ, ಅಶಕ್ತವಾದ ದನಗಳನ್ನು ನೋಡಿಕೊಂಡು ಚರ್ಮಾಲಯಗಳಿಗೆ ಬೇಕಾದ ಕಚ್ಚಾ ಪದಾರ್ಥ ಒದಗಿಸುವುದು ಅವುಗಳ ಕೆಲಸ. ಪ್ರತಿಯೊಂದು ಪಿಂಜರಾಪೋಲಿನ ಜತೆಗೂ ಒಂದು ಸುವ್ಯವಸ್ಥಿತ ಚರ್ಮಾಲಯವಿರಬೇಕು. ಅತ್ಯುತ್ತಮ ಬೀಜದ ಹೋರಿಗಳನ್ನು ಇಟ್ಟು ಸಾರ್ವಜನಿಕ ಉಪಯೋಗಕ್ಕೆ ಕೊಡಬೇಕು. ಎತ್ತುಗಳಿಗೆ ಮಾನವೀಯವಾಗಿ ಹಾಗೂ ವೈಜ್ಞಾನಿಕವಾಗಿ ಬೀಜ ಒಡೆಯುವ ಕ್ರಮಕ್ಕೆ ತಕ್ಕ ಸೌಕರ್ಯ ಕಲ್ಪಿಸಬೇಕು. ಬೇಸಾಯಗಾರನಿಗೂ ಪಶುಪಾಲಕನಿಗೂ ಬೋಧನಕೇಂದ್ರವಾಗಬೇಕು. ಇಲ್ಲಿ ನಮ್ಮ ಬೇಸಾಯ ಹಾಗೂ ಪಶುಪಾಲನಾ ಪದವೀಧರರು

ವಿಶೇಷ ಪರಿಶ್ರಮ ಪಡೆಯಲು ಬೇಕಾದಷ್ಟು ಅವಕಾಶವಿದೆ. ತರಬೇತು ಪಡೆದ ಬಳಿಕ ಯಾವುದಾದರೊಂದು ಪಿಂಜರಾಪೋಲಿನಲ್ಲಿ ಅವರು ಕೆಲಸ ಮಾಡಬಹುದು. ಬಳಿಕ ಎಲ್ಲ ಪಿಂಜರಾಪೋಲುಗಳೂ ನಮ್ಮ ಸಂಘಕ್ಕೆ ಸೇರಿಕೊಳ್ಳಬಹುದು. ನಮ್ಮ ಸಂಘ ತಜ್ಞಸಲಹೆ, ಸಮಾಚಾರ, ಅಂಕಿ-ಅಂಶ ಸಂಗ್ರಹ-ವಿನಿಮಯ ಇತ್ಯಾದಿ ಕೆಲಸ ಮಾಡುವ ಕೇಂದ್ರ ಸಂಸ್ಥೆಯಾಗಿ ಇದ್ದೀತು."೯೦

ಲಾಹೋರಿನಲ್ಲಿ ಲಾಲಾ ಧನಪತ್‌ರಾಯ್ ಎಂಬುವರನ್ನು ಕಂಡೆ, ಅವರೂ ನನ್ನಂಥ ಒಬ್ಬ ಹುಚ್ಚರು. ಮುಸಲ್ಮಾನ್ ಕಟುಕರಿಗೆ ದನ ಮಾರು ವವರು ಹಿಂದೂಗಳೇ ಎಂದು ಅವರು ಹೇಳಿದರು. ಇದರ ಕಾರಣ ಆರ್ಥಿಕ ವಾದುದು ಎಂದರವರು. ಹುಲ್ಲುಗಾವಲು ಆಗಿದ್ದ ಹಳ್ಳಿಯ ಊರೊಟ್ಟಿನ ಜಮೀನನ್ನು ಸರಕಾರವೇ ವಹಿಸಿಕೊಂಡುಬಿಟ್ಟಿರುವುದರಿಂದ ಪಶುಪಾಲನೆ ಸಾಧ್ಯವಾಗುತ್ತಿಲ್ಲ. ಈ ಕಷ್ಟಕ್ಕೆ ಅವರೊಂದು ದಾರಿ ಸೂಚಿಸಿದರು. ಹಾಲು ಕೊಡುವುದನ್ನು ನಿಲ್ಲಿಸಿದ್ದ ಆಕಳುಗಳನ್ನು ಮಾರಬೇಕಾಗಿಲ್ಲವೆಂದೂ ಅವರು ಹೇಳಿದರು. ಅಂಥ ಆಕಳುಗಳನ್ನು ಕೊಂಡು ತಾವೇ ಒಂದು ಪ್ರಯೋಗ ನಡೆಸಿದ್ದರಂತೆ. ಅವನ್ನು ನೇಗಿಲಿಗೆ ಹೂಡುತ್ತಿದ್ದರಂತೆ. ಸ್ವಲ್ಪ ಕಾಲದ ಬಳಿಕ ಸರಿಯಾಗಿ ಎಚ್ಚರಿಕೆ ವಹಿಸಿದರೆ ಅವು ಪುಷ್ಟವಾಗಿ ಮತ್ತೆ ಗರ್ಭಧರಿಸಲು ಯೋಗ್ಯವಾಗುತ್ತಿದ್ದುವಂತೆ. ಈ ಹೇಳಿಕೆಯ ಸತ್ಯತೆಯ ಬಗೆಗೆ ನಾ ಭರವಸೆ ಕೊಡಲಾರೆ. ಲಾಲಾ ಧನಪತರಾಯರು ಹೇಳುವಂತೆಯೇ ಸ್ಥಿತಿ ಇರುವು ದಾದರೆ ಹೀಗೇಕೆ ಮಾಡಬಾರದೆಂದು ನನಗನಿಸುತ್ತದೆ. ಯಾವ ಪರಿಸ್ಥಿತಿ ಯಲ್ಲಿಯೂ ಹಸುಗಳನ್ನು ನೇಗಿಲಿಗೆ, ಗಾಡಿಗೆ ಹೂಡಬಾರದೆಂದು ಖಂಡಿತ ವಾಗಿಯೂ ಎಲ್ಲಿಯೂ ಶಾಸ್ತ್ರಗಳು ಹೇಳಿಲ್ಲ. ಆಕಳಿಗೆ ಸರಿಯಾಗಿ ಮೇವು ಕೊಟ್ಟು, ಜಾಗ್ರತೆಯಾಗಿ ಪಾಲನೆಮಾಡಿ ಗಾಡಿ ಎಳೆಯಲು ಅಥವಾ ನೇಗಿಲಿಗೆ ಹೂಡಲು ಉಪಯೋಗಿಸಿ ಅದರ ಶಕ್ತಿ ಮೀರದಂತೆ ಕೆಲಸ ಮಾಡಿಸಿಕೊಳ್ಳುವು ದರಲ್ಲಿ ಏನೂ ತಪ್ಪಿರದು. ಈ ಸಲಹೆ ವ್ಯಾವಹಾರಿಕವಾಗುವುದಾದರೆ ಪರಿಶೀಲಿ ಸಲು, ಅನುಸರಿಸಲು ಶಿಫಾರಸುಮಾಡುತ್ತೇನೆ. ಈ ಬಗೆಯಾಗಿ ಗೋವನ್ನು ರಕ್ಷಿಸುವವನನ್ನು ನಾವು ಹೀನವಾಗಿ ಕಾಣತಕ್ಕದ್ದಲ್ಲ.೯೧

ಆಕಳ ಹಾಲು ಎಮ್ಮೆಯ ಹಾಲಿಗಿಂತ ವೈದ್ಯಕೀಯವಾಗಿ ಮೇಲೆಂದು ವೈದ್ಯರು ಏಕಾಭಿಪ್ರಾಯದಿಂದ ಘೋಷಿಸುತ್ತಾರೆ. ಆಕಳ ಹಾಲನ್ನು ಎಚ್ಚರ ವಹಿಸಿ ಇಂದಿಗಿಂತ ಇನ್ನೂ ಪೌಷ್ಟಿಕಗೊಳಿಸಬಹುದೆಂದು ಪಶುಪಾಲನಾ ತಜ್ಞರೂ ಅಭಿಪ್ರಾಯಪಡುತ್ತಾರೆ. ಎಮ್ಮೆ-ಆಕಳು ಎರಡನ್ನೂ ಉಳಿಸುವುದು ಅಸಾಧ್ಯವೆಂದೇ ನನ್ನ ಅಭಿಪ್ರಾಯ. ಎಮ್ಮೆ ಸಾಕುವುದನ್ನು ಬಿಟ್ಟುಕೊಟ್ಟರೆ ಮಾತ್ರವೇ ಗೋವಿನ ರಕ್ಷಣೆ ಸಾಧ್ಯ. ಎಮ್ಮೆಯನ್ನು ವ್ಯಾಪಕ ಪ್ರಮಾಣದಲ್ಲಿ ಬೇಸಾಯದ ಕೆಲಸಗಳಿಗೆ ಉಪಯೋಗಿಸುವುದು ಸಾಧ್ಯವಿಲ್ಲ. ಮುಂದೆ ಅವುಗಳ ಸಂಖ್ಯೆ ಹೆಚ್ಚಿಸದಿದ್ದಲ್ಲಿ ಸದ್ಯ ಇರುವುವನ್ನು ಉಳಿಸಿಕೊಳ್ಳಬಹುದೇನೋ. ಎಮ್ಮೆಗಳನ್ನು, ಹಾಗೆ ನೋಡಿದರೆ ಆಕಳನ್ನು ಹೆಚ್ಚಿಸಿಕೊಳ್ಳುವುದು ಧರ್ಮದ ಅಂಗವೇನೂ ಅಲ್ಲ. ನಮ್ಮ ಪ್ರಯೋಜನಕ್ಕಾಗಿ ಅವನ್ನು ಹೆಚ್ಚಿಸುತ್ತೇವೆ. ಎಮ್ಮೆಯ ಸಂಖ್ಯೆ ಹೆಚ್ಚಿಸುವುದು ಅದಕ್ಕೂ ಆಕಳಿಗೂ ಕ್ರೌರ್ಯ ತೋರಿದಂತೆಯೇ. ಹಿಂದೂ ದನಗಾಹಿಗಳು ಲಾಭಕರವಾಗಿ ಸಾಕಲಾರದುದಕ್ಕೆ ಕೋಣಗಳನ್ನು ಇಂದಿಗೂ ನಿರ್ದಯೆಯಿಂದ ಕೊಲ್ಲುವರೆಂಬುದನ್ನು ಭೂತ ದಯಾಪರರು ತಿಳಿದಿರಲಿ.೯೨

## ವ್ಯಕ್ತಿಗತವೋ – ಸಾಮೂಹಿಕವೋ ?

ಗೋಪಾಲನೆ ವ್ಯಕ್ತಿಗಳ ಕೈಲಿ ಇರಬೇಕೋ ಸಾಂಘಿಕವಾಗಿ ನಡೆಯಬೇಕೋ ಎಂಬುದೇ ಈಚೆಗೆ ನಡೆದ ಗೋಸೇವಾಸಂಘದ ಸಮ್ಮೇಲನದ ಮುಂದಿನ ಮುಖ್ಯಪ್ರಶ್ನೆಯಾಗಿತ್ತು. ವ್ಯಕ್ತಿಗತವಾದ ಪ್ರಯತ್ನದಿಂದ ಆಕಳನ್ನು ಉಳಿಸುವುದು ಸಾಧ್ಯವಿಲ್ಲ ಎಂದು ಹೇಳಲು ನಾನೇ ಹಿಂಜರಿಯಲಿಲ್ಲ. ಗೋವಿನ, ಅದರ ಜತೆಯಲ್ಲಿ ಎಮ್ಮೆಯ ವಿಮೋಚನೆ ಸಾಂಘಿಕ ಪ್ರಯತ್ನದಿಂದಲೇ ಸಾಧ್ಯ. ಬಿಡಿ ರೈತನಿಗೆ ತನ್ನ ದನಕರುಗಳನ್ನು ಸರಿಯಾಗಿ, ಶಾಸ್ತ್ರೀಯವಾಗಿ ನೋಡಿಕೊಳ್ಳುವುದು ಸಾಧ್ಯವಿಲ್ಲ. ಇತರ ಕಾರಣಗಳ ಜತೆಗೆ ಸಾಮೂಹಿಕ ಪ್ರಯತ್ನದ ಅಭಾವವೂ ಗೋವಿನ ಹಾಗೂ ದನಕರುಗಳ ಸ್ಥಿತಿ ಕೆಡುವುದಕ್ಕೆ ಕಾರಣವಾಗಿದೆ.

ಬಾಳಿನ ಎಲ್ಲ ರಂಗಗಳಲ್ಲಿಯೂ ಸಾಂಘಿಕ ಅಥವಾ ಸಹಕಾರಾತ್ಮಕ ಪ್ರಯತ್ನದ ಆದರ್ಶದ ಕಡೆಗೆ ಜಗತ್ತು ಇಂದು ಸಾಗುತ್ತಿದೆ. ಈ ನಿಟ್ಟಿನಲ್ಲಿ

ಬಹಳ ಸಾಧನೆ ಆಗಿದೆ, ಆಗುತ್ತಿದೆ. ನಮ್ಮ ದೇಶಕ್ಕೂ ಅದು ಬಂದಿದೆ, ಆದರೆ ವಿರೂಪವಾಗಿ ಬಂದಿದೆ, ಆದುದರಿಂದ ನಮ್ಮ ಬಡ ಜನ ಅದರ ಲಾಭ ಪಡೆಯಲಾರದವರಾಗಿದಾರೆ. ಏರುತ್ತಿರುವ ನಮ್ಮ ಜನಸಂಖ್ಯೆಯ ಪ್ರಮಾಣ ದಿಂದಾಗಿ ಸಾಮಾನ್ಯ ರೈತನ ಭೂಹಿಡುವಳಿ ನಿತ್ಯವೂ ಸಣ್ಣಸಣ್ಣದಾಗುತ್ತಿದೆ. ಎಷ್ಟೋ ವೇಳೆ ಬಿಡಿ ರೈತನ ಬಳಿ ಇರುವುದು ತುಣುಕು ತುಣುಕೇ. ಅಂಥ ರೈತರು ದನಕರುಗಳನ್ನು ಮನೆಮನೆಗಳಲ್ಲಿ ಇಟ್ಟುಕೊಳ್ಳುವುದೆಂದರೆ ಆತ್ಮ ಘಾತಕವೇ. ಆದರೂ ಇಂದಿನ ಸ್ಥಿತಿ ಇಂಥದು. ಧರ್ಮ, ನೀತಿ ಅಥವಾ ಭೂತದಯೆಯ ಗಣನೆಗಳಿಗಿಂತ ಅರ್ಥಶಾಸ್ತ್ರಕ್ಕೇ ಪ್ರಥಮ ಪ್ರಾಶಸ್ತ್ಯ ಕೊಡು ವವರು ' ರೈತನನ್ನು ಅವನ ದನಕರುಗಳೇ ಕಬಳಿಸುತ್ತಿವೆ, ಅವುಗಳಿಂದ ಬರುವ ಉತ್ಪತ್ತಿಗಿಂತ ಅವುಗಳ ಮೇವೇ ದುಬಾರಿ ' — ಎಂದು ಗೋಪುರ ಹತ್ತಿ ಕೂಗತೊಡಗಿದಾರೆ. ಅಂಥ ಅಪ್ರಯೋಜಕ ದನಗಳನ್ನೆಲ್ಲ ಕಡಿದುಹಾಕದೆ ಹೋಗುವುದು ದಡ್ಡತನ ಎನ್ನುತ್ತಾರೆ ಅವರು.

ಭೂತದಯಾಪರರು ಏನು ಮಾಡಬೇಕೆಂಬುದೇ ಪ್ರಶ್ನೆ. ನಮ್ಮ ದನ ಕರುಗಳನ್ನು ಉಳಿಸುವುದಷ್ಟೇ ಅಲ್ಲದೆ ಅವು ಹೊರೆಯಾಗದಂತೆ ನೋಡಿಕೊಳ್ಳುವ ದಾರಿ ಹುಡುಕುವುದೇ ಇದಕ್ಕೆ ಉತ್ತರ. ಸಹಕಾರೀ ಪ್ರಯತ್ನ ಈ ವಿಷಯದಲ್ಲಿ ನಮಗೆ ಬಹುಮಟ್ಟಿಗೆ ಸಹಾಯಕವಾದೀತು.

ಮುಂದೆ ಕಂಡ ಹೋಲಿಕೆ ಸಹಾಯಕ :

೧. ಸಾಮೂಹಿಕ ವ್ಯವಸ್ಥೆಯಲ್ಲಿ ಯಾವನೇ ಬಿಡಿ ರೈತ ಇಂದಿನಂತೆ ತನ್ನ ಮನೆಯಲ್ಲಿ ದನಕರು ಇಟ್ಟುಕೊಳ್ಳ. ಅವು ಹವೆಯನ್ನು ಹೊಲಸುಮಾಡಿ, ಸ್ಥಳವನ್ನು ಕೊಳಕಾಗಿಸುತ್ತವೆ. ಪ್ರಾಣಿಗಳೊಡನೆಯೇ ವಾಸಿಸುವುದರಲ್ಲಿ ಬುದ್ಧಿವಂತಿಕೆಯೂ ಇಲ್ಲ, ಭೂತದಯೆಯೂ ಇಲ್ಲ. ಮನುಷ್ಯನ ಸೃಷ್ಟಿ ಅದಕ್ಕಾಗಿ ಆಗಿಲ್ಲ. ಸಾಮೂಹಿಕ ವ್ಯವಸ್ಥೆಯನ್ನು ಅನುಸರಿಸಿದರೆ ಇಂದು ದನಕರುಗಳು ಆಕ್ರಮಿಸುವ ಸ್ಥಳಾವಕಾಶ ರೈತನಿಗೇ ಉಳಿದೀತು.

೨. ದನಕರುಗಳ ಸಂಖ್ಯೆ ಹೆಚ್ಚಿದಂತೆಲ್ಲ ರೈತ ಮನೆಯಲ್ಲಿ ಬದುಕುವುದೇ ದುಸ್ತರವಾಗುತ್ತದೆ. ಅಂತಲೇ ಕರುಗಳನ್ನು ಮಾರಿ, ಕೋಣಗಳನ್ನು ಕಡಿದೋ ಅಥವಾ ಹೊರಗೆ ಅಟ್ಟಿ ಅವನ್ನು ಹೊಟ್ಟೆಗಿಲ್ಲದೆ ಸಾಯಗೊಟ್ಟೋ

ಬಿಡಬೇಕಾಗುತ್ತದೆ. ಸಹಕಾರ ತತ್ತ್ವದಂತೆ ಗೋರಕ್ಷಣೆ ಕೈಗೊಂಡರೆ ಈ ಅಮಾನುಷತೆಯನ್ನು ತಡೆಗಟ್ಟಬಹುದು.

೩. ಸಾಮೂಹಿಕ ಗೋಪಾಲನೆ ಕೈಗೊಂಡರೆ ದನಕರುಗಳು ಬೇನೆ ಬಿದ್ದಾಗ ಪಶುವೈದ್ಯಚಿಕಿತ್ಸೆ ಖಂಡಿತವಾಗಿ ನೀಡಬಹುದು. ಸಾಮಾನ್ಯ ರೈತನಿಗೆ ತನ್ನಷ್ಟಕ್ಕೆ ತಾನೇ ಇದು ಅಸಾಧ್ಯ.

೪. ಸಾಮೂಹಿಕ ಪದ್ಧತಿಯಲ್ಲಿ ಹಲವಾರು ಆಕಳುಗಳಿಗೆ ಒಂದು ಆರಿಸಿದ ಬೀಜದ ಹೋರಿಯ ವ್ಯವಸ್ಥೆ ಮಾಡಬಹುದು. ಬೇರೆ ರೀತಿಯಲ್ಲಿ ದಾನ ಧರ್ಮದ ಹೊರತಾಗಿ ಇದು ಸಾಧ್ಯವೇ ಇಲ್ಲ.

೫. ಒಟ್ಟಿನ ಹುಲ್ಲುಗಾವಲು ಅಥವಾ ದನಕ್ಕೆ ವ್ಯಾಯಾಮಕ್ಕೆ ಸ್ಥಳ ಸಹಕಾರ ಪದ್ಧತಿಯಲ್ಲಿ ಸುಲಭವಾಗಿ ಸಿಗುತ್ತದೆ. ಇಂದು ಬಿಡಿ ರೈತರಿಗೆ ಇಂಥ ಯಾವ ಸೌಕರ್ಯವೂ ಇಲ್ಲವೇ ಇಲ್ಲ.

೬. ಸಾಮುದಾಯಿಕ ವ್ಯವಸ್ಥೆಯಲ್ಲಿ ಮೇವಿಗಾಗಿ ಖರ್ಚು ಬಹುಮಟ್ಟಿಗೆ ಕಡಿಮೆ.

೭. ಒಳ್ಳೆಯ ಬೆಲೆಗೆ ಹಾಲಿನ ಮಾರಾಟಕ್ಕೆ ಸೌಕರ್ಯ ಹೆಚ್ಚುತ್ತದೆ. ವ್ಯಕ್ತಿಗತ ವಾಗಿ ಅದನ್ನು ಬೆರಿಕೆಮಾಡಿ ಆಸೆಗೆ ಒಳಗಾಗಬೇಕಿಲ್ಲ.

೮. ಪ್ರತಿಯೊಂದು ದನಕ್ಕೂ ಬಿಡಿಯಾಗಿ ತಳಿ ಅರ್ಹತೆಯ ಪರೀಕ್ಷೆ ನಡೆಸು ವುದು ಸಾಧ್ಯವಿಲ್ಲ. ಇಡೀ ಊರಿನ ಎಲ್ಲ ದನಕರುಗಳಿಗಾದರೆ ಇದು ಸುಲಭ. ತಳಿ ಅಭಿವೃದ್ಧಿಕಾರ್ಯವೂ ಇದರಿಂದ ಸುಲಭವಾಗುತ್ತದೆ.

೯. ಮೇಲಿನ ಅನುಕೂಲಗಳೇ ಸಾಕು ಸಹಕಾರ ಪದ್ಧತಿಯಂತೆ ಪಶುಪಾಲನೆಯ ಪರವಾಗಿ ವಾದಿಸಲು. ವ್ಯಕ್ತಿಗತ ಪಾಲನಪದ್ಧತಿಯಿಂದ ನಮ್ಮ ಸ್ಥಿತಿ, ದನಕರುಗಳ ಸ್ಥಿತಿ—ಎರಡೂ ಶೋಚನೀಯವಾಗಿರುವುದೇ ಅದರ ಪರ ಅತಿಪ್ರಬಲ ವಾದ. ಈ ಮುಖ್ಯವಾದ ಪರಿವರ್ತನೆ ಉಂಟುಮಾಡಿ ತಮ್ಮನ್ನೂ ದನಕರುಗಳನ್ನೂ ಉಳಿಸಿಕೊಳ್ಳಬಹುದು.

ಸಹಕಾರ ಬೇಸಾಯ ಕೈಗೊಂಡಲ್ಲದೆ ಬೇಸಾಯದ ಪೂರ್ಣ ಪ್ರಯೋಜನ ವನ್ನೂ ನಾವು ಪಡೆಯಲಾರೆವೆಂಬುದು ನನ್ನ ದೃಢನಂಬಿಕೆ. ಒಂದು ಊರಿನ

ನೂರು ಕುಟುಂಬಗಳು ಒಟ್ಟಿಗೆ ಬೇಸಾಯಮಾಡಿ ಆದಾಯವನ್ನು ಹಂಚಿಕೊಳ್ಳುವುದು ಭೂಮಿಯನ್ನು ನೂರು ಪಾಲಾಗಿ ಹಂಚಿಕೊಳ್ಳುವುದಕ್ಕಿಂತ ತರ್ಕಶುದ್ಧವಲ್ಲವೆ ? ಭೂಮಿಗೆ ಅನ್ವಯಿಸುವುದೇ ದನಕ್ಕೂ ಅನ್ವಯಿಸೀತು.

ಇದ್ದಕ್ಕಿದ್ದಂತೆ ಈ ಜೀವನ ವಿಧಾನವನ್ನು ಜನ ಅನುಸರಿಸುವಂತೆ ಅವರನ್ನು ಪರಿವರ್ತಿಸುವುದು ಕಷ್ಟ ಎಂಬ ಮಾತು ಬೇರೆ. ನೇರಾದ, ಇಕ್ಕಟ್ಟಾದ ಹಾದಿಯಲ್ಲಿ ಹೋಗುವುದು ಯಾವಾಗಲೂ ಕಠಿಣವೇ. ಗೋಸೇವೆಯ ಕಾರ್ಯಕ್ರಮದ ಹೆಜ್ಜೆಹೆಜ್ಜೆಯಲ್ಲೂ ಕ್ಲಿಷ್ಟ ಸಮಸ್ಯೆಗಳಿವೆ. ಕಷ್ಟಗಳನ್ನು ದಾಟದೆ ದಾರಿ ಸುಗಮಗೊಳ್ಳದು. ವ್ಯಕ್ತಿಗತ ಪ್ರಯತ್ನಕ್ಕಿಂತ ಸಾಮೂಹಿಕ ಪಶುಪಾಲನೆಯ ಅಪಾರ ಮೇಲ್ಮೆಯನ್ನು ತೋರಿಸುವುದೇ ಸದ್ಯಕ್ಕೆ ನನ್ನ ಉದ್ದೇಶ್ಯ. ವ್ಯಕ್ತಿಗತ ಪ್ರಯತ್ನ ತಪ್ಪು, ಸಾಮೂಹಿಕ ಪ್ರಯತ್ನವೇ ಸರಿ ಎಂದೂ ನನ್ನ ಭಾವನೆ. ನಿಜಕ್ಕೂ ವ್ಯಕ್ತಿ ತನ್ನ ಸ್ವಾತಂತ್ರ್ಯವನ್ನು ಸಹಕಾರದ ಮೂಲಕವೇ ಕಾಯ್ದುಕೊಳ್ಳಬಲ್ಲ ಪಶುಪಾಲನೆಯಲ್ಲಿ ವ್ಯಕ್ತಿಗತ ಪ್ರಯತ್ನ ಸ್ವಾರ್ಥ ಅಮಾನುಷತೆಗಳಿಗೆ ದಾರಿ ಮಾಡಿದೆ. ಸಾಂಘಿಕ ಪ್ರಯತ್ನವಾದರೋ ಇವೆರಡನ್ನೂ ಪೂರಾ ನಿವಾರಿಸದಿದ್ದರೂ ಕಡಿಮೆಯಾದರೂ ಮಾಡೀತು.೯೩

**ಪ್ರಶ್ನೆ**—ವ್ಯಕ್ತಿಗತ ಗೋಪಾಲನೆ ಹಿಂಸೆ ಏಕೆ ? ಸಾಮೂಹಿಕ ಪ್ರಯತ್ನ ಅಹಿಂಸಕ ಹೇಗೆ ? ಎಂಬುದನ್ನು ಹೆಚ್ಚು ವಿಶದವಾಗಿ ವಿವರಿಸಿ.

**ಉತ್ತರ**—ದನಕರುಗಳ ಇಂದಿನ ಶೋಚನೀಯ ಸ್ಥಿತಿಯೇ ಸಾಕಷ್ಟು ಖಚಿತ ಪ್ರಮಾಣ. ವ್ಯಕ್ತಿಗತ ಒಡೆತನ, ಪಾಲನೆ ವಿಫಲವಾಗಿರುವುದರಿಂದಲೇ ಇಂದು ಆಕಳು ಹೊರೆಯಾಗಿದೆ. ಹಿಂದೆ ಬರೆದ ಲೇಖನವೊಂದರಲ್ಲಿ ವ್ಯಕ್ತಿ ಹೇಗೆ ಪಶುವನ್ನು ಸರಿಯಾಗಿ ನೋಡಿಕೊಳ್ಳಲಾರನೆಂಬುದನ್ನು, ಬೀಜದ ಹೋರಿಯನ್ನೂ ಹುಲ್ಲುಗಾವಲನ್ನೂ ತಾನಾಗಿಯೇ ಇಡಲಾರನೆಂಬುದನ್ನು, ಹಾಲು ಹಾಗೂ ತುಪ್ಪದ ಮಾರಾಟಕ್ಕೆ ಸರಿಯಾದ ವ್ಯವಸ್ಥೆಯನ್ನು ಮಾಡುವುದು ಆತನಿಗೆ ಎಷ್ಟು ಕಷ್ಟವೆಂಬುದನ್ನು ವಿವರಿಸಿದೇನೆ. ಯಾವ ದೇಶವಲ್ಲಿಯೇ ಆಗಲಿ ಅಂಚೆ ಇಲಾಖೆ ಮಾಡುವ ಶ್ರೀಮಂತ-ಬಡವ ಭೇದವಿಲ್ಲದೆ ಜನರ ಕೋಟಿಗಟ್ಟಲೆ ಪತ್ರಗಳನ್ನು ಒಯ್ಯುವ ವ್ಯವಸ್ಥೆಯನ್ನು ಒಬ್ಬೊಬ್ಬರೇ ಮಾಡಿಕೊಳ್ಳುವುದು ಅಸಾಧ್ಯವೇ. ಹಾಗೆಯೇ ಗೋವಿನ ವಿಷಯದಲ್ಲೂ—

ಈ ಸಮಸ್ಯೆ ಬಗೆಹರಿಯಲೇಬೇಕಾಗಿದ್ದರೆ ಅದು ಸಾಮೂಹಿಕ ಒಡೆತನ, ಉಪಯೋಗದ ಮೂಲಕವೇ. ಒಡೆತನ-ಸೇವೆ ಎರಡೂ ಒಟ್ಟಿಗೆ ಹೋಗವು. ನಾನು ಒಬ್ಬನಿಗೆ ಸೇರಿರಬಹುದು. ಸಾವಿರ ಜನ ನನ್ನ ಸೇವೆ ಮಾಡಬಹುದು. ನನಗೆ ಸೇವೆ ಮಾಡುವ ಹಕ್ಕನ್ನೆಲ್ಲ ಒಬ್ಬರೇ ಗುತ್ತಿಗೆ ಹಾಕಿಕೊಂಡರೆ ನಾನು ಎಲ್ಲಿದ್ದೇನು? ಆಕಳಿಗೆ ಒದಗಿರುವ ಸ್ಥಿತಿಯೂ ಇದೇ. ವ್ಯಕ್ತಿಗಳು ಗೋವಿನ ಒಡೆಯರು. ಅವರು ಅದರ ಸೇವೆಗೈಯುತ್ತಿಲ್ಲ.೯೪

## ಪಶುವಿನ ಮೇಲೆ ಮನುಷ್ಯನ ಪ್ರಭುತ್ವ

**ಪ್ರಶ್ನೆ**—೧೪-೪-೧೯೪೬ರ 'ಹರಿಜನ'ದ ೯೧ನೆಯ ಪುಟದಲ್ಲಿ ಎತ್ತು ಜೀವಂತ ಯಂತ್ರ, ಅಂಥ ಸಾಧುಪ್ರಾಣಿಯೊಂದಿಗೆ ಸಂಪರ್ಕ ಮಾನವ ನಾಗರಿಕತೆಯ ಮುನ್ನಡೆಯಲ್ಲೊಂದು ಪ್ರಬಲ ಅಂಶ ಎಂದು ವಾದಿಸಲಾಗಿದೆ. ಈ ಪ್ರಾಣಿಗಳಿಗೆ 'ಹಿಡ' ಮಾಡಿ ಅವನ್ನು 'ಸಾಧು'ಗೊಳಿಸಲಾಗಿದೆ. ನಾಗರಿಕತೆಯ ಮುನ್ನಡೆಯ ಸರಿಯಾದ ಕ್ರಮವೆ ಇದು? ಆಕಳು ಇರುವುದೇ ಆದರೆ ಎತ್ತೂ ಇರಲೇಬೇಕು ನಮ್ಮಲ್ಲಿ. ಎತ್ತು ಮಾನವನ ಸ್ವಾರ್ಥ ಹಾಗೂ ಕ್ರೌರ್ಯಗಳ ಸೃಷ್ಟಿ. ವಿಚಾರವಂತ ಮನುಷ್ಯನಲ್ಲಿ ಅಲ್ಲದಿದ್ದರೂ ಕೀಳು ಪ್ರಾಣಿಗಳಲ್ಲಿ ಅವುಗಳ ಪ್ರಕೃತಿಯ ಪೌರುಷವೆಲ್ಲ ಸಂತಾನೋತ್ಪತ್ತಿಯ ಇಚ್ಛೆಯ ರೋಪವಾಗಿ ಏಳುತ್ತದೆ. ಆದುದರಿಂದ 'ಮಹಾದೇವನ ವಾಹನ'ವಾದ ಈ ಉದಾತ್ತ ಪ್ರಾಣಿಯನ್ನು ಹೊರುವ ಪಶುವಾಗಿ ಮಾಡುವುದು ವಿಷಾದಕರ.

**ಉತ್ತರ**—ಲೇಖಕರದು ಶುದ್ಧ ತರ್ಕ. ಆದರೆ ಆ ತರ್ಕದ ಪ್ರಕಾರ ಆಕಳನ್ನೂ ಮನೆಯಲ್ಲಿ ಸಾಕುವಂತಿಲ್ಲ. ಎತ್ತಿನ ಬೀಜ ಒಡೆಯುವುದಕ್ಕಿಂತ ಹೆಚ್ಚಿನ ಕ್ರೌರ್ಯ ಪ್ರಾಯಶಃ ಆಕಳಿನ ಸಾಕಣೆಯಲ್ಲಿ ಇದೆ. ಅದು ಕೇವಲ ಪ್ರಮಾಣ ಪ್ರಶ್ನೆ. ನಾಗರಿಕತೆಯ ಮುನ್ನಡೆಯಲ್ಲಿ ಪಶುವಿನ ಮೇಲೆ ಇನ್ನೂ ಹೆಚ್ಚಿಗೆ ಮನುಷ್ಯನ ಪ್ರಭುತ್ವ ಹಾಗೂ ಅದರೊಟ್ಟಿಗೇ ಅವನ್ನು ಹೆಚ್ಚು ಮಾನವೀಯವಾಗಿ ಉಪಯೋಗಿಸಿಕೊಳ್ಳುವ ಕ್ರಮ ಅಡಕವಾಗಿರುವಂತೆ ಅನಿಸುತ್ತದೆ.

ಭೂತದಯಾವಾದಿಗಳಲ್ಲಿ ಮೂರು ಬಗೆಯಿದೆ. ಪಶುಶಕ್ತಿಯ ಬದಲು ಬೇರಾವುದಾದರೂ ಬಳಸೋಣ ಎನ್ನುವವರು ಒಂದು ಬಗೆ. ಪ್ರಾಣಿಗಳು ನಮ್ಮ ಸಹಜೀವಿಗಳೆಂದು ತಿಳಿದು ಸಹೋದರಭಾವಕ್ಕೆ ಅನುಗುಣವಾಗಿ ಅವನ್ನು ಬಳಸುವ ಬಗೆ ಮತ್ತೊಂದು. ಮೂರನೆಯ ಬಗೆಯುವ ಮಾನವನ ಸ್ವಾರ್ಥಕ್ಕೆ ಕೀಳು ಪ್ರಾಣಿಗಳನ್ನು ಬಳಸದೆ ತನ್ನ ಶಕ್ತಿಯನ್ನೋ ಅಥವಾ ತನ್ನ ಸಹ-ಮಾನವರು ಬುದ್ಧಿಪೂರ್ವಕವಾಗಿ ಹಾಗೂ ತಾವಾಗಿಯೇ ನೀಡುವಷ್ಟರ ಮಟ್ಟಿಗೆ ಅವರ ಶಕ್ತಿಯನ್ನೋ ಬಳಸುವವ. ನಾನು ಮೂರನೆಯ ವರ್ಗಕ್ಕೆ ಸೇರಿದವ. ಮನುಷ್ಯನ ಶ್ರಮವನ್ನು ಒಪ್ಪವಾಗಿ, ಮಾನವೀಯವಾಗಿ ಬಳಸಿದರೆ ಹಣ್ಣಿನ ಬೇಸಾಯವನ್ನು ಬಹುಮಟ್ಟಿಗೆ ಮತ್ತು ಧಾನ್ಯದ ಕೃಷಿಯನ್ನೂ ಮಾಡಬಹುದು. ಟ್ರಾನ್ಸ್‌ವಾಲಿನ ಸತ್ಯಾಗ್ರಹಿ ಕೈದಿಗಳಾಗಿ ನಾವು ಕಲ್ಲುನೆಲ ಅಗೆದು ಪೌರ ಉದ್ಯಾನ ಮಾಡಿದ್ದೂ ಉಂಟು. ಉಳುಮೆಯಿಂದ ಕೆಲಸ ನಡೆಯುತ್ತಿರಲಿಲ್ಲ. ಗುದ್ದಲಿ–ಪಿಕಾಸಿಗೆ ಮಾತ್ರ ಬಗ್ಗುವಂಥದು ಆ ನೆಲ.

ಮೊದಲನೆಯ ವರ್ಗ ಅಪ್ರಯೋಜಕ, ಕಡೆಗೆ ಮನುಷ್ಯಕುಲಕ್ಕೆ ಘಾತುಕವೂ. ಉಳಿದೆರಡರ ಬುದ್ಧಿವಂತಿಕೆಯ ಸಮನ್ವಯವೇ ಸರಿಯಾದ ಗುರಿ. ಬೀಜ ಒಡೆಯದೆ ಬೇರೆ ದಾರಿಯೇ ನನಗೆ ಕಾಣದು. ಕ್ರಮಕ್ರಮವಾಗಿ ಅದನ್ನು ಹೆಚ್ಚು ಮಾನವೀಯವಾಗಿ ಮಾಡುವುದೊಂದೇ ದಾರಿ.

ಈ ಸಂದರ್ಭದಲ್ಲಿ ಒಬ್ಬ ಪತ್ರಲೇಖಕರು ಪ್ರಾಣಿಗಳಿಗೆ ಮುದ್ರೆ ಒತ್ತುವ ಪ್ರಶ್ನೆ ಎತ್ತಿದಾರೆ. ಮುದ್ರೆ ಹಾಕುವಾಗ ಆಗುವ ನೋವು ಒಡೆಯನಿಗೂ ಆ ಪ್ರಾಣಿಗೂ ಆಗುವ ಲಾಭಕ್ಕೆ ಸಮವೇ? ಎಂದು ಕೇಳುತ್ತಾರೆ. ಪ್ರಾಣಿಗೆ ಯಾವ ಲಾಭವೂ ಇಲ್ಲವೆಂದಾದರೆ ಮುದ್ರೆ ಹಾಕುವುದನ್ನು ಸಹಜವಾಗಿ ನಿಷೇಧಿಸಲೇಬೇಕು.[೯೫]

## ಅಧ್ಯಾಯ – ೮

# ವಿತರಣ ಪದ್ಧತಿ

### ಅರ್ಥವ್ಯವಸ್ಥೆಯ ಅಹಿಂಸಕ ಆಧಾರ

ಹೊಸ ದೃಷ್ಟಿಯ ಅನ್ವಯ ನಾವು ಪಡೆಯಬಹುದಾದುದನ್ನು ಪಡೆಯುವ ಬಗೆಗೆ ವಿಚಾರ ಮಾಡೆವು, ಎಲ್ಲರೂ ಪಡೆಯಲಾಗದುದನ್ನು ನಾವು ಹೊಂದಿರಲು ನಿರಾಕರಿಸಿಯೇವು. ಅರ್ಥಶಾಸ್ತ್ರದ ಮೂಲಕ ಜನತೆಗೆ ಬಿನ್ನವಿಸಿಕೊಳ್ಳುವುದು ಕಠಿಣವಾಗತಕ್ಕದ್ದಲ್ಲವೆಂದು ನನಗೆ ಅನಿಸುತ್ತದೆ. ಅಂಥ ಸಾಕಷ್ಟು ಸಫಲ ಪ್ರಯೋಗ ಅಗಾಧವಾದ ಅರಿವಿಲ್ಲದ ಆಧ್ಯಾತ್ಮಿಕ ಪರಿಣಾಮಗಳನ್ನು ಉಂಟು ಮಾಡಲೇಬೇಕು. ಆಧ್ಯಾತ್ಮಿಕ ನಿಯಮಕ್ಕೆ ತನ್ನದೇ ಆದ ವಿಶಿಷ್ಟ ಕ್ಷೇತ್ರವಿದೆ ಎಂದು ನಾ ನಂಬುವುದಿಲ್ಲ. ಬದಲಾಗಿ ಬಾಳುವೆಯ ನಿತ್ಯವ್ಯಾಪಾರಗಳ ಮೂಲಕ ಅದು ಪ್ರಕಟವಾಗುತ್ತದೆ. ಹೀಗೆ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳನ್ನೂ ಅದು ಪ್ರಭಾವಿತಗೊಳಿಸುತ್ತದೆ.೯೬

### ನನ್ನ ಆದರ್ಶ

ಸಮಾನ ವಿತರಣ ನನ್ನ ಆದರ್ಶ, ಆದರೆ ನಾ ನೋಡುವ ಮಟ್ಟಿಗೆ ಅದು ಅಸಾಧ್ಯ. ಆದುದರಿಂದ ನ್ಯಾಯೋಚಿತ ವಿತರಣಕ್ಕಾಗಿ ಶ್ರಮಿಸುತ್ತೇನೆ.೯೭

ಪ್ರತಿಯೊಬ್ಬನಿಗೂ ಅವನ ಸ್ವಾಭಾವಿಕ ಅಗತ್ಯಗಳ ಪೂರೈಕೆಗೆ ಮಾತ್ರ, ಹೆಚ್ಚಿನದಕ್ಕಲ್ಲ, ಆವಶ್ಯಕ ವಸ್ತುಗಳು ಸಿಗಬೇಕೆಂಬುದೇ ಸಮಾನ ವಿತರಣದ ನಿಜವಾದ ಅರ್ಥ. ಉದಾಹರಣೆಗೆ ಜೀರ್ಣಶಕ್ತಿ ಮಂದವಾಗಿರುವವನಿಗೆ ರೊಟ್ಟಿಗೆ ಕಾಲು ಪೌಂಡ್ ಹಿಟ್ಟು ಸಾಕಾಗಬಹುದು, ಮತ್ತೊಬ್ಬನಿಗೆ ಒಂದು ಪೌಂಡ್ ಬೇಕಾಗಬಹುದು. ಇಬ್ಬರಿಗೂ ಅವರವರ ಆವಶ್ಯಕತೆ ಪೂರೈಕೆ ಆಗಬೇಕು. ಈ ಆದರ್ಶ ಸಾಧಿಸಬೇಕಾದರೆ ಇಡೀ ಸಮಾಜವ್ಯವಸ್ಥೆಯನ್ನೇ ಪುನರ್ನಿರ್ಮಿಸಬೇಕಾದೀತು ಅಹಿಂಸೆಯ ಆಧಾರದ ಮೇಲೆ ನಿಂತ ಸಮಾಜ ಮತ್ತಾವುದೇ ಆದರ್ಶವನ್ನು ಪೋಷಿಸುವಂತಿಲ್ಲ. ಆ ಗುರಿಯನ್ನು ಮುಟ್ಟಲು

ಸಾಧ್ಯವಿಲ್ಲದಿರಬಹುದು, ಆದರೆ ಅದನ್ನು ಲಕ್ಷ್ಯದಲ್ಲಿಟ್ಟುಕೊಂಡು ಅದನ್ನು ಮುಟ್ಟಲು ಸತತ ಶ್ರಮಿಸಬೇಕು. ಆ ಗುರಿಯಂತೆ ಮುಂದುವರಿಯುವ ಪ್ರಮಾಣ ದಲ್ಲಿ ತೃಪ್ತಿಸೌಖ್ಯಗಳು ನಮಗೆ ಬಂದಾವು. ಅಷ್ಟೇ ಮಟ್ಟಿಗೆ ಅಹಿಂಸಾತ್ಮಕ ಸಮಾಜದ ಆವಿರ್ಭಾವಕ್ಕೂ ನಾವು ಕಾಣಿಕೆ ಸಲ್ಲಿಸಿದಂತೆಯೂ ಆದೀತು.

ಇತರರ ದಾರಿ ಕಾಯದೆ ಈ ಜೀವನಕ್ರಮವನ್ನು ಅನುಸರಿಸುವುದು ಯಾರಿಗಾದರೂ ಪೂರಾ ಸಾಧ್ಯ. ಕೆಲವೊಂದು ನಡೆವಳಿಕೆಯ ನಿಯಮಗಳು ವ್ಯಕ್ತಿಗೆ ಸಾಧ್ಯವಾದರೆ ವ್ಯಕ್ತಿಗಳ ಗುಂಪಿಗೂ ಸಾಧ್ಯವೇ. ಸರಿಯಾದ ಹಾದಿ ತುಳಿಯಲು ಯಾರೂ ಯಾರಿಗಾಗಿಯೂ ಕಾಯಬೇಕಾಗಿಲ್ಲವೆಂದು ನಾನು ಒತ್ತಿ ಹೇಳಬೇಕಾಗಿದೆ. ಉದ್ದೇಶ್ಯ ಪೂರಾ ಸಾಧ್ಯವಾಗದೆಂದಾಗ ಜನ ಆರಂಭಕ್ಕೇ ಹಿಂಜರಿಯುವುದು ಸ್ವಾಭಾವಿಕ. ಅಂಥ ಮನೋಭಾವ ನಿಜಕ್ಕೂ ಪ್ರಗತಿಗೆ ಬಾಧಕ.

ಅಹಿಂಸೆಯ ಮೂಲಕ ಸಮಾನ ವಿತರಣ ಹೇಗೆ ಸಾಧಿಸಬಹುದೆಂಬು ದನ್ನು ಈಗ ಪರ್ಯಾಲೋಚಿಸೋಣ. ಇದನ್ನು ತನ್ನ ಬಾಳಿನ ಜೀವನಾದರ್ಶ ಮಾಡಿಕೊಂಡಿರುವಾತ ಮೊದಲ ಹೆಜ್ಜೆ ಇಡಬೇಕು, ತನ್ನ ಜೀವನದಲ್ಲಿ ಆವಶ್ಯಕ ಪರಿವರ್ತನೆ ತಂದುಕೊಳ್ಳಬೇಕು. ಆತ ಭಾರತದ ಬಡತನವನ್ನು ಮನಗಂಡು ತನ್ನ ಆವಶ್ಯಕತೆಗಳನ್ನು ಕನಿಷ್ಠ ಮಿತಿಗೆ ಇಳಿಸಿಕೊಳ್ಳಬೇಕು. ಆತನ ಗಳಿಕೆ ಅಪ್ರಾಮಾಣಿಕತೆಯಿಂದ ಮುಕ್ತವಾಗಿರಬೇಕು. ಸಟ್ಟಾಬಾಜಿಯ ಆಸೆ ತೊರೆಯ ಬೇಕು. ಈ ಹೊಸ ಜೀವನಕ್ರಮಕ್ಕೆ ಅನುಗುಣವಾಗಿರಬೇಕು ಆತನ ವಸತಿ, ಬಾಳುವೆ. ಜೀವನದ ಒಂದೊಂದು ಕ್ಷೇತ್ರದಲ್ಲೂ ಆತ್ಮಸಂಯಮ ಇದ್ದೀತು. ತನ್ನ ಬಾಳಿನಲ್ಲಿ ಸಾಧ್ಯವಾದುದನ್ನೆಲ್ಲ ಮಾಡಿದ ಬಳಿಕವೇ ಆತ ಈ ಆದರ್ಶ ವನ್ನು ತನ್ನ ಸಂಗಡಿಗರಿಗೂ ನೆರೆಯವರಿಗೂ ಉಪದೇಶಿಸಬಲ್ಲ.

ಸಮಾನ ವಿತರಣದ ಈ ತತ್ತ್ವದ ಮೂಲದಲ್ಲಿ ಶ್ರೀಮಂತರ ತಮ್ಮ ಹೆಚ್ಚಿನ ಶ್ರೀಮಂತಿಕೆಯ ಧರ್ಮದರ್ಶಿತ್ವ ತತ್ತ್ವವೇ ನಿಜಕ್ಕೂ ಇರಬೇಕಾದುದು. ಏಕೆಂದರೆ ಆ ತತ್ತ್ವದಂತೆ ತಮ್ಮ ನೆರೆಯವರಿಗಿಂತ ಒಂದು ರೂಪಾಯಿ ಸಹ ಹೆಚ್ಚಾಗಿ ಯಾರೂ ಪಡೆದಿರತಕ್ಕದ್ದಲ್ಲ. ಈ ಮಾತು ಆಚರಣೆಗೆ ಬಂದೀತು ಹೇಗೆ? ಅಹಿಂಸಾತ್ಮಕವಾಗಿಯೋ? ಅಥವಾ ಶ್ರೀಮಂತರಿಂದ ಶ್ರೀಮಂತಿಕೆ ಯನ್ನು ಕಸಿದುಕೊಂಡೋ? ಹಾಗೆ ಮಾಡಬೇಕಾದಲ್ಲಿ ಸಹಜವಾಗಿ ಹಿಂಸೆ

ಯನ್ನೇ ಆಶ್ರಯಿಸಬೇಕಾದೀತು. ಈ ಹಿಂಸಾಕ್ರಿಯೆ ಸಮಾಜಕ್ಕೆ ಲಾಭಕರ ಅಲ್ಲ. ಸಮಾಜವೇ ಅದರಿಂದ ಬಡವಾದೀತು, ಸಂಪತ್ತನ್ನು ಸಂಗ್ರಹಿಸುವ ಕಲೆ ಅರಿತವನ ಸಾಮರ್ಥ್ಯ ಕಳೆದುಕೊಂಡೀತು. ಆದುದರಿಂದ ಅಹಿಂಸಕ ಮಾರ್ಗವೇ ಶ್ರೇಷ್ಠ. ಬಲ್ಲಿದನ ಸಂಪತ್ತು ಅವನ ಬಳಿಯೇ ಉಳಿದೀತು, ತನ್ನ ವೈಯಕ್ತಿಕ ಆವಶ್ಯಕತೆಗಳಿಗೆ ನ್ಯಾಯವಾಗಿ ಬೇಕಾದಷ್ಟನ್ನು ಆತ ಬಳಸಿಕೊಂಡು ಉಳಿದುದನ್ನು ಸಮಾಜಕ್ಕಾಗಿ ವಿನಿಯೋಗಿಸಲು ಧರ್ಮದರ್ಶಿಯಾಗಿ ಇದ್ದಾನು. ಈ ವಾದದಲ್ಲಿ ಧರ್ಮದರ್ಶಿ ಪ್ರಾಮಾಣಿಕನೆಂದು ತಿಳಿಯಲಾಗಿರುತ್ತದೆ.

ಮನುಷ್ಯ ತಾನು ಸಮಾಜದ ಸೇವಕನೆಂದು ಭಾವಿಸಿಕೊಂಡು, ಅದಕ್ಕಾಗಿ ಗಳಿಸುತ್ತ, ಅದರ ಹಿತಕ್ಕಾಗಿ ವ್ಯಯಿಸುತ್ತ ನಡೆದರೆ ಅವನ ಗಳಿಕೆಗೆ ಪರಿಶುದ್ಧತೆಯು ಪ್ರವೇಶವಾಗುತ್ತದೆ, ಆತನ ಉದ್ಯಮದಲ್ಲಿ ಅಹಿಂಸೆ ಇರುತ್ತದೆ. ಮಿಗಿಲಾಗಿ ಈ ಜೀವನವಿಧಾನದತ್ತ ಜನರ ಬುದ್ಧಿ ತಿರುಗಿದರೆ ಸಮಾಜದಲ್ಲಿ ಶಾಂತಿಯುತ ಕ್ರಾಂತಿ ಸಂಭವಿಸುತ್ತದೆ—ಅದೂ ಯಾವ ಕಹಿಯೂ ಇಲ್ಲದೆ.

ಮನುಷ್ಯಸ್ವಭಾವದಲ್ಲಿ ಅಂಥ ಪರಿವರ್ತನೆಗೆ ಯಾವ ಕಾಲದಲ್ಲಾದರೂ ಇತಿಹಾಸದ ನಿದರ್ಶನವಿದೆಯೆ ಎಂದು ಕೇಳಬಹುದು. ವ್ಯಕ್ತಿಗಳಲ್ಲಿ ಅಂಥ ಪರಿವರ್ತನೆ ಖಂಡಿತವಾಗಿ ಆಗಿದೆ. ಇಡೀ ಸಮಾಜದಲ್ಲಿ ಅದನ್ನು ತೋರಿಸುವುದು ಸಾಧ್ಯವಾಗದೆ ಇರಬಹುದು. ಇದುವರೆಗೆ ಬೃಹತ್ ಪ್ರಮಾಣದಲ್ಲಿ ಅಹಿಂಸೆಯ ಪ್ರಯೋಗ ನಡೆದಿಲ್ಲ ಎಂದಿಷ್ಟೇ ಇದರ ಅರ್ಥ. ಅಹಿಂಸೆ ಪ್ರಧಾನವಾಗಿ ವ್ಯಕ್ತಿಗಳ ಆಯುಧ, ಆದುದರಿಂದ ಆ ಕ್ಷೇತ್ರದ ಮಟ್ಟಿಗೆ ಮಾತ್ರ ಅದರ ಪರಿಮಿತಿ ಎಂಬ ತಪ್ಪು ನಂಬಿಕೆ ನಮ್ಮನ್ನು ಹೇಗೋ ಆವರಿಸಿಬಿಟ್ಟಿದೆ. ನಿಜಕ್ಕೂ ಇದು ಹೀಗಲ್ಲ. ಅಹಿಂಸೆ ನಿರ್ದಿಷ್ಟವಾಗಿಯೂ ಸಾಮಾಜಿಕ ಗುಣ. ಜನಕ್ಕೆ ಈ ಸತ್ಯವನ್ನು ಮನಗಾಣಿಸಿಕೊಡುವುದೇ ನನ್ನ ಪ್ರಯತ್ನ, ಅದೇ ನನ್ನ ಪ್ರಯೋಗ. ಅದ್ಭುತಗಳ ಇಂದಿನ ಯುಗದಲ್ಲಿ ಹೊಸದೆಂಬ ಕಾರಣದಿಂದಲೇ ಒಂದು ವಸ್ತು ಅಥವಾ ವಿಚಾರ ಅಪ್ರಯೋಜಕವಾಗದು. ಕಷ್ಟ, ಆದುದರಿಂದ ಅಸಾಧ್ಯ ಎಂಬುದು ಇಂದಿನ ಯುಗಧರ್ಮಕ್ಕೆ ಅನುಗುಣವಾದುದು ಅಲ್ಲ. ಕನಸಿನಲ್ಲೂ ಕಾಣದುದನ್ನು ಇಂದು ನಿತ್ಯವೂ ನೋಡುತ್ತಿದೇವೆ, ಅಸಾಧ್ಯವಾದುದು ಸಾಧ್ಯವೆಂದಾಗುತ್ತಿದೆ. ಹಿಂಸೆಯ ಕ್ಷೇತ್ರದಲ್ಲಿ ಈಚಿನ ದಿವಸಗಳಲ್ಲಿ

ಆಗುತ್ತಿರುವ ಆಶ್ಚರ್ಯಕರ ಸಂಶೋಧನೆಗಳಿಂದ ಸತತವಾಗಿ ಚಕಿತರಾಗುತ್ತಿದೇವೆ. ಆದರೆ ಅಹಿಂಸೆಯ ಕ್ಷೇತ್ರದಲ್ಲಿ ಇನ್ನೂ ಕನಸು ಕಾಣದಂಥ, ಅಸಾಧ್ಯವೆಂದೇ ತೋರುವಂಥ ಸಂಶೋಧನೆಗಳು ನಡೆಯುತ್ತವೆಂದು ನಾನು ಹೇಳುತ್ತೇನೆ. ಮತಧರ್ಮಗಳ ಇತಿಹಾಸದಲ್ಲಿ ಅಂಥ ದೃಷ್ಟಾಂತಗಳು ತುಂಬಿವೆ. ಸಮಾಜದಿಂದಲೆ ಧರ್ಮವನ್ನು ತೊಡೆಯುವ ಪ್ರಯತ್ನ ಮಾಯಾಮೃಗದ ಬೇಟೆಯೆ ಸರಿ. ಅಂಥ ಪ್ರಯತ್ನವೇನಾದರೂ ಸಫಲವಾದರೆ ಸಮಾಜ ವಿನಾಶವಾದಂತೆಯೇ. ಕುರುಡುನಂಬಿಕೆ, ದುಷ್ಟಸಂಪ್ರದಾಯ ಹಾಗೂ ಇತರ ದೋಷಗಳು ಯುಗಯುಗದಲ್ಲೂ ಒಳಹೊಕ್ಕು ಧರ್ಮವನ್ನು ತಾತ್ಕಾಲಿಕವಾಗಿ ಕಲುಷಿತಗೊಳಿಸುತ್ತವೆ. ಅವು ಬರುತ್ತವೆ, ಹೋಗುತ್ತವೆ. ಆದರೆ ಧರ್ಮ ಸನಾತನ, ಏಕೆಂದರೆ ವಿಶಾಲ ಅರ್ಥದಲ್ಲಿ ಜಗತ್ತಿನ ಉಳಿವೇ ಧರ್ಮದ ಮೇಲೆ ನಿಂತಿದೆ. ಈಶ್ವರೀಯ ನಿಯಮಕ್ಕೆ ವಿಧೇಯತೆಯೇ ಕಡೆಗೆ ಧರ್ಮದ ವ್ಯಾಖ್ಯೆ. ಈಶ್ವರ ಹಾಗೂ ಆತನ ನಿಯಮ ಎರಡೂ ಒಂದೇ. ಆದುದರಿಂದ ದೇವರು ಸನಾತನ, ನಿತ್ಯ-ಜೀವಂತ ನಿಯಮದ ಸಂಕೇತ. ನಿಜಕ್ಕೂ ಯಾರೂ ಎಂದೂ ಅವನನ್ನು ಪಡೆದಿಲ್ಲ. ಅವತಾರಪುರುಷರು, ಪ್ರವಾದಿಗಳು ತಮ್ಮ ತಪಃಪ್ರಭಾವದಿಂದ ಮಾನವಕುಲಕ್ಕೆ ಆ ನಿತ್ಯನಿಯಮದ ಕ್ವಚಿತ್ ದರ್ಶನ ಮಾಡಿಸಿದಾರೆ.

ಈ ಎಲ್ಲ ಪ್ರಬಲ ಪ್ರಯತ್ನಗಳ ಬಳಿಕವೂ ಶ್ರೀಮಂತರು ನಿಜವಾದ ಅರ್ಥದಲ್ಲಿ ಬಡವರ ಸಂರಕ್ಷಕರಾಗದೆ ಹೋದರೆ, ಬಡವರು ಹೆಚ್ಚು ಹೆಚ್ಚು ಅರೆಯಲ್ಪಟ್ಟು ಹಸಿವಿನಿಂದ ಸಾಯುವಂತಾದರೆ ಮಾಡುವುದೇನು? ಈ ಸಮಸ್ಯೆಗೆ ಉತ್ತರ ಹುಡುಕುತ್ತ ಅಹಿಂಸಾತ್ಮಕ ಅಸಹಕಾರ, ಸವಿನಯ ಶಾಸನ ಭಂಗಗಳೇ ಸರಿಯಾದ ದೋಷರಹಿತ ಮಾರ್ಗವೆಂಬ ನಿರ್ಣಯಕ್ಕೆ ಬಂದಿದೇನೆ. ಸಮಾಜದಲ್ಲಿ ಬಡವರ ಸಹಕಾರವಿಲ್ಲದೆಯೇ ಬಲ್ಲಿದರು ಹಣ ಗಳಿಸಲಾರರು. ಮನುಷ್ಯನಿಗೆ ಮೊದಲಿಂದಲೂ ಹಿಂಸೆ ಗೊತ್ತು, ಈ ಲಕ್ಷಣವನ್ನು ಆತ ಮೃಗದಿಂದ ತನ್ನ ಸ್ವಭಾವದಲ್ಲಿ ಪಡೆದುಕೊಂಡಿದಾನೆ. ಚತುಷ್ಪಾದಾವಸ್ಥೆ(ಪ್ರಾಣಿ)ಯಿಂದ ದ್ವಿಪಾದಾವಸ್ಥೆ(ಮನುಷ್ಯ)ಗೆ ಏರಿದಾಗಲೇ ಅಹಿಂಸೆಯ ಶಕ್ತಿಯ ಅರಿವು ಅವನ ಆತ್ಮವನ್ನು ಪ್ರವೇಶಿಸಿದುದು. ಅವನಲ್ಲಿ ಈ ಜ್ಞಾನ ಮೆಲ್ಲ ಮೆಲ್ಲನೆ, ಆದರೆ ಏಕಪ್ರಕಾರವಾಗಿ ಬೆಳೆದಿದೆ. ಈ ತಿಳಿವಳಿಕೆ ಬಡವರನ್ನೂ ಪ್ರವೇಶಿಸಿ ಅವರಲ್ಲಿಯೂ ಹರಡಿದುದಾದರೆ ಅವರೂ ಸಶಕ್ತರಾದಾರು.

ಅವರನ್ನು ಉಪವಾಸದ ಅಂಚಿಗೆ ಅಟ್ಟಿರುವ ಅರೆಯುವಂಥ ಅಸಮಾನತೆಗಳಿಂದ ಅಹಿಂಸಾತ್ಮಕವಾಗಿ ಮುಕ್ತರಾಗುವ ಮಾರ್ಗವನ್ನು ಅರಿತುಕೊಂಡಾರು.೯೮

## ಆರ್ಥಿಕ ಸಮಾನತೆ

ಹುಟ್ಟಿನಿಂದ ನಾವೆಲ್ಲ ಸಮಾನರು, ಅಂದರೆ ಸಮಾನ ಅವಕಾಶಕ್ಕೆ ನಮಗೆ ಹಕ್ಕುಂಟು; ಆದರೆ ಎಲ್ಲರಿಗೂ ಒಂದೇ ಬಗೆಯ ಶಕ್ತಿ ಇಲ್ಲ, ಇದು ಸಮಾಜದ ಬಗ್ಗೆ ನನ್ನ ಕಲ್ಪನೆ. ಸ್ವಾಭಾವಿಕವಾಗಿಯೇ ಅದು ಅಸಾಧ್ಯ. ಉದಾಹರಣೆಗೆ, ಎಲ್ಲರೂ ಒಂದೇ ಎತ್ತರ ಇರಲಾರರು, ಬಣ್ಣ ಅಥವಾ ಬುದ್ಧಿಯ ಮಟ್ಟ ಒಂದೇ ಆಗಿರಲಾರದು. ಆದಕಾರಣ ಕೆಲವರಿಗೆ ಹೆಚ್ಚು ಗಳಿಸುವ ಸಾಮರ್ಥ್ಯ, ಕೆಲವರಿಗೆ ಕಡಿಮೆ ಗಳಿಸುವ ಸಾಮರ್ಥ್ಯ. ಪ್ರತಿಭಾಸಂಪನ್ನರಿಗೆ ಹೆಚ್ಚು ಶಕ್ತಿ, ಅವರು ತಮ್ಮ ಶಕ್ತಿಯನ್ನು ಈ ಉದ್ದೇಶ್ಯಕ್ಕಾಗಿ ಬಳಸಿಯಾರು. ಅವರು ತಮ್ಮ ಪ್ರತಿಭೆಯನ್ನು ದಯೆಯಿಂದ ಉಪಯೋಗಿಸಿದರೆ ಅವರು ರಾಜ್ಯದ ಕೆಲಸ ಮಾಡಿದಂತೆಯೇ. ಅಂಥವರು ಧರ್ಮದರ್ಶಿಗಳಾಗಿರುತ್ತಾರೆ — ಬೇರಾವ ಷರತ್ತೂ ಅವರಿಗನ್ವಯಿಸದು. ಬುದ್ಧಿಶಾಲಿಯಾದವ ಹೆಚ್ಚು ಗಳಿಸಲಿ, ಅವನ ಪ್ರತಿಭೆಯನ್ನು ನಾನು ಕುಂಠಿತಗೊಳಿಸೆ. ಆದರೆ ಆತನ ಗಳಿಕೆಯ ಉತ್ತಮ ಪಾಲು ರಾಜ್ಯದ ಒಳಿತಿಗಾಗಿ ಬಳಕೆಯಾಗಬೇಕು—ಗಳಿಸುವ ಎಲ್ಲ ಮಕ್ಕಳ ಆದಾಯ ತಂದೆಯ ಕುಟುಂಬದ ಒಟ್ಟು ನಿಧಿಗೆ ಸೇರುವಂತೆ.೯೯

ಆರ್ಥಿಕ ಸಮಾನತೆಗಾಗಿ ಶ್ರಮಿಸುವುದೆಂದರೆ ಬಂಡವಾಳ ಹಾಗೂ ಶ್ರಮಗಳ ನಡುವಣ ನಿರಂತರ ಸಂಘರ್ಷವನ್ನು ತೊಡೆಯುವುದು ಎಂದು. ಒಂದು ಕಡೆ ರಾಷ್ಟ್ರದ ಸಂಪತ್ತಿನ ಬಹುಪಾಲನ್ನು ಹೊಂದಿರುವ ಕೆಲಮಂದಿ ಸಿರಿವಂತರ ಮಟ್ಟವನ್ನು ಕೆಳಕ್ಕೆ ತರುವುದು, ಮತ್ತೊಂದು ಕಡೆ ಅರೆಹೊಟ್ಟೆಗೆ ಉಣ್ಣುವ ಬತ್ತಲೆ ಜನಕೋಟಿಯನ್ನು ಮೇಲಕ್ಕೆ ಎತ್ತುವುದು. ಬಲ್ಲಿದರು ಹಾಗೂ ಹಸಿದ ಜನಕೋಟಿಗಳ ನಡುವಣ ವಿಶಾಲ ಅಂತರ ಇರುವಷ್ಟು ಕಾಲ ಅಹಿಂಸಾಪದ್ಧತಿಯ ರಾಜ್ಯವ್ಯವಸ್ಥೆ ಅಸಂಭವವೇ. ನವದೆಹಲಿಯ ಅರಮನೆಗಳ ಹಾಗೂ ಅದರ ಸಮೀಪದ ಬಡ ದುಡಿಮೆಗಾರರ ಶೋಚನೀಯ

ಗೂಡುಗಳ ನಡುವಣ ಅಂತರ ಸ್ವತಂತ್ರ ಭಾರತದಲ್ಲಿ ಒಂದು ದಿನದ ಮಟ್ಟಿಗೂ ಇರತಕ್ಕದ್ದಲ್ಲ; ಅಲ್ಲಿ ದೇಶದ ಅತ್ಯಂತ ಶ್ರೀಮಂತನಿಗೆ ಇರುವಷ್ಟೇ ಅಧಿಕಾರ ಬಡವರಿಗೂ ಸಹ. ಸಂಪತ್ತನ್ನೂ ಅದು ನೀಡುವ ಅಧಿಕಾರವನ್ನೂ ಸ್ವೇಚ್ಛೆಯಿಂದ ಬಿಟ್ಟುಕೊಟ್ಟು ಸರ್ವರ ಹಿತಕ್ಕಾಗಿ ಅದನ್ನು ಹಂಚಿಕೊಳ್ಳದಿದ್ದರೆ ಹಿಂಸಾತ್ಮಕ, ರಕ್ತಪಾತದ ಕ್ರಾಂತಿ ಒಂದಲ್ಲ ಒಂದು ದಿನ ಕಟ್ಟಿಟ್ಟದ್ದೇ.

ಎಷ್ಟೇ ಪರಿಹಾಸ್ಯವನ್ನು ಅದರ ಮೇಲೆ ಹೇರಿದರೂ ನನ್ನ ಧರ್ಮದರ್ಶಿತ್ವ ಸಿದ್ಧಾಂತಕ್ಕೆ ಅಂಟಿ ನಿಲ್ಲುತ್ತೇನೆ ನಾನು. ಅದನ್ನು ಮುಟ್ಟುವುದು ಕಠಿಣ, ದಿಟ. ಅಹಿಂಸೆಯೂ ಹಾಗೆಯೇ ಅಲ್ಲವೇ? ಈ ಕಡಿದಾದ ಗುಡ್ಡ ಹತ್ತಲು ೧೯೨೦ರಲ್ಲೇ ನಾವು ಮನಸ್ಸುಮಾಡಿದೆವು. ಸಾರ್ಥಕಪ್ರಯತ್ನ ಅದೆಂಬುದನ್ನು ಅರಿತಿದೇವೆ. ಅಹಿಂಸೆ ಕೆಲಸಮಾಡುವ ಬಗೆಯನ್ನು ದಿನದಿನವೂ ಮನಗಾಣಬೇಕಾದ ಅಗತ್ಯ ಅದರಲ್ಲಿ ಅಡಕವಾಗಿದೆ. ಕಾಂಗ್ರೆಸಿಗರು ಶ್ರದ್ಧೆಯಿಂದ ಸಂಶೋಧನೆ ನಡೆಸಿ ಅಹಿಂಸೆಯ ಅಗತ್ಯ ಹಾಗೂ ಸ್ವರೂಪಗಳನ್ನು ತರ್ಕಬದ್ಧವಾಗಿ ತಿಳಿದುಕೊಂಡಾರು ಎಂದು ನಿರೀಕ್ಷಿಸಲಾಗಿದೆ. ಇಂದಿನ ಅಸಮಾನತೆಗಳನ್ನು ಹಿಂಸಾತ್ಮಕವಾಗಿ ಅಥವಾ ಅಹಿಂಸಾತ್ಮಕವಾಗಿ ಹೇಗೆ ತೊಡೆಯಬಹುದೆಂದು ಅವರು ತಮ್ಮನ್ನು ತಾವೇ ಕೇಳಿಕೊಳ್ಳಬೇಕು. ಹಿಂಸೆಯ ಹಾದಿ ನಮಗೆ ಗೊತ್ತು. ಅದು ಎಲ್ಲೂ ಯಶಸ್ವಿಯಾಗಿಲ್ಲ.

ಈ ಅಹಿಂಸಾತ್ಮಕ ಪ್ರಯೋಗ ಇನ್ನೂ ನಡೆಯುತ್ತಿದೆ. ಎತ್ತಿತೋರಿಸಲು ನಮ್ಮ ಬಳಿ ಏನೂ ಇಲ್ಲ. ಈ ಪದ್ಧತಿ ಸಮಾನತೆಯ ದಿಕ್ಕಿನಲ್ಲಿ ಮೆಲ್ಲಮೆಲ್ಲನೆ ಕೆಲಸಮಾಡತೊಡಗಿದೆ ಎಂಬುದಂತೂ ದಿಟ. ಅಹಿಂಸೆ ಪರಿವರ್ತನೆಯ ಕ್ರಮವಾದುದರಿಂದ ಸಾಧಿಸಲ್ಪಟ್ಟ ಆ ಪರಿವರ್ತನೆ ಸ್ಥಿರವಾದುದೇ ಆಗಿದ್ದೀತು. ಅಹಿಂಸೆಯ ಆಧಾರದ ಮೇಲೆ ನಿರ್ಮಿತವಾದ ರಾಷ್ಟ್ರ, ಸಮಾಜ ಒಳಗಿಂದ, ಹೊರಗಿಂದ ತನ್ನ ಮೇಲಿನ ದಾಳಿಯನ್ನು ಎದುರಿಸಲು ಸಿದ್ಧವಾಗಿರಬೇಕು, ಸಶಕ್ತವಾಗಿರಬೇಕು. ಸಂಸ್ಥೆಯಲ್ಲಿ ಸಿರಿವಂತ ಕಾಂಗ್ರೆಸಿಗರೂ ಇದಾರೆ. ಅವರೇ ದಾರಿ ತೋರಬೇಕು ಪ್ರತಿಯೊಬ್ಬ ಕಾಂಗ್ರೆಸಿಗನೂ ಅತಿ ಉತ್ಕಟವಾದ ಆತ್ಮಶೋಧನೆ ಮಾಡಿಕೊಳ್ಳುವ ಅವಕಾಶವನ್ನು ಒದಗಿಸುತ್ತದೆ ಈ ಹೋರಾಟ. ಸ್ವರಾಜ್ಯ ಬಂದಮೇಲೆಯೇ ಅಲ್ಲವೆ ದೊಡ್ಡ ದೊಡ್ಡ ಸುಧಾರಣೆಗಳು ಬರುವುದು ಎಂದು ತಿಳಿಯುವವರು ಅಹಿಂಸಾತ್ಮಕ ಸ್ವರಾಜ್ಯ ಕೆಲಸಮಾಡುವ ಪ್ರಾಥಮಿಕ

ವಿಧಾನವನ್ನೂ ಅರಿಯರು ಎನ್ನಬೇಕಾದೀತು. ಎಂದೋ ಒಂದು ಸುಪ್ರಭಾತ ದಲ್ಲಿ ಅದು ಆಕಾಶದಿಂದ ಇದ್ದಕ್ಕಿದ್ದಂತೆ ಉದುರುವುದಿಲ್ಲ. ಸಾಮೂಹಿಕ ಸ್ವಶ್ರಮದಿಂದ ಇಟ್ಟಿಗೆಇಟ್ಟಿಗೆಯಾಗಿ ಕಟ್ಟಬೇಕು ಅದನ್ನು. ಆ ನಿಟ್ಟಿನಲ್ಲಿ ಬಲುದೂರ ಸಾಗಿಬಂದಿದೇವೆ. ಆದರೆ ಸ್ವರಾಜ್ಯವನ್ನು ಅದರ ಭವ್ಯ, ವೈಭವ ಸ್ವರೂಪದಲ್ಲಿ ಕಾಣಬೇಕಾದರೆ ಇನ್ನೂ ದೂರ ದೂರ, ಬಳಲಿಕೆ ಬರುವಷ್ಟು ದೂರ ನಾವು ಸಾಗಬೇಕು. ಅದಕ್ಕೆ ಪ್ರತಿಯೊಬ್ಬ ಕಾಂಗ್ರೆಸಿಗನೂ ಆರ್ಥಿಕ ಸಮತೆಯ ಸಾಧನೆಗೆ ತಾನು ಏನು ಮಾಡಿದೇನೆಂದು ತನ್ನನ್ನು ತಾನೇ ಕೇಳಿ ಕೊಳ್ಳಬೇಕು.೧೦೦

**ಪ್ರಶ್ನೆ**—ಆರ್ಥಿಕ ಸಮತೆ ಎಂದರೆ ನಿಜವಾಗಿ ನಿಮ್ಮ ಅರ್ಥವೇನು ? ನಿಮ್ಮ ಕಲ್ಪನೆಯಂತೆ ಶಾಸನಬದ್ಧ ಧರ್ಮದರ್ಶಿತ್ವ ಎಂಬುದು ಯಾವುದು ?

**ಉತ್ತರ**—ಗಾಂಧೀಜೀ ಹೇಳಿದರು : ತಮ್ಮ ಕಲ್ಪನೆಯ ಪ್ರಕಾರ ಪ್ರತಿಯೊಬ್ಬರ ಬಳಿಯೂ ಅಕ್ಷರಶಃ ಒಂದೇ ಪ್ರಮಾಣದಷ್ಟು ಹಣವಿರಬೇಕು ಎಂದಲ್ಲ. ಪ್ರತಿಯೊಬ್ಬರಿಗೂ ಅವರವರ ಅಗತ್ಯಕ್ಕೆ ಸಾಕಷ್ಟು ಇರಬೇಕು ಎಂದಷ್ಟೇ ಅದರ ಅರ್ಥ. ಚಳಿಗಾಲದಲ್ಲಿ ತಮಗೆ ಎರಡು ಶಾಲು ಬೇಕು, ತಮ್ಮ ಬಳಿ ತಮ್ಮ ಮಗನಂತೆಯೇ ಇರುವ ತಮ್ಮ ಮೊಮ್ಮಗ ಕನೂ ಗಾಂಧೀಗೆ ಯಾವ ಬೆಚ್ಚನೆಯ ತೊಡಿಗೆಯೂ ಬೇಡ. ಗಾಂಧೀಜೀಗೆ ಆಡಿನ ಹಾಲು, ಕಿತ್ತಲೆ ಹಾಗೂ ಇತರ ಹಣ್ಣುಗಳು ಬೇಕು. ಕನೂವಿಗೆ ಸಾಮಾನ್ಯ ಆಹಾರ ವಾದರೆ ಸಾಕು. ಕನೂವನ್ನು ಕಂಡರೆ ತನಗೆ ಈರ್ಷೆ, ಆದರೆ ಅದರಲ್ಲಿ ಅರ್ಥವಿಲ್ಲ. ಕನೂ ಹರೆಯದ ಹುಡುಗ, ತಾನು ಎಪ್ಪತ್ತಾರರ ಮುದುಕ. ತನ್ನ ತಿಂಗಳ ಆಹಾರದ ವೆಚ್ಚ ಕನೂವಿನದಕ್ಕಿಂತ ಎಷ್ಟೋ ಹೆಚ್ಚು. ಆದರೆ ಅದರಿಂದಾಗಿ ತಮ್ಮಲ್ಲಿ ಆರ್ಥಿಕ ಅಸಮತೆ ಇದೆಯೆಂದೇನೂ ಅರ್ಥವಲ್ಲ. ಆನೆಗೆ ಇರುವೆಗಿಂತ ಸಾವಿರಾರು ಪಟ್ಟು ಆಹಾರ ಬೇಕು, ಆದರೆ ಅದು ಅಸಮತೆಯ ಸೂಚಕವಲ್ಲ. "ಅವನವನಿಗೆ ಅವನವನ ಆವಶ್ಯಕತೆಯಷ್ಟು"—ಎಂಬುದೇ ಆರ್ಥಿಕ ಸಮಾನತೆಯ ನಿಜವಾದ ಅರ್ಥ. "ಅದೇ ಮಾರ್ಕ್ಸ್‌ನ ವ್ಯಾಖ್ಯೆ. ಒಬ್ಬಂಟಿ ಮನುಷ್ಯ, ಹೆಂಡತಿಯೂ ನಾಲ್ಕು ಮಕ್ಕಳೂ ಉಳ್ಳವನಷ್ಟೇ ತನಗೂ ಬೇಕೆಂದು ಕೇಳಿದರೆ ಅದು ಆರ್ಥಿಕ ಸಮತೆಯ ತತ್ತ್ವದ ಉಲ್ಲಂಘನೆಯೇ.

“ ಶ್ರೀಮಂತ ವರ್ಗಗಳಿಗೂ ಜನಕೋಟಿಗೂ ನಡುವೆ, ರಾಯ-ರಂಕರ ನಡುವೆ ಇರುವ ಕಣ್ಣುಕುಕ್ಕುವ ಅಂತರಗಳನ್ನು ‘ ಅವರಿಗೆ ಹೆಚ್ಚು ಬೇಕು ’—ಎಂಬ ನೆಪಹೂಡಿ ಯಾರೂ ಸಮರ್ಥಿಸದಿರಲಿ. ಅದು ವ್ಯರ್ಥ ವಿತಂಡವಾದ, ನನ್ನ ವಾದದ ವಿಡಂಬನ ಆದೀತು.” ಮುಂಬರಿದು ಅವರೆಂದರು : “ ಬಲ್ಲಿದರು-ಬಡವರ ನಡುವಣ ಇಂದಿನ ಅಂತರ ಕ್ಲೇಶಕರ ದೃಶ್ಯ. ಬಡಹಳ್ಳಿಗರನ್ನು ವಿದೇಶೀ ಸರಕಾರ ಹಾಗೂ ಪಟ್ಟಣವಾಸಿಗಳಾದ ಸ್ವದೇಶ ಬಾಂಧವರಿಬ್ಬರೂ ಸುಲಿಗೆ ಮಾಡುತ್ತಿದಾರೆ. ಅವರೇ ಹಾಲನ್ನು ಉತ್ಪತ್ತಿಮಾಡಿದರೂ ಅವರ ಮಕ್ಕಳಿಗೆ ಅದು ಸಿಗದು. ನಾಚಿಕೆಗೇಡು. ಪ್ರತಿಯೊಬ್ಬನಿಗೂ ಸಂತುಲಿತ ಆಹಾರ ಬೇಕು. ಇರಲು ಒಳ್ಳೆಯ ಮನೆ ಇರಬೇಕು. ಮಕ್ಕಳ ಶಿಕ್ಷಣಕ್ಕೆ ಯೋಗ್ಯ ವ್ಯವಸ್ಥೆ ಮತ್ತು ಸಾಕಷ್ಟು ವೈದ್ಯಕೀಯ ಸೌಲಭ್ಯ ಇರಲೇ ಬೇಕು.” ಅದೇ ಆರ್ಥಿಕ ಸಮಾನತೆಯ ಚಿತ್ರ. ಅತಿ ಕನಿಷ್ಠ ಆವಶ್ಯಕತೆಗಳಿಗಿಂತ ಹೆಚ್ಚಿನದಾದ ಎಲ್ಲವನ್ನೂ ಅವರು ಬಹಿಷ್ಕರಿಸಬಯಸಲಿಲ್ಲ. ಆದರೆ ಅವು ಬಡವರ ಪ್ರಧಾನ ಆವಶ್ಯಕತೆಗಳು ಪೂರೈಕೆಯಾದ ಬಳಿಕ ಬಂದಾವು. ಮೊದಲ ಸಂಗತಿಗಳು ಮೊದಲು ಬರಬೇಕು.

ಸಂಪತ್ತಿನ ಈಗಿನ ಒಡೆಯರ ಮಟ್ಟಿಗೆ ಹೇಳುವುದಾದರೆ ಅವರು ವರ್ಗಸಂಘರ್ಷ ಅಥವಾ ಸ್ವೇಚ್ಛಾಪೂರ್ವಕ ತಮ್ಮ ಸೊತ್ತಿನ ಧರ್ಮದರ್ಶಿತ್ವ —ಇವೆರಡರಲ್ಲಿ ಒಂದನ್ನು ಆರಿಸಿಕೊಳ್ಳಬೇಕು. ಅವರು ತಮ್ಮ ಸೊತ್ತಿನ ಯಾಜಮಾನ್ಯ ಉಳಿಸಿಕೊಳ್ಳಲು ಅವರಿಗೇ ಬಿಟ್ಟೇವು. ಅವರು ಸಂಪತ್ತನ್ನು ತಮಗಾಗಿ ಅಲ್ಲ, ರಾಷ್ಟ್ರಕ್ಕಾಗಿ ಹೆಚ್ಚಿಸಲು ತಮ್ಮ ಪ್ರತಿಭೆಯನ್ನು ಉಪಯೋಗಿಸಬೇಕು. ಆಗ ಶೋಷಣೆಗೆ ಅವಕಾಶ ಇರದು. ಅವರು ಸಲ್ಲಿಸಿದ ಸೇವೆ ಮತ್ತು ಸಮಾಜಕ್ಕೆ ಆದ ಲಾಭಕ್ಕೆ ತಕ್ಕಂತೆ ಅವರಿಗೆ ಸಂಭಾವನೆ ಸಿಕ್ಕೀತು. ಅವರ ಮಕ್ಕಳು ಯೋಗ್ಯರೆಂದು ಸಿದ್ಧರಾದರೆ ಮಾತ್ರ ಆ ಯಾಜಮಾನ್ಯ ಅವರಿಗೆ ಉಳಿದೀತು.

“ ನಾಳೆ ಭಾರತ ಸ್ವತಂತ್ರವಾಗಿಬಿಟ್ಟಾಗ ಎಲ್ಲ ಬಂಡವಾಳಗಾರರೂ ಶಾಸನಬದ್ಧ ಧರ್ಮದರ್ಶಿಗಳಾಗುವ ಅವಕಾಶ ಅವರಿಗೆ ಲಭಿಸೀತು ” ಎಂದರು ಕೊನೆಯಲ್ಲಿ. ಅಂಥ ಶಾಸನವನ್ನು ಮೇಲಿನಿಂದ ಹೊರಿಸುವುದಿಲ್ಲ. ಬುಡದಿಂದ ಅದು ಬೆಳೆದುಬರಬೇಕು. ಧರ್ಮದರ್ಶಿತ್ವದ ರಹಸ್ಯವನ್ನು ಜನ ಅರಿತು

ಕೊಂಡಾಗ ಜನರೇ ಗ್ರಾಮಪಂಚಾಯಿತಿಗಳಿಂದ ಮೊದಲು ಮಾಡಿ ಅಂಥ ಕಟ್ಟಳೆಗಳನ್ನು ರಚಿಸಿಯಾರು. ಹಾಗೆ ಕೆಳಗಿನಿಂದ ಬಂದುದು ನುಂಗಲು ಸುಲಭ. ಮೇಲಿನಿಂದ ಬಂದುದಾದರೆ ಪೆಡಂಭೂತವಾಗಿ ಪರಿಣಮಿಸೀತು.೧೦೧

**ಪ್ರಶ್ನೆ**—ಆರ್ಥಿಕ ಸಮತೆಯ ಗುರಿಯನ್ನು ಸಾಧಿಸುವ ನಿಮ್ಮ ಮಾರ್ಗಕ್ಕೂ ಕಮ್ಯುನಿಸ್ಟರ ಅಥವಾ ಸೋಷಲಿಸ್ಟರ ಮಾರ್ಗಕ್ಕೂ ಅಂತರ ವೇನು ?

**ಉತ್ತರ**—ಸೋಷಲಿಸ್ಟರೂ ಕಮ್ಯುನಿಸ್ಟರೂ ಇಂದೇ ಆರ್ಥಿಕ ಸಮತೆ ತರಲು ತಾವು ಏನನ್ನೂ ಮಾಡಲಾರೆವು ಎನ್ನುತ್ತಾರೆ. ಅದಕ್ಕಾಗಿ ಇಂದು ಅವರು ಕೇವಲ ಪ್ರಚಾರ ಕೈಗೊಳ್ಳುತ್ತಾರೆ. ಆ ಉದ್ದೇಶ್ಯದಿಂದ ದ್ವೇಷವನ್ನು ಹುಟ್ಟಿಸುವುದರಲ್ಲಿ, ಬೆಳೆಸುವುದರಲ್ಲಿ ಅವರಿಗೆ ನಂಬಿಕೆ. 'ರಾಜ್ಯ ಕೈಗೆ ಬಂದಾಗ ಸಮಾನತೆಯನ್ನು ಜಾರಿಮಾಡುತ್ತೇವೆ' ಎನ್ನುತ್ತಾರೆ ಅವರು. ನನ್ನ ಯೋಜನೆ ಯಂತೆ ಪ್ರಭುತ್ವ ಇರುವುದು ಜನರ ಇಚ್ಛೆಯನ್ನು ನಡೆಸುವುದಕ್ಕಾಗಿ, ತನ್ನ ಇಚ್ಛೆಯಂತೆ ನಡೆಯಲು ಜನರನ್ನು ಬಲಾತ್ಕರಿಸುವುದಕ್ಕಲ್ಲ. ಅಹಿಂಸೆಯ ಮೂಲಕ ಆರ್ಥಿಕ ಸಮತೆಯನ್ನು ನಾ ತರುವೆ, ದ್ವೇಷಕ್ಕೆ ವಿರುದ್ಧವಾಗಿ ಪ್ರೇಮದ ಶಕ್ತಿಯನ್ನು ಬಳಸಿಕೊಂಡು ಜನರನ್ನು ನನ್ನ ವಿಚಾರಕ್ಕೆ ಪರಿವರ್ತಿಸಿ ಕೊಳ್ಳುವೆ. ಇಡೀ ಸಮಾಜವನ್ನು ನನ್ನ ದೃಷ್ಟಿಗೆ ತಿರುಗಿಸುವವರೆಗೆ ನಾ ಕಾಯುವುದಿಲ್ಲ, ಈ ಕೂಡಲೇ, ನನ್ನಿಂದಲೇ ಪ್ರಾರಂಭಿಸಿಯೇನು. ನನ್ನ ಕಲ್ಪನೆಯ ಆರ್ಥಿಕ ಸಮತೆಯನ್ನು ತರಬೇಕಾದರೆ ನಾನು ಐವತ್ತು ಮೋಟಾರು ಕಾರುಗಳನ್ನು, ಅಷ್ಟೇ ಏಕೆ ಹತ್ತು ಎಕರೆ ಜಮೀನನ್ನು ಇಟ್ಟುಕೊಂಡಿದ್ದರೂ ಸಾಧ್ಯವಿಲ್ಲ ಎಂದು ಬೇರೆ ಹೇಳಬೇಕೆ? ಅದಕ್ಕಾಗಿ ನಾನು ಬಡವರಲ್ಲಿ ಅತಿ ಬಡವನ ಮಟ್ಟಕ್ಕೆ ನನ್ನನ್ನು ನಾನೇ ಇಳಿಸಿಕೊಳ್ಳಬೇಕು. ಕಳೆದ ಐವತ್ತಕ್ಕಿಂತ ಹೆಚ್ಚು ವರ್ಷಗಳಿಂದ ನಾನು ಯತ್ನಿಸುತ್ತಿರುವುದೇ ಅದಕ್ಕಾಗಿ. ಆದುದರಿಂದ ನಾನು ಅತ್ಯಂತ ಅಗ್ರಗಾಮಿ ಕಮ್ಯುನಿಸ್ಟ್, ಶ್ರೀಮಂತರು ನನಗೆ ಒದಗಿಸುವ ಕಾರುಗಳನ್ನೂ, ಇತರ ಸೌಲಭ್ಯಗಳನ್ನು ಬಳಸಿದರೂ ಸಹ, ಅವರಿಗೇನೂ ನನ್ನ ಮೇಲೆ ಹಿಡಿತವಿಲ್ಲ. ಜನಸ್ತೋಮದ ಹಿತ ಬೇಡುವ ಪಕ್ಷದಲ್ಲಿ ಕ್ಷಣಾರ್ಧದಲ್ಲಿ ನಾನು ಅವನ್ನೆಲ್ಲ ತೊರೆದೇನು."೧೦೨

**ಪ್ರಶ್ನೆ**—ನಿರ್ಮಾಣ ಕಾರ್ಯಕ್ರಮವನ್ನು ಕೈಗೊಂಡು ನಡೆಸುವಾಗ ಕಾಂಗ್ರೆಸಿಗ ಆರ್ಥಿಕ ಸಮತೆಯನ್ನು ಉಪದೇಶಿಸಬಹುದೇ ? ಸವಿನಯ ಶಾಸನ ಭಂಗದ ಕಾರ್ಯಕ್ರಮ ಅದನ್ನು ಹೇಗೆ ಆಗುಮಾಡಿಸೀತು ?

**ಉತ್ತರ**—ನಿಜವಾಗಿಯೂ ನೀವು ಉಪದೇಶಿಸಬಹುದು. ನಿಮ್ಮ ಭಾಷೆ ಕಟ್ಟುನಿಟ್ಟಾಗಿ ಅಹಿಂಸಾತ್ಮಕವಿರಬೇಕು. ಜಮೀನುದಾರರು ಹಾಗೂ ಬಂಡವಾಳಗಾರರ ಆಸ್ತಿಪಾಸ್ತಿ ಕಸಿದುಕೊಳ್ಳಬೇಕೆಂದು ಹೇಳುವ, ನಾನು ಬಲ್ಲ ಕೆಲವರ ಭಾಷೆಯಂತೆ ಇರಬಾರದು. ಉಪದೇಶಕ್ಕಿಂತ ಉತ್ತಮ ಮಾರ್ಗ ಒಂದನ್ನು ನಾ ತೋರಿದೇನೆ. ನಿರ್ಮಾಣ ಕಾರ್ಯಕ್ರಮ ಆ ಲಕ್ಷ್ಯದತ್ತ ದೇಶವನ್ನು ಬಹುದೂರ ಒಯ್ಯುತ್ತದೆ. ಅದಕ್ಕೆ ಈಗಲೇ ಅತ್ಯಂತ ಸುಮುಹೂರ್ತ. ರಾಟಿ ಹಾಗೂ ಇತರ ಸಹ-ಉದ್ಯೋಗಗಳು ಯಶಸ್ವಿಯಾಗಿ ನಡೆದರೆ ಎಲ್ಲ ಸಾಮಾಜಿಕ, ಆರ್ಥಿಕ ಅಸಮಾನತೆಗಳು ಹೆಚ್ಚುಕಡಿಮೆ ತೊಡೆದುಹೋದಾವು. ಅಹಿಂಸೆ ಜನರಿಗೆ ನೀಡುವ ಶಕ್ತಿಯ ಪ್ರಗತಿಶೀಲ ಪ್ರಜ್ಞೆ, ಹಾಗೂ ತಮ್ಮ ದಾಸ್ಯದೊಡನೆ ಸಹಕರಿಸಲು ವಿವೇಕಯುಕ್ತ ನಿರಾಕರಣೆ ಸಮಾನತೆಯನ್ನು ತರಲೇಬೇಕು ೧೦೩

## ಸಮಾನ ವೇತನ

ಸಾಮಾಜಿಕವಾಗಿ ಉಪಯುಕ್ತವಾದ ಉತ್ಪಾದಕ ಪರಿಶ್ರಮಕ್ಕೆ ದಿನಕ್ಕೆ ಎಂಟು ಗಂಟೆ ಹೊತ್ತು ಕೊಡುವ ಪ್ರತಿಯೊಬ್ಬನಿಗೂ ಆಜೀವಿಕೆಯನ್ನು ಪಡೆವ ಹಕ್ಕು ಉಂಟೆಂದು ನನ್ನ ಭಾವನೆ. ಪ್ರತಿಯೊಬ್ಬನಿಗೂ ಸಮಾನವೇತನ ಸಿಗಬೇಕೆಂಬುದೇ ನನ್ನ ಸಮಾಜವಾದದ ಆದರ್ಶ. ವಕೀಲ, ವೈದ್ಯ, ಶಿಕ್ಷಕ, ಕಾರ್ಮಿಕ, ಭಂಗಿ—ಎಲ್ಲರಿಗೂ ಒಂದೇ ವೇತನ ಲಭಿಸಬೇಕು. ಇಂದು ವೇತನಗಳು ಸಮಾನವಾಗಿಲ್ಲದುದಷ್ಟೇ ಅಲ್ಲ, ವರಿಷ್ಠ-ಕನಿಷ್ಠ ವೇತನಗಳ ನಡುವೆ ಆಕಾಶಕ್ಕೂ ಭೂಮಿಗೂ ಇರುವಷ್ಟು ಅಂತರವಿದೆ. ಇಂದಿನ ಸ್ಥಿತಿಯಲ್ಲಿ ವಕೀಲ ದಿನಕ್ಕೆ ಬೇಕಾದರೆ ಒಂದು ಸಾವಿರ ರೂಪಾಯಿ ಗಳಿಸಬಹುದು, ಭಂಗಿಗೆ ದಿನಕ್ಕೆ ಎರಡಾಣೆಯೂ ಸಿಗದಿರಬಹುದು."೧೦೪

ಜಗತ್ತೆಲ್ಲ ಬಯಸುವಂಥ ಆದರ್ಶ ಸ್ವತಂತ್ರ ಜೀವನವನ್ನು ಭಾರತ ಬಾಳಬೇಕಾದರೆ ಎಲ್ಲ ಭಂಗಿಗಳು, ವೈದ್ಯರು, ವಕೀಲರು, ಶಿಕ್ಷಕರು, ವರ್ತಕರು,

ಇತರರೂ ಒಂದು ದಿನದ ಪ್ರಾಮಾಣಿಕ ಪರಿಶ್ರಮಕ್ಕೆ ಒಂದೇ ಬಗೆಯ ಪ್ರತಿಫಲ, ಸಂಭಾವನೆಯನ್ನು ಪಡೆಯುವಂತಾಗಬೇಕು. ಇದು ನಿಸ್ಸಂಶಯ. ಭಾರತೀಯ ಸಮಾಜ ಈ ಗುರಿಯನ್ನು ಎಂದೂ ಮುಟ್ಟದಿರಬಹುದು. ಆದರೆ ಭಾರತ ಸುಖೀರಾಷ್ಟ್ರವಾಗಬೇಕಾದರೆ ಆ ಗುರಿಯತ್ತ, ಆ ಗುರಿಯತ್ತ ಮಾತ್ರವೇ ಪಯಣಗೊಳ್ಳಬೇಕು.೧೦೫

ಪ್ರಾರ್ಥನೆಯ ಬಳಿಕ ಮಾತನಾಡುತ್ತ ಗಾಂಧೀಜೀ ತಾವಂತೂ ಆದರ್ಶ ಸ್ಥಿತಿಯಲ್ಲಿ ಬ್ಯಾರಿಸ್ಟರಿಗೂ ಭಂಗಿಗೂ ಒಂದೇ ಸಂಭಾವನೆ ಸಿಗಬೇಕೆಂದು ನಂಬುವುದಾಗಿ ಹೇಳಿದರು. ಎಲ್ಲರಿಗೂ ತಿಳಿದಂತೆ ಇಡೀ ಜಗತ್ತಿನ ಸಮಾಜ ಆದರ್ಶದಿಂದ ಬಹುದೂರ ಇರುವುದು ತಮಗೂ ಗೊತ್ತಿದೆ ಎಂದು ಹೇಳಿದರು. ಪ್ರತಿಯೊಬ್ಬನಿಗೂ ದಿನವೊಂದಕ್ಕೆ ೧೦೦ ರೂ. ಕೊಡುವುದು ಅಸಾಧ್ಯ. ಬ್ಯಾರಿಸ್ಟರನಿಗೆ ಸಲ್ಲುತ್ತಿರುವುದಕ್ಕೆ ಅವನು ಅರ್ಹನಲ್ಲ ಎಂಬುದೂ ಗೊತ್ತು. ಕಕ್ಷಿಗಾರರಾದರೋ ಸಂತೋಷದಿಂದ ಹೇರಳ ಸಂಭಾವನೆ ಕೊಡುತ್ತಾರೆ. ಇನ್ನೂ ಕೆಳಗೆ ಬಂದರೆ ಜನ ಸಿಂಪಿಗನಿಗೆ ಸಂತೋಷವಾಗಿ ನಾಲ್ಕು ರೂಪಾಯಿ ಕೊಟ್ಟಾರು. ಭಂಗಿಗೆ ಮಾತ್ರ ದಿನಕ್ಕೆ ಎಂಟಾಣೆಗಿಂತ ಹೆಚ್ಚು ಕೊಡರು. ಗಳಿಕೆಯಲ್ಲಿ ಈ ಸಮಾಜವನ್ನು ಒಂದೇ ಮಟ್ಟಕ್ಕೆ ತರಲು ನಿತ್ಯನಿರಂತರ ತಾಳ್ಮೆಯ ಶಿಕ್ಷಣ ಬೇಕು. ಅಂಥ ಸಮಾನತೆಯ ಅವಸ್ಥೆ ಮುಟ್ಟಲು ಬಹಳ ಹೆಚ್ಚಿನ ತರಬೇತು ಅಗತ್ಯ. ಆದರೆ ಈ ನಡುವೆ ಮೇಲಿನ ಹಾಗೂ ಕೆಳಗಿನ ಮಟ್ಟಗಳ ನಡುವಣ ಅಂತರವನ್ನು ಬೆಸೆಯಲು ಸರ್ವಪ್ರಯತ್ನ ನಡೆಸಬೇಕು. ಜೀವನದಲ್ಲಿ ಇದ್ದಕ್ಕಿದ್ದಂತೆ ಮೇಲೇರಿಕೆ ಯಾವುದೂ ಇಲ್ಲ. .ಬಂಗಾರದ ತತ್ತಿ ಇಡುವ ಬಾತನ್ನು ಕೊಲ್ಲುವುದು ಬೇಡ. ಅಂಥ ಕ್ರಮದಿಂದ ದೇಶ ದಿವಾಳಿ ಎದ್ದೀತು.೧೦೬

**ಪ್ರಶ್ನೆ**—ದಿನವಿಡೀ ದುಡಿದರೂ ಹೊಟ್ಟೆತುಂಬ ಸಿಗದಿದ್ದರೆ ಏನು ಮಾಡಬೇಕು ?

**ಉತ್ತರ**—ದುಡಿಮೆಗಾರನಿಗೆ ದುಡಿಮೆಯ ಪ್ರತಿಫಲ ಸಿಗಲೇಬೇಕು. ಈ ನಿಯಮ ಪರ್ವತಗಳಷ್ಟೇ ಪುರಾತನ. ಎಲ್ಲ ಉಪಯುಕ್ತ ಪರಿಶ್ರಮಕ್ಕೂ ಸಮಾನ, ಪರ್ಯಾಪ್ತ ವೇತನ ದುಡಿಮೆಯಾಳಿಗೆ ಸಿಗಬೇಕು. ಆ ಕಾಲ

ಬರುವವರೆಗೆ ಪ್ರತಿಯೊಬ್ಬ ದುಡಿಮೆಗಾರನಿಗೂ ಅವನ ಹಾಗೂ ಅವನ ಕುಟುಂಬದ ಹೊಟ್ಟೆಬಟ್ಟೆಗಾಗುವಷ್ಟಾದರೂ ಸಿಗುವಂತೆ ಮಾಡುವುದೇ ಕನಿಷ್ಠ ಕರ್ತವ್ಯ. ಇಷ್ಟನ್ನೂ ದೊರಕಿಸುವ ಭರವಸೆ ಕೊಡದ ಸರಕಾರ ಸರಕಾರವೇ ಅಲ್ಲ. ಅದು ಅರಾಜಕತೆ. ಅಂಥ ರಾಜ್ಯದ ವಿರುದ್ಧ ಶಾಂತಿಯುತ ವಾಗಿ ಹೋರಾಡಬೇಕು. ಧಾನ್ಯದ ಅಂಗಡಿಗಳೂ ಹಾಗೂ ಉಗ್ರಾಣಗಳ ದರೋಡೆ ಅದಕ್ಕೆ ಪರಿಹಾರವಲ್ಲ. ಅನಾವಶ್ಯಕ ನಷ್ಟಕ್ಕೆ ಸಾವಿಗೆ ಅದು ದಾರಿ. ಅಂಜಿಕೆಯಿಂದ ಅಧಿಕಾರಿಗಳು ಸೋತರೂ ಅದು ಅವರಿಗಾಗಲಿ ಜನರಿಗಾಗಲಿ ಒಳ್ಳೆಯದನ್ನು ಮಾಡದು. ಅರಾಜಕತೆಯನ್ನು ಅದು ನೀಗಿಸದು, ಸ್ಥಿತಿಗತಿ ಎಂದಿನಂತೆಯೇ ಉಳಿದೀತು. ಜಗತ್ತಿನತ್ತ ಒಂದು ನೋಟ ಈ ಮಾತನ್ನು ಸ್ಥಿರಪಡಿಸೀತು.

ಆಹಾರಧಾನ್ಯದ ಅಂಗಡಿಗಳಲ್ಲಿ ದಾಸ್ತಾನು ಇದ್ದೂ ಹಸಿದ ಜನಕ್ಕೆ ಅವು ಸಿಗದೆ ಹೋದರೆ ಜನ ಶಾಂತಿಯುತ ಸತ್ಯಾಗ್ರಹ ಆಚರಿಸಬಹುದು. ಅವರಿಗೆ ಕೊಡದುದನ್ನು ಬಲಾತ್ಕಾರದಿಂದ ಅವರು ಪಡೆಯಲೆತ್ನಿಸಬಾರದು. ಆಮರಣಾಂತ ಉಪವಾಸಮಾಡಿ ತಮಗೂ ಇತರರಿಗೂ ಪರಿಹಾರ ದೊರಕಿಸಿ ಕೊಳ್ಳಬಹುದು. ತಾಳ್ಮೆಯಿದ್ದರೆ ನಾನು ಸೂಚಿಸುವ ಮಾರ್ಗದಿಂದ ಯಶಸ್ಸು ಖಂಡಿತ.೧೦೭

ರೂಪಾಯಿ ಆಣೆ ಕಾಸಾಗಿ ಪರಿವರ್ತಿಸುವ ಬದಲು ನಿಮ್ಮ ಪ್ರತಿಭೆಯನ್ನು ರಾಷ್ಟ್ರಸೇವೆಗಾಗಿ ಮುಡುಪಿಡಿ. ನೀವು ವೈದ್ಯರಾಗಿದ್ದರೆ ನಿಮ್ಮ ವೈದ್ಯಕೌಶಲ ವೆಲ್ಲ ಬೇಕಾಗುವಷ್ಟು ರೋಗರುಜಿನ ಭಾರತದಲ್ಲಿದೆ. ವಕೀಲರಾಗಿದ್ದರೆ ಸಾಕಷ್ಟು ಭಿನ್ನಾಭಿಪ್ರಾಯ–ಕಲಹಗಳು ಭಾರತದಲ್ಲಿವೆ. ವ್ಯಾಜ್ಯಗಳನ್ನು ಹೆಚ್ಚಿಸುವ ಬದಲು ಅವನ್ನು ಪರಿಹರಿಸಿ, ವ್ಯವಹಾರವನ್ನು ಇಲ್ಲದಂತೆ ಮಾಡಿ. ನೀವು ಎಂಜಿನಿಯರರೋ, ಜನರ ಅಗತ್ಯಕ್ಕೆ, ಅಳತೆಗೆ ತಕ್ಕಂಥ ಆರೋಗ್ಯಕರ, ಗಾಳಿಬೆಳಕುಳ್ಳ ಮಾದರಿ ಮನೆಗಳನ್ನು ಕಟ್ಟಿಕೊಡಿ. ಲೆಕ್ಕಕ್ಕೆ ಬಾರದುದು ಯಾವುದೂ ಇಲ್ಲ ನಿಮ್ಮ ಕಲಿಕೆಯಲ್ಲಿ. (ಗಾಂಧೀಜೀಯನ್ನು ಪ್ರಶ್ನಿಸಿದ ಮಿತ್ರರು ಒಬ್ಬ ಚಾರ್ಟರ್ಡ್ ಅಕೌಂಟೆಂಟರು. ಅವರತ್ತ ತಿರುಗಿ ನುಡಿದರು ಗಾಂಧೀಜೀ :) ನಮಗೆ ಎಲ್ಲೆಲ್ಲೂ ಅಕೌಂಟೆಂಟರೂ, ಕಾಂಗ್ರೆಸ್ ಹಾಗೂ ಅದರ ಜತೆಸಂಸ್ಥೆಗಳಿಗೆ ಲೆಕ್ಕಪತ್ರಶೋಧಕರು ಬಹಳ ಬೇಕಾಗಿದಾರೆ. ಭಾರತಕ್ಕೆ

ಬನ್ನಿ— ನಿಮಗೆ ಸಾಕಷ್ಟು ಕೆಲಸ ಕೊಡುತ್ತೇನೆ, ನಿಮ್ಮ ಕೂಲಿಯನ್ನೂ ಕೊಟ್ಟುಬಿಡುತ್ತೇನೆ, ದಿನಕ್ಕೆ ನಾಲ್ಕಾಣೆ, ಭಾರತದಲ್ಲಿ ಕೋಟಿಗಟ್ಟಲೆ ಜನ ದಿನಕ್ಕೆ ಪಡೆಯುವುದಕ್ಕಿಂತ ದಿಟಕ್ಕೂ ಅದು ಹೆಚ್ಚು!೧೦೮

## ನಿಯಂತ್ರಣಗಳು

"ನಿಯಂತ್ರಣದಿಂದ ಮೋಸ, ಸತ್ಯದ ಮರೆಮಾಚುವಿಕೆ, ಕಾಳಸಂತೆಯ ಹೆಚ್ಚಳ ಹಾಗೂ ಕೃತಕ ಅಭಾವಗಳು ಹುಟ್ಟುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ಜನರ ಮನುಷ್ಯತ್ವ ಕಳೆಯುತ್ತದೆ, ಅಭಿಕ್ರಮಶಕ್ತಿಯನ್ನು ಹೋಗಲಾಡಿಸುತ್ತದೆ, ಈ ಒಂದು ಪೀಳಿಗೆಯಿಂದ ಅವರು ಕಲಿತ ಸ್ವಾವಲಂಬನದ ತತ್ತ್ವಕ್ಕೆ ಅದು ತಿಲಾಂಜಲಿ ಇದ್ದಂತೆ. ಅದರಿಂದ ಜನ ಪರರ ಕೈಗೆ ಕಾಯಬೇಕಾಗುತ್ತದೆ. ಈ ದುರಂತಕ್ಕೆ ಸಾಟಿಯಾದುದು ಇಂದಿನ ಬೃಹತ್ಪ್ರಮಾಣದ ಭ್ರಾತೃಹತ್ಯೆ ಹಾಗೂ ಜನಸಂಖ್ಯೆಯ ಅದಲುಬದಲು ಮಾತ್ರ. ಆದರಿಂದ ಅನಾವಶ್ಯಕ ಸಾವುನೋವು, ಉಪವಾಸ, ಅರಿವೆ ಆಶ್ರಯಗಳಿಲ್ಲದೆ ವನವಾಸ—ಅದರಲ್ಲೂ ಬರಲಿರುವ ಚಳಿಗಾಲದ ಇದಿರಿನಲ್ಲಿ—ಇದೊಂದೇ ಈ ನಿಯಂತ್ರಣಗಳನ್ನು ಮೀರಿಸಬಲ್ಲ ದುರಂತ.

"ಈ ಆಹಾರನಿಯಂತ್ರಣ ಕಳೆದ ಎರಡನೆಯ ಮಹಾಯುದ್ಧದ ಕೆಟ್ಟ ಕುಲಧನ. ಆ ಸಮಯದಲ್ಲಿ ಬಹುಶಃ ನಿಯಂತ್ರಣ ಅನಿವಾರ್ಯವಿತ್ತೇನೋ. ಏಕೆಂದರೆ ಆಹಾರಧಾನ್ಯಗಳೂ ಇತರ ಆಹಾರಪದಾರ್ಥಗಳೂ ಬೃಹತ್ಪ್ರಮಾಣದಲ್ಲಿ ಆಗ ಹೊರಕ್ಕೆ ನಿರ್ಯಾತವಾಗುತ್ತಿತ್ತು. ಈ ಅಸಹಜ ರಫ್ತು ಖಂಡಿತ ಕೃತಕ ಬರಗಾಲ ಹುಟ್ಟಿಸುತ್ತಿತ್ತು, ಅದರಿಂದ ಎಷ್ಟೇ ದೋಷಯುಕ್ತವಿರಲಿ ರೇಶನಿಂಗ್ (ಸೀದಾ ಪದ್ಧತಿ) ಬರುತ್ತಿತ್ತು. ಆದರೆ ಈಗ ನಾವು ಬಯಸಿದರೆ ತಡೆಯಲಾಗದ ಯಾವ ರಫ್ತೂ ಇಲ್ಲ. ಭಾರತಕ್ಕೆ ಹೊರಗಿನಿಂದ ಆಹಾರ ತರಿಸಿಕೊಳ್ಳದಿದ್ದರೇ ಸಾಕು, ಜಗತ್ತಿನ ಹಸಿದ ಪ್ರದೇಶಗಳಿಗೆ ನಾವು ಎಷ್ಟೋ ಸಹಾಯ ಮಾಡಿದಂತೆ.

"ನನ್ನ ಎರಡು ಪೀಳಿಗೆಯ ಈ ಜೀವಮಾನದಲ್ಲಿ ಎಷ್ಟೋ ಸ್ವಾಭಾವಿಕ ಬರಗಾಲಗಳನ್ನು ನೋಡಿದೇನೆ. ಆದರೆ ರೇಶನಿಂಗ್‌ನ್ನು ಕನಸಿನಲ್ಲೂ ಕಂಡ ಒಂದು ಸನ್ನಿವೇಶವೂ ನೆನಪಿಲ್ಲ.

" ಈಶ್ವರನ ಕೃಪೆ, ಈ ಸಲ ಮಳೆ ನಮ್ಮ ಕೈಬಿಟ್ಟಿಲ್ಲ. ಆದುದರಿಂದ ನಿಜವಾದ ಅನ್ನಕ್ಷಾಮ ಎಲ್ಲೂ ಇಲ್ಲ. ಭಾರತದ ಹಳ್ಳಿಗಳಲ್ಲಿ ಸಾಕಷ್ಟು ಧಾನ್ಯ, ಬೇಳೆಗಳು, ಎಣ್ಣೆಬೀಜಗಳು ಇವೆ. ಅನ್ನ ಬೆಳೆಯುವವರಿಗೆ ಧಾರಣೆವಾಸಿಯ ಮೇಲಿನ ಈ ಕೃತಕ ನಿಯಂತ್ರಣ ಅರ್ಥವೇ ಆಗುವುದಿಲ್ಲ. ಆದಕಾರಣ ಬಹಿರಂಗ ಮಾರುಕಟ್ಟೆಯಲ್ಲಿ ಸಿಗುವ ಬೆಲೆಗಿಂತ ಕಡಿಮೆಗೆ ಮಾರಲು ಸಂತೋಷದಿಂದ ಅವರು ಒಪ್ಪರು. ಈ ನಗ್ನಸತ್ಯಕ್ಕೆ ನಿದರ್ಶನವೇ ಬೇಕಿಲ್ಲ. ಇದಕ್ಕೆ ಕೆಂಪು ಪಟ್ಟೆಯ ಕಡತಗಳಲ್ಲಿ ಹೂತುಹೋದ, ಕುರ್ಚಿ–ಮೇಜು ಕೆಲಸದ ಅಧಿಕಾರಿಗಳಾಗಲಿ, ಅಂಕಿ ಅಂಶಗಳಾಗಲಿ ಬೇಕಿಲ್ಲ, ಉದ್ದುದ್ದದ ವರದಿಗಳನ್ನೂ ಪ್ರಬಂಧಗಳನ್ನೂ ಬರೆದು ಅಭಾವವನ್ನು ಸಿದ್ಧಪಡಿಸಬೇಕಾಗಿಲ್ಲ. ಇದ್ದಕ್ಕಿದ್ದಂತೆ ಜನಸಂಖ್ಯೆ ಮಿತಿಮೀರಿ ಹೆಚ್ಚಿಬಿಟ್ಟಿದೆಯೆಂಬ ಭೂತ ತೋರಿಸಿ ಹೆದರಿಸುವ ಪ್ರಯತ್ನ ಮಾಡುವುದಿಲ್ಲವೆಂದು ಆಶಿಸೋಣ.

" ನಮ್ಮ ಮಂತ್ರಿಗಳು ಜನತೆಯವರು, ಜನತೆಯಿಂದ ಬಂದವರು. ಅಧಿಕಾರದ ಗದ್ದುಗೆಯಲ್ಲಿ ಕೂತುಕೊಳ್ಳದೆ ಇದ್ದರೂ ಎಷ್ಟು ಬೇಗ ನಿಯಂತ್ರಣಗಳು ರದ್ದಾದರೆ ಅಷ್ಟು ಒಳಿತು ಎಂಬ ಪ್ರಬಲ ಅಭಿಪ್ರಾಯವುಳ್ಳ ಅನುಭವೀ ಜನರಿಗಿಂತ ತಮ್ಮ ತಿಳಿವಳಿಕೆ ಹೆಚ್ಚು ಎಂಬ ದುರಭಿಮಾನವನ್ನು ಅವರು ತಳೆಯದಿರಲಿ. ರೇಶನಿಂಗ್ ಪದ್ಧತಿಯನ್ನೇ ಅವಲಂಬಿಸಿರುವ ಜನರಿಗೆ ತಿನ್ನಲು ಯೋಗ್ಯವಾದ ಆಹಾರಧಾನ್ಯಗಳೂ ದ್ವಿದಳಧಾನ್ಯಗಳೂ ಸಿಗುವುದಿಲ್ಲವೆಂದೂ, ಆ ಕಾರಣದಿಂದ ಕೆಟ್ಟ ಆಹಾರ ತಿಂದು ಜನ ಅನಾವಶ್ಯಕವಾಗಿ ರೋಗಪೀಡಿತರಾಗುತ್ತಿದಾರೆಂದೂ ವೈದ್ಯರೊಬ್ಬರು ಬರೆಯುತ್ತಾರೆ.

" ಈ ನಿಯಂತ್ರಿತ ಆಹಾರಧಾನ್ಯಗಳಿಗೆ ಬದಲಾಗಿ ಬಹಿರಂಗ ಮಾರುಕಟ್ಟೆಯಲ್ಲಿ ಕೊಂಡ ಒಳ್ಳೆ ಆಹಾರಧಾನ್ಯಗಳ ಅಂಗಡಿಗಳನ್ನು ಬೇಕಾದರೆ ಸರಕಾರ ಸುಲಭವಾಗಿ ನಡೆಸಬಹುದು. ಹಾಗೆ ಸರಕಾರ ಬೆಲೆಗಳನ್ನು ತಾನಾಗಿಯೇ ನಿಯಮನಗೊಳಿಸಬಹುದು. ಕದ್ದು ಮುಚ್ಚಿಟ್ಟ ಧಾನ್ಯಗಳನ್ನು ಹೊರಗೆಳೆಯಬಹುದು. ಆಹಾರ ಬೆಳೆಯುವವರನ್ನೂ, ಮಾರುವ ವರ್ತಕರನ್ನೂ ಸರಕಾರ ಸಂಬಲಾರದೇ ? ಜನತಂತ್ರ ರಾಜ್ಯಶಕ್ತಿಯ ನಡುಕಟ್ಟಿನ ಬಿಗಿಯಾದ ಬಂಧನದಿಂದ ಮುರಿದು ಬಿದ್ದೀತು. ಅದು ನಂಬಿಕೆಯಿಂದ ಮಾತ್ರವೇ ಉಳಿಯಬಲ್ಲುದು. ದುಡಿಯಲು ಇಷ್ಟವಿಲ್ಲವೆಂದಾಗಲಿ, ಒಬ್ಬರೊಬ್ಬರನ್ನು ಮೋಸ

ಗೊಳಿಸುವ ಕಾರಣದಿಂದಾಗಲಿ ಜನ ಸತ್ತರೆ ಅದು ಸ್ವಾಗತಾರ್ಹ ಬಿಡುಗಡೆ ಎಂದು ಭಾವಿಸೋಣ. ಉಳಿದವರಾದರೂ ಸೋಮಾರಿತನದ, ಆಲಸ್ಯದ, ಕ್ರೂರ ಸ್ವಾರ್ಥದ ಪಾಪವನ್ನು ಮತ್ತೆ ಮಾಡದಿದ್ದಾರು."೧೧೯

"ಸಕ್ಕರೆಯ ಮೇಲಿನ ನಿಯಂತ್ರಣ ಹೋಗಿದೆ, ಧಾನ್ಯಗಳು-ಬಟ್ಟೆಯ ಮೇಲಿನ ನಿಯಂತ್ರಣವೂ ಹೋದೀತು. ಇದ್ದಕ್ಕಿದ್ದಂತೆ ಬೆಲೆಗಳನ್ನು ಇಳಿಸುವ ಉದ್ದೇಶ್ಯ ಇದರಲ್ಲಿಲ್ಲ. ನಮ್ಮ ಜೀವನ ಸ್ವಾಭಾವಿಕವಾಗಲಿ ಎಂಬುದೇ ಗುರಿ. ಮೇಲಿನಿಂದ ಹೊರಿಸುವ ನಿಯಂತ್ರಣ ಎಂದಿಗೂ ಕೆಟ್ಟುದೇ. ಈ ದೇಶದಲ್ಲಂತೂ ಇನ್ನೂ ಕೇಡು, ಏಕೆಂದರೆ ಅನೇಕ ಕೋಟಿ ಜನರ ರಾಷ್ಟ್ರ, ಬಹುವಿಶಾಲ ದೇಶ. ದೇಶ ಎರಡಾಗಿ ಒಡೆದದ್ದನ್ನಂತೂ ನಾ ಲೆಕ್ಕಕ್ಕೆ ತೆಗೆದುಕೊಳ್ಳುತ್ತಿಲ್ಲ. ನಾವೇನೂ ಸೈನಿಕ ರಾಷ್ಟ್ರವಲ್ಲ. ನಮಗೆ ಬೇಕಾದಷ್ಟು ಆಹಾರವನ್ನೂ, ಹತ್ತಿಯನ್ನೂ ಬೆಳೆಯುತ್ತೇವೆ, ಬೆಳೆಯಬಲ್ಲೆವು. ನಿಯಂತ್ರಣಗಳು ರದ್ದಾದರೆ ದೇಶ ನಿರಾತಂಕ ವಾಗಿ ಉಸಿರಾಡೀತು. ತಪ್ಪುಗಳನ್ನು ಮಾಡಲೂ ಅದಕ್ಕೆ ಅಧಿಕಾರ ಇದ್ದೀತು. ಮುಂದೆ ನಡೆಯುವುದು, ಎಡವುವುದು, ಸುಧಾರಿಸಿ ಚೇತರಿಸಿಕೊಳ್ಳುವುದು— ಇದು ಪ್ರಗತಿಯ ಪುರಾತನ ಪದ್ಧತಿ, ಇದೇ ಸರಿಯಾದ ಪದ್ಧತಿ. ಮಗುವನ್ನು ಹತ್ತಿಯಲ್ಲೇ ಸುತ್ತಿಟ್ಟರೆ ಅದು ಬೆಳೆಯದು, ಸತ್ತೀತು. ಅದು ದಷ್ಟಪುಷ್ಟ ಮನುಷ್ಯನಾಗಬೇಕಾದರೆ ಅದನ್ನು ಬಿಸಿಲು ಚಳಿ ಮಳೆಗಾಳಿಗೆ ಒಡ್ಡಬೇಕು, ಅವನ್ನು ಗೆಲ್ಲುವುದನ್ನು ಕಲಿಸಬೇಕು. ಅದೇ ರೀತಿಯೇ ಸರಕಾರವೆಂದು ಕರೆಸಿಕೊಳ್ಳಲು ಅರ್ಹವಾದ ಸರ್ಕಾರ ಕೊರತೆಗಳನ್ನು, ಕೆಟ್ಟ ಕಾಲಮಾನ ಗಳನ್ನು, ಇತರ ಕಷ್ಟಕಾರ್ಪಣ್ಯಗಳನ್ನು ಜನ ತಮ್ಮ ಸಾಮೂಹಿಕ ಪ್ರಯತ್ನ ದಿಂದ ಎದುರಿಸುವುದನ್ನು ರಾಷ್ಟ್ರಕ್ಕೆ ಕಲಿಸಬೇಕು; ಹೇಗೋ ಪ್ರಯತ್ನವಿಲ್ಲದೆ ಬದುಕುವುದನ್ನಲ್ಲ.

"ಹೀಗೆ ವಿಚಾರಮಾಡಿದರೆ ವಿನಿಯಂತ್ರಣ ಎಂದರೆ ದೂರದೃಷ್ಟಿಯ ಹೊಣೆಗಾರಿಕೆಯನ್ನು ಸರಕಾರದ ಹಲಕೆಲವು ಸದಸ್ಯರ ಕೈಯಿಂದ ರಾಷ್ಟ್ರದ ಜನಕೋಟಿಗೆ ಹಸ್ತಾಂತರಗೊಳಿಸುವುದು ಎಂದರ್ಥ. ಜನತೆಗೆ ತನ್ನ ಕರ್ತವ್ಯ ತೀರಿಸಬೇಕಾಗಿರುವ ಕಾರಣ ಸರಕಾರ ಹೊಸ ಹೊಸ ಕೆಲಸಗಳನ್ನು ನೆರವೇರಿಸ ಬೇಕಾದೀತು. ಸಾರಿಗೆಯ ಸೌಲಭ್ಯಗಳನ್ನು ಸುಧಾರಿಸಬೇಕಾದೀತು. ಹೆಚ್ಚು ಆಹಾರ ಬೆಳೆಯುವ ಕ್ರಮಗಳನ್ನು ಜನರಿಗೆ ಸಾಮಾನ್ಯವಾಗಿ ತಿಳಿಸಬೇಕಾ

ದೀತು. ಅದಕ್ಕೆ ವ್ಯವಸಾಯ ಇಲಾಖೆ ಬಂಡವಾಳಗಾರ ಬೆಳೆಗಾರನಿಗಿಂತ ಹೆಚ್ಚಾಗಿ ಸಣ್ಣ ಬೆಳೆಗಾರನಿಗೆ ಹೇಗೆ ಸೇವೆ ಸಲ್ಲಿಸಬಹುದೆಂಬುದನ್ನು ಕಲಿಯಬೇಕು. ಸರಕಾರ ಇಡೀ ಜನತೆಯನ್ನು ನಂಬಬೇಕು, ಅವರ ಕೆಲಸಕಾರ್ಯಗಳ ಕಡೆ ದೃಷ್ಟಿ ಇಟ್ಟಿರಬೇಕು, ಮತ್ತು ಯಾವಾಗಲೂ ಸಣ್ಣ ಸಣ್ಣ ರೈತರ ಒಳಿತನ್ನು ಧ್ಯಾನದಲ್ಲಿ ಇಟ್ಟಿರಬೇಕು. ಇಂದಿನತನಕ ಅವರ ಕಡೆ ಗಮನವನ್ನೇ ಕೊಟ್ಟಿಲ್ಲ. ಕೋಟಿಗಟ್ಟಲೆ ಜನರಲ್ಲಿ ಇವರೇ ಬಹುಸಂಖ್ಯಾಕರು. ರೈತ ತನ್ನ ಬೆಳೆಯನ್ನು ಬಳಸಿಕೊಳ್ಳುವವನು ತಾನೇ. ಬೆಳೆಯ ಸ್ವಲ್ಪ ಭಾಗವನ್ನು ಆತ ಮಾರುತ್ತಾನೆ. ಅದಕ್ಕೆ ಬರುವ ಬೆಲೆಯಿಂದ ಜೀವನಕ್ಕೆ ಬೇಕಾದ ಇತರ ವಸ್ತುಗಳನ್ನು ಆತ ಕೊಳ್ಳುತ್ತಾನೆ. ನಿಯಂತ್ರಣಗಳ ಪರಿಣಾಮವಾಗಿ ಬಹಿರಂಗ ಪೇಟೆಗಿಂತ ಅವನ ವಸ್ತುಗಳಿಗೆ ಕಡಿಮೆ ಬೆಲೆ ಸಿಕ್ಕುತ್ತದೆ. ಆದುದರಿಂದ ಆತನಿಗೆ ಸಿಗುವ ಹೆಚ್ಚಿನ ಧಾರಣೆಯ ಮಟ್ಟಿಗೆ ಆಹಾರಪದಾರ್ಥಗಳ ಬೆಲೆ ಏರುವುದು ಸಹಜ. ಅದಕ್ಕಾಗಿ ಬಳಕೆಗಾರರು ಕರುಬಬಾರದು. ಈ ಸಂದರ್ಭದಲ್ಲಿ ಹೆಚ್ಚಿನ ಧಾರಣೆಯ ಎಲ್ಲ ಪ್ರಮಾಣವೂ ಬೆಳೆಗಾರನಿಗೇ ಮುಟ್ಟುವಂತೆ ಸರಕಾರ ನೋಡಬೇಕು. ಈ ಮಾತನ್ನು ಜನರಿಗೆ ದಿನದಿನವೂ, ವಾರವಾರವೂ ಸ್ಪಷ್ಟಪಡಿಸಬೇಕು. ಶ್ರೀಮಂತರಾದ ಕಾರ್ಖಾನೆದಾರರು, ದಳ್ಳಾಳಿಗಳು ಸರಕಾರಕ್ಕೆ ಸಹಕಾರ ಕೊಟ್ಟು, ಅಧೀನವಾಗಿ ಕೆಲಸಮಾಡಬೇಕು. ಈ ವಿಧಾನ ಈಗ ಆರಂಭವಾಗಿದೆಯೆಂದು ತಿಳಿದಿದೇನೆ. ಈ ಹಲವು ಜನರಲ್ಲಿ, ಸಂಘಸಂಸ್ಥೆಗಳಲ್ಲಿ ಪೂರಾ ಒಮ್ಮತಸಮ್ಮತ ಇರಬೇಕು. ಇಲ್ಲಿನತನಕ ಅವರು ಬಡಜನರನ್ನು ಹೀರಿದಾರೆ. ಸ್ವಾರ್ಥಕ್ಕಾಗಿ ತಮ್ಮತಮ್ಮಲ್ಲೇ ಅಸ್ವಸ್ಥ ಸ್ಪರ್ಧೆ ಹೂಡಿವಾರೆ. ಇದೆಲ್ಲ ಹೋಗಬೇಕು — ಅದರಲ್ಲೂ ಮುಖ್ಯವಾಗಿ ಅನ್ನ, ಬಟ್ಟೆಗಳ ಕ್ಷೇತ್ರದಲ್ಲಿ ಲಾಭಗಾರಿಕೆ ಪೂರಾ ಇಲ್ಲದಂತಾಗಬೇಕು. ನಿಯಂತ್ರಣಗಳನ್ನು ತೆಗೆಯುವುದರಿಂದ ಲಾಭಗಾರಿಕೆ ಹೆಚ್ಚಿಸಿಕೊಳ್ಳುವುದೇ ಸಫಲಗೊಂಡರೆ ಅದರ ಉದ್ದೇಶ್ಯವೇ ವಿಫಲವಾದಂತೆ. ಈ ಹಣಗಾರ ಹಿತಗಳು ಸಂದರ್ಭಕ್ಕೆ ತಕ್ಕಂತೆ ಮುಂದೆ ಬಂದಾರೆಂದು ಆಶಿಸೋಣ.೧೧೦

## ಅಧ್ಯಾಯ – ೯

# ಔದ್ಯೋಗೀಕರಣ

"ಔದ್ಯೋಗೀಕರಣ ನಿಸರ್ಗನಿಯಮವಿದ್ದಂತೆ. ಬಯಸಲಿ ಬಿಡಲಿ, ಭಾರತವೂ ಅದರಿಂದ ಕೊಚ್ಚಿಯೇ ಹೋದೀತು ಎನ್ನುವವರು ಬರ್ಟ್ರೆಂಡ್ ರಸೆಲ್. ಔದ್ಯೋಗೀಕರಣಕ್ಕೆ ನಮ್ಮದೇ ಆದ ಪರಿಹಾರ ಹುಡುಕಬೇಕು ಎನ್ನುತ್ತಾರೆ ಅಂಥ ಜನ. ಅವರ ಮಾತಿನಲ್ಲಿ ಸತ್ಯವಿದೆ. ಔದ್ಯೋಗೀಕರಣ ಇಡೀ ಜಗತ್ತನ್ನು ಕೊಚ್ಚಿಕೊಂಡು ಹೋಗುತ್ತಿದೆ, ಹೀಗೆ ನೆರೆ ಬಂದುಹೋದ ಮೇಲೆ ಅವರು ತಮ್ಮ ತಮ್ಮ ಪರಿಹಾರಸೂತ್ರಗಳನ್ನು ಅವರವರು ಕಂಡು ಕೊಳ್ಳುತ್ತಿದಾರೆ. ಯೂರೋಪನ್ನೇ ತೆಗೆದುಕೊಳ್ಳಿ. ಯೂರೋಪ್ ನಾಶ ವಾದೀತೆಂದು ನಾ ನಂಬುವುದಿಲ್ಲ. ಮಾನವಸ್ವಭಾವದಲ್ಲಿ ನನಗೆ ಅಪಾರ ನಂಬಿಕೆ ಇದೆ. ಮೊದಲೋ ಕೊನೆಗೋ ಮಾನವಪ್ರಕೃತಿ ಪರಿಹಾರ ಕಂಡೇ ಹಿಡಿದೀತು. ಭಾರತ ತಾನು ಬಯಸಿದರೂ ಔದ್ಯೋಗೀಕರಣದ ಮುಷ್ಟಿಯಿಂದ ಪಾರಾಗಬಲ್ಲುದೇ ?"

ಹೌದು, ಔದ್ಯೋಗೀಕರಣ ನಿಸರ್ಗನಿಯಮವಿದ್ದಂತೆ, ಆದರೆ ನಿಸರ್ಗ ವನ್ನು ನಿಯಂತ್ರಿಸಲು, ಅದರ ನಿಯಮಗಳನ್ನು ಗೆಲ್ಲಲು ಮನುಷ್ಯನಿಗೆ ಸಾಧ್ಯ. ಅವನ ಗೌರವ, ಗಾಂಭೀರ್ಯ, ಅಭೇದ್ಯ ಅಡ್ಡಿಗಳ ಇದುರಿನಲ್ಲೂ ದೃಢಸಂಕಲ್ಪ ವನ್ನು ಅವನಿಂದ ಬೇಡುತ್ತವೆ. ನಮ್ಮ ಅನುದಿನದ ಬದುಕೂ ಅಂಥ ಜೈತ್ರ ಯಾತ್ರೆಯೇ. ಬೇಸಾಯಗಾರನಿಗೆ ಅದು ಚೆನ್ನಾಗಿ ಗೊತ್ತು.

ಔದ್ಯೋಗೀಕರಣ ಎಂದರೆ ಬಹುಸಂಖ್ಯ ಜನರ ಮೇಲೆ ಹಿಡಿಯಷ್ಟು ಜನರ ಹಿಡಿತ ಎಂದಲ್ಲದೆ ಮತ್ತೇನು ? ಅದರಲ್ಲಿ ಆಕರ್ಷಕವಾದುದೇನೂ ಇಲ್ಲ, ಅನಿವಾರ್ಯವಾದುದೂ ಅದರಲ್ಲಿಲ್ಲ. ಹಿಡಿಯಷ್ಟು ಜನರ ಸವಿಮಾತುಗಳಿಗೆ ನಕಾರ ನುಡಿಯುವ ಎದೆಗಾರಿಕೆಯನ್ನು ಬಹುಜನರು ತಂದುಕೊಂಡರೆ ಅಲ್ಪ ಸಂಖ್ಯಾಕರ ಆಟ ನಿಂತಂತೆಯೇ.

ಮಾನವಸ್ವಭಾವದಲ್ಲಿ ವಿಶ್ವಾಸಹೊಂದಿರುವುದು ಒಳಿತೇ. ಅಂಥ ಶ್ರದ್ಧೆ ಇರುವುದರಿಂದಲೇ ನಾ ಬದುಕಿದೇನೆ. ಅಂತಿಮವಾಗಿ ಎಲ್ಲವೂ ಒಳಿತೇ

ಆದರೂ, ವ್ಯಕ್ತಿಗಳೂ ರಾಷ್ಟ್ರಗಳೆಂಬ ವ್ಯಕ್ತಿಸಮುದಾಯಗಳೂ ಈ ಹಿಂದೆ ನಾಶವಾಗಿವೆಯೆಂಬ ಇತಿಹಾಸದ ಸತ್ಯಕ್ಕೆ ನನ್ನ ಈ ಶ್ರದ್ಧೆ ನನ್ನನ್ನು ಕುರುಡಾಗಿಸಿಲ್ಲ. ರಾಷ್ಟ್ರಗಳು ತಮ್ಮ ಅಕಾರ್ಯಗಳ ನಿಮಿತ್ತ ನಾಶವಾಗಿವೆಯೆಂಬುದಕ್ಕೆ ರೋಂ, ಗ್ರೀಸ್, ಬ್ಯಾಬಿಲಾನ್, ಈಜಿಪ್ಟ್ ಹಾಗೂ ಇತರ ಅನೇಕವು ಶಾಶ್ವತ ಸಾಕ್ಷಿಗಳು. ಯೂರೋಪ್ ತನ್ನ ಉತ್ತಮ ವೈಜ್ಞಾನಿಕ ವಿಚಾರಶಕ್ತಿಯ ದೆಸೆಯಿಂದಾಗಿ ಸ್ಪಷ್ಟ ನಿರ್ದೇಶವನ್ನು ಗ್ರಹಿಸಿ, ತನ್ನ ಹೆಜ್ಜೆ ಹಿಂತೆಗೆದುಕೊಂಡೀತು, ಅನೀತಿಕರ ಔದ್ಯೋಗೀಕರಣದಿಂದ ಪಾರಾಗುವ ಹಾದಿ ಹುಡುಕೀತು—ಎಂದು ಆಶಿಸಬಹುದು. ಅದೇನೂ ಆ ಹಳೆಯ ನಿರಪೇಕ್ಷ ಸರಳತೆಗೆ ಪುನರಾಗಮನವಾಗಬೇಕಾದುದಿಲ್ಲ. ಆದರೆ ಅದು ಪುನರ್ವ್ಯವಸ್ಥಿಖಂಡಿತ, ಅದರಲ್ಲಿ ಗ್ರಾಮಜೀವನವೇ ಪ್ರಧಾನ; ಪಶುಶಕ್ತಿ, ಭೌತಶಕ್ತಿ ಆತ್ಮಶಕ್ತಿಗೆ ಅಧೀನ.

ಅಂತಿಮವಾಗಿ, ತಪ್ಪು ದೃಷ್ಟಾಂತಗಳ ಬಲೆಗೆ ಬೀಳಬಾರದು. ಯೂರೋಪಿನ ಲೇಖಕರಿಗೆ ಅನುಭವ, ನಿಷ್ಕೃಷ್ಟ ಸತ್ಯಾಂಶಗಳ ಕೊರತೆ ಉಂಟು. ಒಂದು ಮಿತಿಯಿಂದಾಚೆ ಅವರು ನಮಗೆ ದಾರಿ ತೋರಲಾರರು. ಯೂರೋಪಿನ ದೃಷ್ಟಾಂತಗಳು ಭಾರತದ ಸನ್ನಿವೇಶಕ್ಕೆ ಸರಿಹೊಂದಲಾರವು. ರಷ್ಯ ಒಂದನ್ನು ಬಿಟ್ಟರೆ ಯೂರೋಪಿನಲ್ಲಿ ಮತ್ತಾವ ಭಾಗದಲ್ಲೂ ಭಾರತದ ಸ್ಥಿತಿಗತಿಗಳಿಲ್ಲ. ಆದುದರಿಂದ ಯೂರೋಪಿಗೆ ನಿಜವಾದುದು ಭಾರತಕ್ಕೆ ಆವಶ್ಯಕವಾಗಿ ನಿಜವಾಗಬೇಕಾಗಿಲ್ಲ. ಅಲ್ಲದೆ ಪ್ರತಿಯೊಂದು ರಾಷ್ಟ್ರಕ್ಕೂ ತನ್ನದೇ ಆದ ಸ್ವಭಾವ, ವೈಲಕ್ಷಣ್ಯ ಇರುತ್ತವೆ. ಭಾರತಕ್ಕೂ ಅಂಥದಿದೆ; ಅದರ ಅನೇಕ ಪೀಡೆಗಳಿಗೆ ಪರಿಹಾರ ಹುಡುಕಬೇಕಾದರೆ ಅದರ ಪ್ರಕೃತಿಯ ವೈಲಕ್ಷಣ್ಯಗಳನ್ನು ಗಣನೆಗೆ ತಂದುಕೊಂಡು ಪರಿಹಾರ ಸೂಚಿಸಬೇಕಾದೀತು. ಯೂರೋಪಿನ ಅರ್ಥದಲ್ಲಿ ಭಾರತದ ಔದ್ಯೋಗೀಕರಣ ಅಸಾಧ್ಯಕ್ಕೆ ಕೈಹಾಕಿದಂತೆಯೇ. ಭಾರತ ಎಷ್ಟೋ ಬಿರುಗಾಳಿಗಳನ್ನೆದುರಿಸಿದೆ. ಒಂದೊಂದೂ ತನ್ನ ಮುದ್ರೆಯನ್ನು ಅಳಿಸಲಾಗದಂತೆ ಬಿಟ್ಟುಹೋಗಿದೆ, ನಿಜ. ಆದರೂ ಅದು ತನ್ನ ವಿಶಿಷ್ಟತೆಯನ್ನು ದಿಟ್ಟವಾಗಿ ಉಳಿಸಿಕೊಂಡಿದೆ. ಅನೇಕ ನಾಗರಿಕತೆಗಳ ಅವನತಿಗೆ ಸಾಕ್ಷಿಯಾಗಿ ನಿಂತು ತಾನು ಮಾತ್ರ ಅಲಿಪ್ತವಾಗಿ ಉಳಿದ ಕೆಲವೇ ರಾಷ್ಟ್ರಗಳಲ್ಲಿ ಭಾರತವೂ ಒಂದು. ಎಷ್ಟೇ ಕುರುಡುನಂಬಿಕೆ, ತಪ್ಪುಗಳಿಂದ

ತುಂಬಿದ್ದರೂ ತನ್ನ ಪ್ರಾಚೀನ ಸಂಸ್ಥೆಗಳನ್ನು ಉಳಿಸಿಕೊಂಡಿರುವ ಜಗತ್ತಿನ ಕೆಲವೇ ದೇಶಗಳಲ್ಲಿ ಭಾರತವೂ ಒಂದು. ಆದರೂ ದೋಷಗಳನ್ನೂ ಅಂಥ ವಿಶ್ವಾಸಗಳನ್ನೂ ತೊಳೆದುಕೊಳ್ಳುವ ಆಂತರಿಕ ಸಾಮರ್ಥ್ಯವನ್ನೂ ಭಾರತ ಈತನಕ ತೋರಿಸಿದೆ. ತನ್ನ ಕೋಟಿಗಟ್ಟಲೆ ಜನರ ಆರ್ಥಿಕ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವ ಅದರ ಸಾಮರ್ಥ್ಯದ ಬಗೆಗೆ ನನ್ನ ವಿಶ್ವಾಸ ಇಂದಿನಷ್ಟು ಉಜ್ವಲವಾಗಿ ಎಂದೂ ಇರಲಿಲ್ಲ.೧೧೧

" ಭಾರತ ಬುದ್ಧಿವಂತಿಕೆಯು, ಮಾನವೀಯ ಔದ್ಯೋಗಿಕ ನೀತಿಯನ್ನು ಅನುಸರಿಸುವ ವಿಷಯದಲ್ಲಿ ನಿಮ್ಮ ಸಾಮಾನ್ಯ ಧೋರಣೆ ಏನು ? ವಿಜ್ಞಾನದ ಪ್ರಗತಿ, ಎಂದರೆ ಫ್ರಾನ್ಸಿನ ಪ್ಯಾಶ್ಚರ್ ಹಾಗೂ ಟೊರಾಂಟೋವಿನ ಡಾ|| ಬೆಂಟಿಂಗ್ ಇಂಥವರ ಕೆಲಸದಂಥ ವರಪ್ರದವಾದ ವೈಜ್ಞಾನಿಕ ಪ್ರಗತಿಯ ಪಕ್ಷಪಾತಿಗಳೇ ನೀವು ? "

ಈ ಪ್ರಶ್ನೆ ಕೇಳಿರುವ ವಿದ್ಯಾರ್ಥಿಯ ದೃಷ್ಟಿಯಲ್ಲಿರುವಂಥ ಔದ್ಯೋಗಿಕ ಉದ್ಯಮಕ್ಕೆ ನನ್ನ ಯಾವ ಆಕ್ಷೇಪವೂ ಇರತಕ್ಕುದಲ್ಲ. ಅದನ್ನು ಆವಶ್ಯಕವಾಗಿ ನಾ ಮಾನವೀಯ ಎಂದು ಕರೆಯೆ. ಭಾರತಕ್ಕೆ ಮಾನವೀಯ ಔದ್ಯೋಗೀಕರಣ ಎಂದರೆ ರಾಟೆಯ, ನೂಲುವಿಕೆಯ ಪುನರುಜ್ಜೀವನವೇ. ಅದರ ಮೂಲಕ ಮಾತ್ರವೇ ಈ ನಾಡಿನ ಗುಡಿಸಲುಗಳಲ್ಲಿರುವ ಕೋಟಿಗಟ್ಟಲೆ ಜನರನ್ನು ಕಾಡಿ ತಿನ್ನುತ್ತಿರುವ ದಿವಾಳಿತನವನ್ನು ಕೂಡಲೇ ನಿವಾರಿಸಬಹುದು. ಬಳಿಕ ಅದಕ್ಕೆ ದೇಶದ ಉತ್ಪಾದನಾಸಾಮರ್ಥ್ಯವನ್ನು ಹೆಚ್ಚಿಸುವುದೆಲ್ಲವನ್ನೂ ಸೇರಿಸಬಹುದು. ಆದುದರಿಂದ ವೈಜ್ಞಾನಿಕ ಶಿಕ್ಷಣ ಪಡೆದಿರುವ ತರುಣರೆಲ್ಲ ಸಾಧ್ಯವಾದರೆ ರಾಟೆ ಯನ್ನು ಭಾರತದ ಗುಡಿಸಲುಗಳ ದಕ್ಷತರ ಉತ್ಪಾದನಸಾಧನವಾಗಿ ಮಾರ್ಪಡಿ ಸಲು ತಮ್ಮ ಕೌಶಲವನ್ನು ಬಳಸಲಿ ಎನ್ನುತ್ತೇನೆ. ನಾನೇನೂ ವೈಜ್ಞಾನಿಕ ಪ್ರಗತಿಯ ವಿರೋಧಿಯಲ್ಲ. ತದ್ವಿರುದ್ಧ ಪಾಶ್ಚಾತ್ಯರ ವೈಜ್ಞಾನಿಕ ಪ್ರಗತಿಗೆ ನನ್ನ ಮೆಚ್ಚಿಗೆ ಇದೆ. ಆ ಮೆಚ್ಚಿಗೆಗೆ ಒಂದು ವಿಶೇಷಣವಿರುವುದಾದರೆ ಅದು ಪಾಶ್ಚಾತ್ಯ ವಿಜ್ಞಾನಿ ದೇವರ ಕ್ಷುದ್ರತರ ಸೃಷ್ಟಿಯನ್ನು ಗಣನೆಗೆ ತೆಗೆದುಕೊಳ್ಳದೆ ಇರುವ ಕಾರಣದಿಂದಾಗಿ. ನನ್ನ ಇಡೀ ಆತ್ಮವನ್ನೊಡ್ಡಿ ಪ್ರಾಣಿವಿಚ್ಛೇದನವನ್ನು ನಾ ಪ್ರತಿಭಟಿಸುತ್ತೇನೆ. ವಿಜ್ಞಾನ, ಮಾನವತೆಗಳ ಹೆಸರಿನಲ್ಲಿ ನಿಷ್ಪಾಪ ಜೀವಿಗಳ ಅಕ್ಷಮ್ಯ ವಧೆಯನ್ನು ನಾನು ಹೇಯವೆನ್ನುತ್ತೇನೆ. ನಿಷ್ಪಾಪಿಗಳ

ರಕ್ತಕಲಂಕಿತವಾದ ವಿಜ್ಞಾನದ ಪರಿಶೋಧನೆಗಳಿಗೆ ನಾ ಏನೂ ಬೆಲೆ ಕೊಡೆ. ಜೀವದ ವಿಚ್ಛೇದನವಿಲ್ಲದೆ ರಕ್ತಪರಿಚಲನೆಯ ತತ್ತ್ವವನ್ನು ಅರಿಯಲಾರದೆ ಇದ್ದರೆ, ಅದಿಲ್ಲದಿದ್ದರೂ ಮಾನವಕುಲಕ್ಕೆ ನಷ್ಟವಿಲ್ಲ ಎನ್ನುವೆ. ಪಶ್ಚಿಮದ ಪ್ರಾಮಾಣಿಕ ವಿಜ್ಞಾನಿ ಜ್ಞಾನಾರ್ಜನೆಯ ಇಂದಿನ ವಿಧಾನಗಳಿಗೆ ಮಿತಿ–ಮೇರೆ ಹಾಕುವ ದಿನ ಉದಯವಾಗುತ್ತಿರುವುದನ್ನು ನಾನು ಸ್ಪಷ್ಟವಾಗಿ ಕಾಣು ತ್ತಿದೇನೆ. ಭವಿಷ್ಯದ ಮಾನದಂಡದಲ್ಲಿ ಕೇವಲ ಮನುಷ್ಯಕುಲವಷ್ಟೇ ಅಲ್ಲದೆ ಸಮಸ್ತ ಜೀವರಾಶಿಯೂ ಅಡಕವಾದೀತು– ಹಿಂದೂಗಳು ತಮ್ಮ ಸಂಖ್ಯೆಯ ಇನೆಯ ಒಂದು ಪಾಲು ಜನರ ಅಧಃಪತನದಿಂದ ತಾವು ಮುಂಬರಿಯ ಬಹುದೆಂಬ ತಪ್ಪನ್ನು ನಿಧಾನವಾಗಿಯಾದರೂ ನಿಶ್ಚಿತವಾಗಿ ಕಂಡುಕೊಳ್ಳುತ್ತಿರು ವಂತೆ ಪೂರ್ವದೇಶಗಳ, ಆಫ್ರಿಕದ ದೇಶಗಳ ಅಧಃಪತನ ಹಾಗೂ ಶೋಷಣೆ ಯಿಂದ ತಾವು ಮೇಲೇರಹುದೆಂದು ಪಾಶ್ಚಾತ್ಯ ರಾಷ್ಟ್ರಗಳ ಕಲ್ಪನೆಯೂ ತಪ್ಪು ಎಂದು ತಿಳಿಯುತ್ತಿರುವಂತೆಯೇ ಕಾಲ ಪಕ್ವವಾದಂತೆ ಸೃಷ್ಟಿಯ ಕೆಳವರ್ಗದ ಪ್ರಾಣಿಗಳ ಮೇಲಣ ನಮ್ಮ ಪ್ರಭುತ್ವ ಅವುಗಳ ವಧೆಗಾಗಿ ಅಲ್ಲ, ನಮ್ಮ ಹಾಗೂ ಅವುಗಳ ಸಮಾನಹಿತಸಾಧನೆಗಾಗಿ ಎಂಬುದನ್ನು ನಾವು ಮನಗಂಡೇವು. ಏಕೆಂದರೆ ನಮಗಿರುವಂತೆಯೇ ಅವಕ್ಕೂ ಆತ್ಮವಿದೆಯೆಂದು ನನಗೆ ಖಚಿತವೇ.೧೧೨

ಭಾರತವನ್ನು ಇಂಗ್ಲೆಂಡ್ ಅಮೆರಿಕಗಳಂತೆ ಮಾಡುವುದೆಂದರೆ ಶೋಷಣೆಗೆ ಲೋಕದ ಇತರ ಕುಲಗಳನ್ನೂ, ಸ್ಥಳಗಳನ್ನೂ ಹುಡುಕಬೇಕು ಎಂದೇ ಅರ್ಥ. ಈವರೆಗೆ ಪಾಶ್ಚಾತ್ಯ ರಾಷ್ಟ್ರಗಳು ಯುರೋಪಿನ ಹೊರಗೆ ತಮಗೆ ಗೊತ್ತಿರುವ ಎಲ್ಲ ಜನಾಂಗಗಳನ್ನೂ ಶೋಷಣೆಗೆ ತಮ್ಮತಮ್ಮಲ್ಲಿ ಹಂಚಿಕೊಂಡುಬಿಟ್ಟವೆ. ಹೊಸದಾಗಿ ಕಂಡುಹಿಡಿಯಲು ಯಾವ ನೂತನ ಜಗತ್ತೂ ಇಲ್ಲ. ಶೋಷಿತರ ಪಂಙ್ತಿಯಲ್ಲಿ ಭಾರತವೇ ಅತಿ ಭಾರಿ ಬಲಿ. ಜಪಾನೂ ಸಹ ಲೂಟಿಯಲ್ಲಿ ತನ್ನ ಪಾಲು ಪಡೆಯುತ್ತಿದೆ, ನಿಸ್ಸಂಶಯ. ಆದರೆ ಭಾರತ–ಚೀಣಗಳೆರಡೂ ಶೋಷಿಸಲ್ಪಡಲು ನಿರಾಕರಿಸಿಬಿಟ್ಟರೆ ಶೋಷಕರಿಗೇನು ಗತಿ ? ಭಾರತ–ಚೀಣಗಳ ನಿರಾಕರಣೆಯಿಂದಾಗಿ ಪಾಶ್ಚಾತ್ಯ ರಾಷ್ಟ್ರಗಳೂ ಜಪಾನೂ ಗತಿಗೆಡುವುದಾದರೆ ಪಾಶ್ಚಾತ್ಯರನ್ನು ಅನುಕರಿಸತೊಡಗುವ ಭಾರತದ ಗತಿಯಾದರೂ ಏನಾದೀತು ? ನಿಜಕ್ಕೂ ಪಶ್ಚಿಮ ರಾಷ್ಟ್ರಗಳ ಔದ್ಯೋಗೀಕರಣ–

ಶೋಷಣಗಳು ಮಿತಿಮೀರಿಹೋಗಿವೆ. ರೋಗಪೀಡಿತರಾದ ಅವರಿಗೆ ಆ ಪೀಡೆಯ ಪರಿಹಾರಕ್ರಮ ತಿಳಿಯದಿರುವಾಗ ನಮ್ಮಂಥ ಪ್ರಾರಂಭಿಕರು ಹೇಗೆ ತಾನೆ ಆ ದೋಷಗಳಿಂದ ಪಾರಾದೇವು? ನಿಜಕ್ಕೂ ಈ ಔದ್ಯೋಗಿಕ ನಾಗರಿಕತೆ ಒಂದು ರೋಗ, ಅದು ಸಂಪೂರ್ಣ ದುಷ್ಟವಾದುದು. ಘೋಷಣೆಗಳಿಗೆ, ಆಡಂಬರದ ಮಾತುಗಳಿಗೆ ಮಾರುಹೋಗುವುದು ಬೇಡ. ಹಬೆಯಿಂದ ನಡೆವ ಹಡಗುಗಳೊಡನಾಗಲಿ, ತಂತಿಸೌಕರ್ಯದೊಡನಾಗಲಿ ನನಗೆ ಹಗೆಯಿಲ್ಲ. ಅವು ಔದ್ಯೋಗೀಕರಣದ, ಅದರ ಸರ್ವ ಪ್ರಕಾರಗಳ ಸಮರ್ಥನೆಯಿಲ್ಲದೆಯೇ ಬೇಕಿದ್ದರೂ ಉಳಿದಾವು. ಅವೇ ಗುರಿಗಳಲ್ಲ. ಹಡಗುಗಳಿಗಾಗಿ, ತಂತಿಸೌಕರ್ಯಕ್ಕಾಗಿ ನಾವು ಶೋಷಣೆಗೆ ತುತ್ತಾಗಬಾರದು. ಮಾನವಕುಲದ ಶಾಶ್ವತ ಸೌಖ್ಯಕ್ಕೆ ಅವು ಅನಿವಾರ್ಯವೇನೂ ಅಲ್ಲ. ಹಬೆ ಹಾಗೂ ವಿದ್ಯುತ್ತಿನ ಬಳಕೆಯನ್ನು ನಾವು ಅರಿತಿರುವುದರಿಂದ, ಈಗ ಸಮಯಬಂದಾಗ ಅವನ್ನು ಔದ್ಯೋಗೀಕರಣವನ್ನು ತಪ್ಪಿಸಿಕೊಂಡ ಬಳಿಕ ಉಪಯೋಗಿಸಿಕೊಳ್ಳಬೇಕು. ಆದುದರಿಂದ ಏನೇ ಆದರೂ ಔದ್ಯೋಗೀಕರಣವನ್ನು ನಾಶಮಾಡುವುದೇ ನಮ್ಮ ಗಮನ.

ಭಾರತ ತನ್ನ ನೆಲಕ್ಕೆ ಕಚ್ಚಿ ಕುಳಿತುದರಿಂದಲೇ ಇತರ ನಾಗರಿಕತೆಗಳ ದಾಳಿಗಳನ್ನು ಎದುರಿಸಿ ಜಗ್ಗದೆ ನಿಂತಿದೆ. ಅದು ಪರಿವರ್ತನೆಗಳನ್ನು ತಂದುಕೊಂಡಿಲ್ಲವೆಂದಲ್ಲ. ಆದರೆ ಅದು ತಂದುಕೊಂಡಿರುವ ಪರಿವರ್ತನೆಗಳು ಅದರ ವಿಕಾಸಕ್ಕೆ ಸಾಧಕವಾಗಿವೆ. ಔದ್ಯೋಗೀಕರಣಕ್ಕೆ ತೊಡಗುವುದೆಂದರೆ ವಿನಾಶವನ್ನು ವರಿಸಿದಂತೆಯೇ. ಪ್ರಸ್ತುತ ಸಂಕಟ ನಿಸ್ಸಂಶಯವಾಗಿ ಅಸಹನೀಯ. ದಿವಾಳಿತನ ತೊಲಗಲೇಬೇಕು. ಔದ್ಯೋಗೀಕರಣ ಅದಕ್ಕೆ ಪರಿಹಾರವಲ್ಲ. ಎತ್ತಿನ ಬಂಡಿಗಳ ಉಪಯೋಗದಲ್ಲಿ ಇಲ್ಲ ದೋಷ. ಅದಿರುವುದು ನಮ್ಮ ಸ್ವಾರ್ಥಲಾಲಸೆಯಲ್ಲಿ, ನೆರೆಯವರ ಬಗ್ಗೆ ವಿಚಾರರಹಿತರಾಗಿರುವುದರಲ್ಲಿ. ನಮ್ಮ ನೆರೆಯವರ ಬಗ್ಗೆ ನಮಗೆ ಪ್ರೇಮವಿಲ್ಲದಿದ್ದಲ್ಲಿ ಎಂಥ ಕ್ರಾಂತಿಕಾರೀ ಪರಿವರ್ತನೆಯೂ ನಮಗೇನೂ ಒಳ್ಳೆಯದನ್ನು ಮಾಡದು. ನಮ್ಮ ನೆರೆಹೊರೆಯವರಾದ ಭಾರತದ ದಿವಾಳಿ ಜನರನ್ನು ನಾವು ಪ್ರೀತಿಸುವುದಾದರೆ ಅವರಿಗಾಗಿ ನಾವು ಅವರು ತಯಾರಿಸಿದುದನ್ನೇ ಬಳಸಬೇಕು; ಅವರಿಗೋಸ್ಕರವಾಗಿ ನಾವು ಪಾಶ್ಚಾತ್ಯರು ತಯಾರಿಸುವ ವಿದೇಶೀ ವಿಲಕ್ಷಣ ವಸ್ತುಗಳನ್ನು ಕೊಳ್ಳುವ ಅನೀತಿ ವ್ಯಾಪಾರಕ್ಕೆ ಇಳಿಯತಕ್ಕುದಲ್ಲ, ಅವನ್ನು ಹಳ್ಳಿಗಳಿಗೆ ಒಯ್ಯತಕ್ಕುದಲ್ಲ.

ಉತ್ಕಟವಾಗಿ, ಸ್ಥಿರವಾಗಿ ವಿಚಾರಮಾಡಿದುದಾದರೆ ಉಳಿದ ಯಾವ ಪರಿವರ್ತನೆಗಳನ್ನೂ ತರುವ ಮುನ್ನ ತರಬೇಕಾಗಿರುವ ದೊಡ್ಡ ಪರಿವರ್ತನೆ ವಿದೇಶೀ ವಸ್ತ್ರದ ಪರಿತ್ಯಾಗ, ನೂಲುವ ಪುರಾತನ ಕುಟೀರ ಉದ್ಯೋಗದ ಪುನಃ ಪ್ರತಿಷ್ಠಾಪನೆ. ಔದ್ಯೋಗೀಕರಣದ ವಿರುದ್ಧ ಹೋರಾಡುವೆವಾದರೆ ನಮ್ಮ ಈ ಪ್ರಾಚೀನ, ಆರೋಗ್ಯದಾಯೀ ಉದ್ಯೋಗವನ್ನು ಮತ್ತೆ ತರಲೇಬೇಕು.

ಬಂಡವಾಳವನ್ನು ಕಂಡರೆ ನನಗೇನೂ ಸಂಕೋಚವಿಲ್ಲ. ಬಂಡವಾಳ ವಾದದೊಡನೆ ನಾ ಹೋರಾಡುತ್ತೇನೆ. ಬಂಡವಾಳದ ಕೇಂದ್ರೀಕರಣ ಆಗ ಬಾರದೆಂದು ಪಾಶ್ಚಿಮಾತ್ಯ ಪ್ರಪಂಚ ಹೇಳುತ್ತದೆ — ಜನಾಂಗ ಜನಾಂಗಗಳ ನಡುವಣ ಭಯಂಕರ ಸ್ವರೂಪದ ಯುದ್ಧವನ್ನು ತಡೆಗಟ್ಟುವ ಸಲುವಾಗಿ. ಬಂಡವಾಳ ಹಾಗೂ ಶ್ರಮ ಪರಸ್ಪರ ವಿರೋಧಿಯಾದುವಾಗಬೇಕಿಲ್ಲ. ಒಬ್ಬ ಇನ್ನೊಬ್ಬನಿಂದ ಹೆಚ್ಚು ಸಿರಿವಂತನಾಗಿಲ್ಲದ ಕಾಲವನ್ನು ನಾನು ಚಿತ್ರಿಸಿ ಕೊಳ್ಳಲಾರೆ. ಆದರೆ ಸಿರಿವಂತರು ಬಡವರನ್ನು ಬಲಿಗೊಟ್ಟು ಸಿರಿವಂತರಾಗು ವುದನ್ನು ನಿರಾಕರಿಸುವ, ಬಡವರು ಸಿರಿವಂತರನ್ನು ಕಂಡು ಕರುಬದಿರುವ ಕಾಲವನ್ನು ಖಂಡಿತ ಕಲ್ಪಿಸಿಕೊಳ್ಳಬಲ್ಲೆ. ಅತ್ಯಂತ ಪರಿಪೂರ್ಣ ಲೋಕದಲ್ಲಿ ವಿಷಮತೆಗಳನ್ನು ತಪ್ಪಿಸಲು ಸಾಧ್ಯವಾಗದು, ಆದರೆ ಮನಃಕಾಷಾಯ ಹಾಗೂ ಸಂಘರ್ಷಗಳನ್ನು ಖಂಡಿತ ತಡೆಯಬಲ್ಲೆವು, ತಡೆಯಲೇಬೇಕು. ಬಡವರೂ ಬಲ್ಲಿದರೂ ಪೂರಾ ಸೌಹಾರ್ದದಿಂದ ಇರುವ ಅಸಂಖ್ಯ ಉದಾಹರಣೆಗಳಿವೆ. ಅಂಥ ದೃಷ್ಟಾಂತಗಳನ್ನೇ ನಾವು ಹೆಚ್ಚಿಸಬೇಕು.

ಭಾರತದ ಭಾಗ್ಯಕ್ಕೆ ಪಶ್ಚಿಮದ ರಕ್ತಸಿಕ್ತ ಮಾರ್ಗ ಹಾದಿಯಲ್ಲ, ಆ ಹಾದಿಗೆ ಪಶ್ಚಿಮವೂ ಬೇಸತ್ತ ಲಕ್ಷಣಗಳು ಕಾಣುತ್ತಿವೆ; ಸರಳ, ದೈವೀ ಜೀವನದಿಂದ ಬರುವ ರಕ್ತರಹಿತ ಶಾಂತಿಮಾರ್ಗವೇ ಆ ದಾರಿ. ಭಾರತ ತನ್ನ ಆತ್ಮವನ್ನು ನೀಗಿಕೊಳ್ಳುವ ಅಪಾಯವುಂಟು. ಅದನ್ನು ಕಳೆದುಕೊಂಡು ಮತ್ತೆ ಬದುಕಲಾರದು. ಅದನ್ನು ಕಳೆದುಕೊಳ್ಳಲೂ ಕೂಡದು. ಆದಕಾರಣ "ಪಶ್ಚಿಮದ ಕಡೆಯ ಆಘಾತವನ್ನು ತಡೆದುಕೊಳ್ಳಲಾರೆ" ಎಂಬ ಆಲಸ್ಯದ ಅಸಹಾಯಕ ಉದ್ಗಾರ ಬೇಡ. ತನಗಾಗಿ, ಇಡೀ ಜಗತ್ತಿಗಾಗಿ ಭಾರತ ಈ ಹೊಡೆತವನ್ನು ಪ್ರತಿಭಟಿಸುವಷ್ಟು ಸಶಕ್ತವಾಗಿರಬೇಕು.೧೧೩

“ಭಾರತದ ಔದ್ಯೋಗೀಕರಣದ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?”

ಔದ್ಯೋಗೀಕರಣ ಮಾನವಕುಲಕ್ಕೇ ಅಭಿಶಾಪವೆಂದು ನನ್ನ ಅಂಜಿಕೆ. ಒಂದು ರಾಷ್ಟ್ರದಿಂದ ಇನ್ನೊಂದರ ಶೋಷಣ ಎಲ್ಲ ಕಾಲಕ್ಕೂ ನಡೆಯುವುದು ಸಾಧ್ಯವಿಲ್ಲ. ಔದ್ಯೋಗೀಕರಣ ಶೋಷಣೆಯ ನಿಮ್ಮ ಸಾಮರ್ಥ್ಯವನ್ನೇ ಅವಲಂಬಿಸುತ್ತದೆ; ವಿದೇಶೀ ಮಾರುಕಟ್ಟೆ ನಿಮಗೆ ತೆರವಾಗಿರಬೇಕು, ಪ್ರತಿಸ್ಪರ್ಧಿಗಳಿರಬಾರದು. ಈ ಅಂಶಗಳು ದಿನೇ ದಿನೇ ಕಡಿಮೆಯಾಗುತ್ತಿರುವ ಕಾರಣ ಇಂಗ್ಲೆಂಡಿನಲ್ಲಿ ನಿರುದ್ಯೋಗ ದಿನದಿನಕ್ಕೆ ಹೆಚ್ಚುತ್ತಿದೆ. ಭಾರತದ ಬಹಿಷ್ಕಾರವಾದರೋ ಸಣ್ಣ ಚಿಗಟದ ಕಡಿತ. ಇಂಗ್ಲೆಂಡಿನ ಪರಿಸ್ಥಿತಿಯೇ ಹೀಗಾದರೆ ಭಾರತದಂಥ ವಿಶಾಲ ರಾಷ್ಟ್ರ ಔದ್ಯೋಗೀಕರಣದಿಂದ ಲಾಭ ಪಡೆಯದು. ಭಾರತ ಇತರ ರಾಷ್ಟ್ರಗಳನ್ನು ಶೋಷಿಸತೊಡಗಿದರೆ—ಔದ್ಯೋಗೀಕೃತವಾದರೆ ಹಾಗೆ ಮಾಡಲೇ ಬೇಕು — ಇತರ ರಾಷ್ಟ್ರಗಳಿಗೆ ಅಭಿಶಾಪವಾದೀತು, ಇಡೀ ಜಗತ್ತಿಗೇ ಕುತ್ತಾದೀತು. ಇತರ ರಾಷ್ಟ್ರಗಳನ್ನು ಶೋಷಿಸುವ ಸಲುವಾಗಿ ಭಾರತದ ಔದ್ಯೋಗೀಕರಣವನ್ನು ನಾನೇಕೆ ಯೋಚಿಸಲಿ? ಈ ಸನ್ನಿವೇಶದ ದುರಂತ ಲಕ್ಷಣವನ್ನು ಕಾಣಿರಾ ? ಇಂಗ್ಲೆಂಡ್ ತನ್ನ ೩೦ ಲಕ್ಷ ಮಂದಿ ನಿರುದ್ಯೋಗಿಗಳಿಗೇ ಉದ್ಯೋಗ ಕೊಡಲು ಅಸಾಧ್ಯವಾಗಿದೆ, ಅವರ ಅತ್ಯುನ್ನತ ಬುದ್ಧಿವಂತರೇ ಇದಕ್ಕೆ ಪರಿಹಾರ ಸೂಚಿಸಲು ಸೋತಿದಾರೆ. ಅಂಥದರಲ್ಲಿ ಭಾರತ ತನ್ನ ೩೦ ಕೋಟಿ ಜನರಿಗೆ ಕೆಲಸ ಕೊಡಲಾದೀತೇ ? ಔದ್ಯೋಗೀಕರಣದ ಭವಿಷ್ಯ ಕರಾಳವಾಗಿದೆ. ಇಂಗ್ಲೆಂಡಿಗೆ ಅಮೆರಿಕ ಜಪಾನ್ ಫ್ರಾನ್ಸ್ ಜರ್ಮನಿಗಳು ಯಶಸ್ವೀ ಪ್ರತಿಸ್ಪರ್ಧಿಗಳಾಗುತ್ತಿದಾರೆ. ಭಾರತದಲ್ಲಿನ ಹಿಡಿಯಷ್ಟು ಗಿರಣಿಗಳೂ ಅವರಿಗೆ ಪ್ರತಿಸ್ಪರ್ಧಿಯೇ. ಭಾರತದಲ್ಲಿ ಜಾಗೃತಿ ಉಂಟಾಗಿರುವಂತೆಯೇ ಇನ್ನೂ ಹೆಚ್ಚು ನೈಸರ್ಗಿಕ, ಖನಿಜದ ಹಾಗೂ ಮಾನವಬಲದ ಸಂಪನ್ಮೂಲಗಳಿರುವ ದಕ್ಷಿಣ ಆಫ್ರಿಕದಲ್ಲೂ ಜಾಗೃತಿ ಉಂಟಾದೀತು. ಬಲಶಾಲಿ ಇಂಗ್ಲೀಷರು ಆಫ್ರಿಕದ ಬಲಶಾಲಿ ಜನಾಂಗಗಳೆದುರು ಕುಬ್ಜರಾಗಿ ಕಾಣುತ್ತಾರೆ. ಅವರು ಉದಾತ್ತ ಕಾಡುಜನ ಎಂದೀರಿ ನೀವು. ನಿಜಕ್ಕೂ ಉದಾತ್ತರು, ಆದರೆ ಕಾಡುಜನರಲ್ಲ. ಕೆಲವೇ ವರ್ಷಗಳಲ್ಲಿ ಆಫ್ರಿಕ ತಮ್ಮ ಸರಕುಗಳನ್ನು ಇಳಿಸುವ ಗಿರಾಕಿಸ್ಥಾನವಾಗದಿರುವುದನ್ನು ಪಾಶ್ಚಾತ್ಯ

ರಾಷ್ಟ್ರಗಳು ಕಾಣಬೇಕಾದೀತು. ಪಶ್ಚಿಮ ರಾಷ್ಟ್ರಗಳಿಗೇ ಔದ್ಯೋಗೀಕರಣದ ಭವಿಷ್ಯ ಕರಾಳವಾಗಿರುವಾಗ ಭಾರತಕ್ಕೆ ಅದು ಇನ್ನೂ ಕರಾಳತರ ವಾಗದೇ ?೧೧೪

“ತನಗೆ ಬೇಕಾದ ಹಡಗುಗಳು, ರೈಲ್ವೆ ಯಂತ್ರಗಳು, ವಿಮಾನಗಳು— ಇವನ್ನು ತಯಾರಿಸಿಕೊಳ್ಳುವಷ್ಟರಮಟ್ಟಿಗೆ ಭಾರತದ ಔದ್ಯೋಗೀಕರಣದಲ್ಲಿ ನಿಮಗೆ ನಂಬಿಕೆ ಇದೆಯೇ? ಇಲ್ಲದಿದ್ದರೆ, ಭಾರತ ಸ್ವತಂತ್ರ, ಸ್ವಾವಲಂಬೀ ರಾಷ್ಟ್ರವಾಗಿ ತನ್ನ ಹೊಣೆಗಾರಿಕೆಗಳನ್ನು ನಿರ್ವಹಿಸುವ ಬೇರಾವ ಮಾರ್ಗ ವಾದರೂ ಇದ್ದರೆ ಅದನ್ನು ದಯವಿಟ್ಟು ಸೂಚಿಸುವಿರಾ?”

“ಅಂಥ ಉದ್ಯೋಗಗಗಳ ಸ್ಥಾಪನೆಯಲ್ಲಿ ನೀವು ವಿಶ್ವಾಸವಿಡುವುದಾದರೆ ಅವುಗಳ ವ್ಯವಸ್ಥೆ, ಅವುಗಳಿಂದ ಬರುವ ಲಾಭದ ಯಾಜಮಾನ್ಯ ನಿಮ್ಮ ಅಭಿಪ್ರಾಯದಂತೆ ಯಾರ ಕೈಲಿರಬೇಕು?”

ಯಾವುದೇ ಸಂದರ್ಭದಲ್ಲಿಯೂ ಯಾವ ದೇಶಕ್ಕೂ ಔದ್ಯೋಗೀಕರಣ ಆವಶ್ಯಕವೆಂದು ನಾ ನಂಬುವುದಿಲ್ಲ. ಭಾರತಕ್ಕಂತೂ ಇನ್ನೂ ಕಡಿಮೆ. ನಿಜಕ್ಕೂ ಸ್ವತಂತ್ರ ಭಾರತ ತನ್ನ ಸಾವಿರಾರು ಕುಟೀರಗಳನ್ನು ಬೆಳೆಸಿ ಜಗತ್ತಿ ನೊಡನೆ ಶಾಂತಿಯಿಂದ ಬದುಕಲು ಸರಳವಾದ, ಉದಾತ್ತವಾದ ಜೀವನ ಕ್ರಮವನ್ನು ಅನುಸರಿಸಿದರೆ ಸಂಕಟದಿಂದ ತೊಳಲುತ್ತಿರುವ ಜಗತ್ತಿಗೆ ತನ್ನ ಕರ್ತವ್ಯ ಸಲ್ಲಿಸಿದಂತೆ. ಧನಪಿಶಾಚಿಯ ಪೂಜೆ ನಮ್ಮ ಮೇಲೆ ಹೊರಿಸುವ, ಉತ್ಕಟವೇಗದ ಸಂಕೀರ್ಣ ಭೌತಜೀವನ ಉಚ್ಚವಿಚಾರದೊಂದಿಗೆ ಅಸಂಗತ. ಉದಾತ್ತವಾಗಿ ಬದುಕುವ ಕಲೆಯನ್ನು ಕಲಿತಾಗಲೇ ಜೀವನದ ಎಲ್ಲ ಬಗೆಯ ಲಾವಣ್ಯವೂ ಸಾಧ್ಯ.

ಅಪಾಯಕಾರಿಯಾಗಿ ಬದುಕುವುದರಲ್ಲಿ ಸಾಹಸವೃತ್ತಿ ಇರಬಹುದು, ಆದರೆ ಅಪಾಯದ ಇದಿರಿನಲ್ಲಿ ಬದುಕುವುದಕ್ಕೂ ಅಪಾಯಕರವಾಗಿ ಬದುಕು ವುದಕ್ಕೂ ಇರುವ ಅಂತರವನ್ನು ನಾವು ನಿರ್ದೇಶಿಸಬೇಕು. ದುಷ್ಟ ಮೃಗಗಳು, ದುಷ್ಟತರ ಮಾನವರಿಂದ ತುಂಬಿರುವ ಅಡವಿಯಲ್ಲಿ ಕೋವಿಯನ್ನು ಇಟ್ಟು ಕೊಳ್ಳದೆ ದೇವನನ್ನೊಬ್ಬನನ್ನೇ ಅವಲಂಬಿಸಿ ಬದುಕುವ ಸಾಹಸ ಮಾಡುವವ ಗಂಡಾಂತರವನ್ನು ಇದಿರಿಸಿ ಬದುಕುತ್ತಾನೆ. ಸತತವಾಗಿ ಮಧ್ಯಾಕಾಶದಲ್ಲೇ

ಬದುಕುತ್ತ, ಕೇವಲ ಒಮ್ಮೊಮ್ಮೆ ಇಳಿದು ಬಂದು ಕಣ್ಣು ಕಣ್ಣು ಬಿಟ್ಟು ನೋಡುತ್ತಿರುವ ಜನರ ಮೆಚ್ಚಿಗೆ ಪಡೆವಾತ ಅಪಾಯಕರವಾಗಿ ಬದುಕುತ್ತಾನೆ. ಒಬ್ಬನದು ಸಾರ್ಥಕ ಬದುಕು, ಇನ್ನೊಬ್ಬನದು ಸಾರ್ಥಕ್ಯರಹಿತ ಬಾಳುವೆ.

ಭೌಗೋಲಿಕವಾಗಿ ಎಷ್ಟೇ ದೊಡ್ಡದಿದ್ದರೂ, ಸಂಖ್ಯಾಬಾಹುಳ್ಯದಿಂದ ಭಾರಿಯಿದ್ದರೂ ನಖಶಿಖಾಂತ ಶಸ್ತ್ರಸನ್ನದ್ಧವಾದ ಜಗತ್ತಿನೆದುರು, ವೈಭವದ ನಡುವೆ ಸನ್ನಿವೇಶವನ್ನೆದುರಿಸಿ ಕೇವಲ ಒಬ್ಬಂಟಿ ರಾಷ್ಟ್ರವೊಂದು ಅಂಥ ಸರಳ ಜೀವನ ನಡೆಸುವುದು ಶಕ್ಯವೇ ಎಂಬುದು ಶಂಕಾಶೀಲನೆದುರಿನ ಪ್ರಶ್ನೆ. ಉತ್ತರವೋ ನೇರಾದುದು, ಸರಳ. ಸರಳ ಜೀವನ ಸಾರ್ಥಕವಾದುದೆಂದಾದರೆ ಆ ಪ್ರಯತ್ನ ಯೋಗ್ಯವೇ, ಒಬ್ಬ ಮಾಡಲಿ, ಒಂದು ಗುಂಪು ಯತ್ನಿಸಲಿ.

ಅದೇ ಕಾಲಕ್ಕೆ ಕೆಲವು ಪ್ರಧಾನ ಕೈಗಾರಿಕೆಗಳು ಬೇಕೆಂದು ನಾ ನಂಬುತ್ತೇನೆ. ಸುಖಾಸೀನ ಅಥವಾ ಶಸ್ತ್ರಸನ್ನದ್ಧ ಸಮಾಜವಾದದಲ್ಲಿ ನನಗೆ ನಂಬಿಕೆ ಇಲ್ಲ. ಸಾಮೂಹಿಕ ಪರಿವರ್ತನೆಗಾಗಿ ಕಾಯದೆ ನನ್ನ ನಂಬಿಕೆಯಂತೆ ನಡೆಯುವವ ನಾನು. ಆದುದರಿಂದ ಪ್ರಧಾನ ಕೈಗಾರಿಕೆಗಳು ಯಾವು ಯಾವುವೆಂದು ನಾ ಪಟ್ಟಿ ಮಾಡದೆ, ಬಹಳ ಜನ ಕೆಲಸ ಮಾಡುವಂಥೆಡೆಯೆಲ್ಲ ಪ್ರಭುತ್ವದ ಒಡೆತನವಿರಬೇಕೆನ್ನುತ್ತೇನೆ. ಅವರ ಪರಿಶ್ರಮದ ಫಲಿತವಾದ ಉತ್ಪನ್ನ—ಅವರ ಶ್ರಮ ಕುಶಲವಿರಲಿ ಅಕುಶಲವೇ ಇರಲಿ—ಅವರ ಕೈಲೇ, ಪ್ರಭುತ್ವದ ಮೂಲಕ ಇರುವಂತಾಗಬೇಕು. ಅಹಿಂಸೆಯ ಆಧಾರದ ಮೇಲೆ ಅಂಥ ಪ್ರಭುತ್ವವನ್ನು ನಾನು ಕಲ್ಪಿಸಿಕೊಳ್ಳುವೆನಾದುದರಿಂದ ಶ್ರೀಮಂತರ ಶ್ರೀಮಂತಿಕೆಯನ್ನು ಬಲಪ್ರಯೋಗದಿಂದ ಕಸಿದುಕೊಳ್ಳುವುದಿಲ್ಲ, ಪ್ರಭುತ್ವದ ಒಡೆತನವನ್ನು ಒಪ್ಪಿಕೊಳ್ಳಲು, ಪರಿವರ್ತನೆಯ ಮಾರ್ಗವನ್ನು ಅನುಸರಿಸಲು ಅವರ ಸಹಕಾರಕ್ಕಾಗಿ ನಾನು ವಿನಂತಿಮಾಡಿಯೇನು. ಲಕ್ಷಾಧಿಕಾರಿಯಿರಲಿ, ನಿರ್ಗತಿಕನಿರಲಿ ಯಾರೂ ಸಮಾಜದಲ್ಲಿ ಹೊಲೆಯರಲ್ಲ. ಇಬ್ಬರೂ ಒಂದೇ ರೋಗದ ಎರಡು ಬೊಕ್ಕೆಗಳಂತೆ. ಹಾಗೆ ನೋಡಿದರೆ ಎಲ್ಲ ಜನರೂ ಅಷ್ಟೇ.

ಭಾರತದಲ್ಲಿ ಈಗಾಗಲೇ ನಾವು ಕಂಡಿರುವ ಹಾಗೂ ಮುಂದೆ ಕಾಣಬೇಕಾದಂಥ ಅಮಾನುಷತೆಗಳ ಇದಿರಿನಲ್ಲೂ ನಾನು ಈ ಶ್ರದ್ಧೆ ಪಡೆದಿದೇನೆ. ಅಪಾಯದ ಇದಿರಾಗಿಯೇ ನಾವು ಬದುಕೋಣ.೧೧೫

# ನವೀನತೆ – ಅಧ್ಯಾತ್ಮ ಹೊಂದಿಕೊಂಡಾವೇ ?

ಶ್ರೀ ಗ್ರೆಗ್ ಅವರ ' ಖಾದಿಯ ಅರ್ಥಶಾಸ್ತ್ರ ' ಎಂಬ ಪುಸ್ತಕದ ವಿಸ್ತಾರವಾದ ಟೀಕೆಗಳನ್ನೊಳಗೊಂಡ ' ಪ್ರಬುದ್ಧ ಭಾರತ ' ಪತ್ರಿಕೆಯ ಭಾಗಗಳನ್ನು ಹಲವು ಪತ್ರಲೇಖಕರು ನನಗೆ ಕಳಿಸಿದಾರೆ. ಅವು ಚರಖದ ವಿಚಾರಪಂಥಕ್ಕೇ ಬೆದರಿಕೆ ಹಾಕುವಂಥವಿವೆ. ಆ ಲೇಖನಗಳು ತುಂಬ ಉದ್ದ, ಆದಕಾರಣ ಅವನ್ನು ಇಲ್ಲಿ ಪುನರ್ಮುದ್ರಿಸುವುದು ಅಸಾಧ್ಯ. ಉತ್ಸುಕರಾದವರು ಮೂಲವನ್ನೇ ಓದಿಕೊಳ್ಳಿ ಎನ್ನಬೇಕು. ಅವು ಪ್ರತಿಪಾದಿಸುವ ಅಂಶಗಳು ಹೀಗಿವೆ :

೧. ಪಾಶ್ಚಿಮಾತ್ಯ ಅರ್ಥದಲ್ಲೇ ಭಾರತ ಔದ್ಯೋಗೀಕೃತವಾಗಬೇಕು ;

೨. ಭೌತಜೀವನದ ಪ್ರಶ್ನೆಯನ್ನು ಚರಖಾ ಬಗೆಹರಿಸುವುದಿಲ್ಲ ;

೩. ಚರಖದ ಯಶಸ್ಸಿಗೆ ಹಾಕುವ ಷರತ್ತುಗಳು ಸದ್ಯದ ಪ್ರವೃತ್ತಿಗಳಿಂದಲೂ ಮಾನವಸ್ವಭಾವದಿಂದಲೂ ಬಹು ಹೆಚ್ಚಿನ ಬೇಡಿಕೆಯನ್ನು ಬಯಸುತ್ತವೆ ;

೪. ಯಂತ್ರಗಾರಿಕೆಯ ಮೇಲ್ಮೆ ಹಾಗೂ ಸಮರ್ಥನೆ ದೇಶದ ಆಂತರಿಕ ಆವಶ್ಯಕತೆಗಳನ್ನು ಪೂರೈಸಿಕೊಳ್ಳುವುದರಲ್ಲಿ ಅಡಕವಾಗಿಲ್ಲ, ಅದಕ್ಕಿಂತ ಹೆಚ್ಚಾಗಿ ವಿದೇಶೀ ಮಾರುಕಟ್ಟೆಗಳನ್ನು ಆಕ್ರಮಿಸಿ ಗೆಲ್ಲುವುದರಲ್ಲಿ ಅಡಕವಾಗಿದೆ ;

೫. ಭಾರತ ಮಾನವರಿಗೆ ತನ್ನ ಆಧ್ಯಾತ್ಮಿಕ ದೀಕ್ಷೆಯನ್ನು ನೀಡಬೇಕಾದರೆ, ತನ್ನ ಬಾಳಿನಲ್ಲಿ ಅದನ್ನು ತೋರಿಸಬೇಕಾದರೆ ತಾನು ಆಧುನಿಕವಾಗಬೇಕು. ನಾವು ಯಾವ ಹಿಂಜರಿಕೆಯೂ ಇಲ್ಲದೆ ನವೀನ ಔದ್ಯೋಗಿಕ ತಂತ್ರಗಳನ್ನು ಬಹಳ ಸಮರ್ಥವಾಗಿ ಅರಗಿಸಿಕೊಳ್ಳೋಣ. ಅದರೊಡನೆ ನಾವು ಆಧ್ಯಾತ್ಮಿಕತೆಯನ್ನೂ ಅನುಸರಿಸೋಣ. ರಾಷ್ಟ್ರದ ಮಾನಸದಲ್ಲಿ ಅಗಾಧ ಆಧ್ಯಾತ್ಮಿಕ ಆದರ್ಶವಾದವನ್ನು ಸ್ಥಾಪಿಸೋಣ, ಅಪಾರವಾದ ರಾಷ್ಟ್ರಪ್ರೇಮವನ್ನು ತುಂಬೋಣ, ಆ ಬಲದಿಂದ ಪಾಶ್ಚಿಮಾತ್ಯ ಪ್ರಪಂಚ ವಿಷಾದನೀಯವಾಗಿ ತೊಳಲುತ್ತಿರುವ ನವೀನತೆಯ ಕರಾಳ ಕಂದರವನ್ನು ದಾಟಿ ಪಾರಾಗಬಹುದು. ಆಧ್ಯಾತ್ಮಿಕ ಆದರ್ಶವಾದವಿಲ್ಲದೆ ನವೀನತೆ ಶೀಘ್ರವಿನಾಶಕ್ಕೆ ದಾರಿ.

ಈ ಸೂಚನೆಗಳನ್ನು ನಾ ಒಪ್ಪಲಾರೆ, ವಿಷಾದಿಸುವೆ. ಆಧುನಿಕ ನಾಗರಿಕತೆ ನಿಜಕ್ಕೂ ಶ್ರೇಷ್ಠತರ ಸಂಗತಿ, ಅದನ್ನು ಯಶಸ್ವಿಯಾಗಿ ಎದುರಿಸುವುದು

ಅಸಾಧ್ಯ-ಎಂಬ ಕಲ್ಪನೆಯ ಆಧಾರದ ಮೇಲೆ ನಿಂತ ಸೂಚನೆಗಳಿವು. ತಣಿಯದ ಭೌತ ಆಕಾಂಕ್ಷೆ ಒಂದೆಡೆ, ತತ್ಫಲವಾದ ಯುದ್ಧ ಇನ್ನೊಂದೆಡೆ ಇರುವ ಈ ನಾಗರಿಕತೆಯನ್ನು ನಂಬದಿರುವ ಪ್ರಬುದ್ಧ ವಿಚಾರಪರಂಪರೆಯೊಂದು ಪಶ್ಚಿಮ ದೇಶಗಳಲ್ಲಿ ಬೆಳೆಯುತ್ತಿದೆ.

ಒಳ್ಳೆಯದೋ ಕೆಟ್ಟದ್ದೋ, ಪಾಶ್ಚಾತ್ಯ ಅರ್ಥದಂತೆ ಭಾರತ ಔದ್ಯೋಗೀಕೃತವೇಕಾಗಬೇಕು? ಪಾಶ್ಚಾತ್ಯ ನಾಗರಿಕತೆ ನಗರಪ್ರಧಾನವಾದುದು. ಇಂಗ್ಲೆಂಡ್ ಇಟಲಿಗಳಂಥ ರಾಷ್ಟ್ರಗಳು ಪಟ್ಟಣಗಳನ್ನು ಕಟ್ಟಿಕೊಳ್ಳಬಲ್ಲವು. ಬಹುವಿರಳ ಜನಸಂಖ್ಯೆಯುಳ್ಳ ಅಮೆರಿಕದಂಥ ದೊಡ್ಡ ದೇಶಕ್ಕೂ ಬಹುಶಃ ಬೇರೆ ದಾರಿ ಇರದು. ವಿಪುಲ ಜನಸಂಖ್ಯೆಯುಳ್ಳ ವಿಸ್ತಾರವಾದ ದೇಶ ಭಾರತ. ಈ ತನಕ ಅದರ ಆವಶ್ಯಕತೆಗಳನ್ನು ಪೂರೈಸಿದೆ ಅದರ ಗ್ರಾಮೀಣ ಪರಂಪರೆ. ಅದು ಪಾಶ್ಚಾತ್ಯ ಮಾದರಿಯನ್ನು ನಕಲು ಮಾಡಬೇಕಿಲ್ಲ, ಮಾಡಬಾರದು. ಒಂದು ಸನ್ನಿವೇಶದಲ್ಲಿರುವ ಒಂದು ರಾಷ್ಟ್ರಕ್ಕೆ ವಿಹಿತವಾದುದು ಬೇರೊಂದು ಸನ್ನಿವೇಶದಲ್ಲಿರುವ ಮತ್ತೊಂದು ರಾಷ್ಟ್ರಕ್ಕೂ ವಿಹಿತವಾಗಬೇಕೆಂಬುದೇನೂ ಇಲ್ಲ. ಒಬ್ಬನಿಗೆ ಅಮೃತವಾದುದು ಎಷ್ಟೋ ವೇಳೆ ಇನ್ನೊಬ್ಬನಿಗೆ ವಿಷ. ಒಂದು ದೇಶದ ಭೌತ ಭೂಗೋಳ ಅದರ ಸಂಸ್ಕೃತಿಯ ಸ್ವರೂಪವನ್ನು ಪ್ರಧಾನವಾಗಿ ನಿರ್ಧರಿಸುತ್ತದೆ. ಉತ್ತರಧ್ರುವದಲ್ಲಿರುವವನಿಗೆ ಫರ್‌ಕೋಟು ಅತ್ಯಗತ್ಯವಿರಬಹುದು, ಸಮಭಾಜಕವೃತ್ತದ ಬಳಿ ಇರುವವನ ಉಸಿರುಕಟ್ಟಿಸೀತು ಅದು.

'ಚರಖಾ ಭೌತಜೀವನದ ಸಮಸ್ಯೆಯನ್ನು ಬಗೆಹರಿಸದು'—ಎಂಬ ಎರಡನೆಯ ಸೂಚನೆ ನಿಲ್ಲುವಂಥದಲ್ಲ. ಅದಕ್ಕೆ ವಿರುದ್ಧವಾಗಿ ಈ ಸಮಸ್ಯೆಗೆ ಚರಖಾ ಅಥವಾ ಅದರ ಪರ್ಯಾಯವೇ ಪರಿಹಾರ. ಭಾರತ ಜೀವಂತವಾಗಿ ಬದುಕಲು ಕುಟೀರ ಉದ್ಯೋಗಗಳ ಅಗತ್ಯವನ್ನು ಭಾರತೀಯ ಅಥವಾ ಐರೋಪ್ಯರಲ್ಲಿ ಗಣ್ಯರಾದ ಲೇಖಕರೆಲ್ಲರೂ ಒಪ್ಪಿಕೊಂಡಿದಾರೆ. ಶ್ರೀ ಗ್ರೆಗ್ ಅವರ ನಿರುದ್ವೇಗಕರ ಪ್ರಬಂಧವನ್ನು ಒಮ್ಮೆಲೇ ತಳ್ಳಿಹಾಕಿ ಈ ಲೇಖಕರು ತಮಗೂ, ತಮ್ಮ ದೇಶಕ್ಕೂ, ಶ್ರೀ ಗ್ರೆಗ್ ಅವರಿಗೂ ನ್ಯಾಯ ಎಸಗಿಲ್ಲ. ಶ್ರೀ ಗ್ರೆಗ್ ಅವರಿಗೆ ಸಾಕಷ್ಟು ಎಂಜಿನಿಯರಿಂಗ್ ಅನುಭವವಿದೆ. ಭಾರತದಲ್ಲಿ ವಾಸಿಸುವ ಮೂವತ್ತು ಕೋಟಿ ಜನರ ಕೈಕಾಲುಗಳಲ್ಲಿ ಅಡಕವಾಗಿರುವ ಸೌರಶಕ್ತಿಯ ಬದಲು ಕೇವಲ ಭೌತಜೀವನ ನಿರ್ವಾಹಕ್ಕಾಗಿ ಹಬೆ ಅಥವಾ

ಇತರ ಬಗೆಯ ಶಕ್ತಿಯನ್ನು ಬಳಸುವುದರ ಮೂಲಕ ಅದನ್ನು ವ್ಯರ್ಥಗೊಳಿಸುವುದಾದರೆ ಭಾರತದ ಕೋಟಿಗಟ್ಟಲೆ ಜನತೆಗೆ ಆತ್ಮಘಾತುಕವಾದೀತು, ನಿಶ್ಚಯವಾಗಿ ಮರಣವೇ ಅದು ಎಂಬುದನ್ನು ನಿಖರವಾಗಿ ತೋರಿಸಿಕೊಟ್ಟಿದಾರೆ ಅವರು. ಆಹಾರವನ್ನು ಉಣ್ಣಲು ಕೈಯಿಂದ ಎತ್ತಿ ಬಾಯಿಗೆ ಹಾಕಿಕೊಳ್ಳುವ ಬದಲು ಯಂತ್ರವೊಂದು ಕೈಯ ಕೆಲಸಮಾಡಲೆಂದು ಬಿಟ್ಟು, ಕೈಯ ನರಗಳು ಮಾಡುವ ಸ್ಪರ್ಶಜ್ಞಾನದ ಕೆಲಸವನ್ನು ಅವು ಮಾಡಲಾರದಂತಾಗಿ, ತೀರಾ ಬಿಸಿಯಾದ ಪದಾರ್ಥಗಳನ್ನು ಬಾಯಿಗೆ ಹಾಕಿಕೊಂಡು ಬವಣೆಪಡಬೇಕಾದಂಥವನ ಪರಿಸ್ಥಿತಿಗೆ ಸಮನಾದುದು ಅಂಥ ಕೆಲಸ.

ಮೂರನೆಯ ಪ್ರಸ್ತಾಪಕ್ಕೆ ಉತ್ತರ ಸರಳ. ಚರಖಾಗೆ ಸಂಬಂಧಿಸಿದ ಷರತ್ತುಗಳು "ಸದ್ಯದ ಪ್ರವೃತ್ತಿಗಳ ಮೇಲೆ ಹಾಗೂ ಮನುಷ್ಯಸ್ವಭಾವದಿಂದ" ಮಿತಿಮೀರಿದ ಬೇಡಿಕೆಯನ್ನೇನೂ ಹೊರಿಸುವುದಿಲ್ಲವಷ್ಟೇ ಅಲ್ಲ, ಅವು "ಭಾರತದ ಸದ್ಯದ ಪ್ರವೃತ್ತಿಗಳಿಗೆ, ಮನುಷ್ಯಸ್ವಭಾವಕ್ಕೆ" ಅನುಗುಣವಾಗಿಯೇ ಇವೆ. ಹಾಗಿರದಿದ್ದರೆ ಇಂದಿನ ಗೊಂದಲಮಯವಾದ, ನಿರಾಶಾಭರಿತವಾದ ಸಂದರ್ಭದಲ್ಲಿ ರಾಟೆ ಎರಡು ಸಾವಿರಕ್ಕೂ ಹೆಚ್ಚಿನ ಹಳ್ಳಿಗಳಿಗೆ ಹಬ್ಬುವುದು ಸಾಧ್ಯವಿರಲಿಲ್ಲ. ಕಳೆದ ಎಂಟು ವರ್ಷಗಳ ಅದರ ಪುನರುಜ್ಜೀವನದ ಅವಧಿಯಲ್ಲಿ ಅದು ಸಾಧಿಸಿರುವ ಏಕಪ್ರಕಾರವಾದ, ಅಗತ್ಯವಾಗಿ ನಿಧಾನವಾದ, ಪ್ರಗತಿಯನ್ನು ತೋರುವುದು ಸಾಧ್ಯವಿರಲಿಲ್ಲ.

ನಾಲ್ಕನೆಯ ಪ್ರಸ್ತಾಪದಲ್ಲಿ ಲೇಖಕರು ಯಂತ್ರಯುಗದ ಆರಾಧನೆಯನ್ನು "ದೇಶದ ಆಂತರಿಕ ಅಗತ್ಯಗಳ ಪೂರೈಕೆ"ಗಾಗಿ ಅಲ್ಲ, "ವಿದೇಶೀ ಮಾರುಕಟ್ಟೆಗೆ ಮುತ್ತಿಗೆಯನ್ನು ಹಾಕಿ ಆಕ್ರಮಿಸುವುದಕ್ಕಾಗಿ" ಸಮರ್ಥಿಸುತ್ತಾರೆ. ಸುದೈವವೋ ದುರ್ದೈವವೋ ಭಾರತ ಮುತ್ತಿಗೆ ಹಾಕಿ ಆಕ್ರಮಿಸಲು ಯಾವ ವಿದೇಶೀ ಮಾರುಕಟ್ಟೆಯೂ ಇಲ್ಲ. ಪಶ್ಚಿಮದ ಪರಿಪೂರ್ಣರಾದ ಶೋಷಕರು ಆಗಲೇ ಚಳಕ ತೋರಿಸಿಬಿಟ್ಟಿದಾರೆ. ವಿದೇಶೀ ತಯಾರಿಕೆಗಾರ ರಾಷ್ಟ್ರಗಳನ್ನು ಮುತ್ತಿ ಆಕ್ರಮಿಸಿಕೊಂಡರೆ ಮಾತ್ರವೇ ನಾವು ವಿದೇಶೀ ಮಾರುಕಟ್ಟೆಗಳನ್ನು ಮುತ್ತಿ ಆಕ್ರಮಿಸಬಲ್ಲೆವು. ಈ ಲೇಖಕರೇನಾದರೂ ಅಂಥ ಭವ್ಯ ಕನಸು ಇಟ್ಟುಕೊಂಡಿದ್ದರೆ ಅದು ಚರಖಾದ ಭಕ್ತರ ಮುಂದಿರುವ ಕೆಲಸಕ್ಕಿಂತ ಕಠಿಣವಾದುದೆಂದು ನನ್ನ ಭಾವನೆ.

ಅವರ ಕಟ್ಟಕಡೆಯ ಪ್ರಸ್ತಾಪ ಲೇಖಕರ ಇಡೀ ಪ್ರತಿಪಾದನೆಯನ್ನೇ ಹುಸಿಯಾಗಿಸಿದೆ. ಅವರು ಭಾರತವನ್ನು ಅಭಿನವಗೊಳಿಸಿಯೂ ಅದರ ಆಧ್ಯಾತ್ಮಿಕತೆಯನ್ನು ಉಳಿಸಿಕೊಂಡಾರು. ಅದಿಲ್ಲದೆ "ನವೀನತೆ ವಿನಾಶಕಾರಿ" ಎನ್ನುತ್ತಾರೆ. ಅನುಭವಶಾಲಿ ಋಷಿವರ್ಯರು ಅಸಾಧ್ಯವೆಂದು ಹೇಳಿದುದನ್ನೇ ಇವರು ನಮಗೆ ಮಾಡಬೇಕೆನ್ನುತ್ತಾರೆ. "ದೇವರು ಹಾಗೂ ಕುಬೇರ—ಇಬ್ಬರಿಗೂ ಸೇವೆಸಲ್ಲಿಸುವುದು ಅಸಾಧ್ಯ" ಪಶ್ಚಿಮ ದೇಶಗಳು ಇವೆರಡರ ಸಮನ್ವಯ ಮಾಡುವಲ್ಲಿ ವಿಫಲವಾಗಿವೆಯೆಂದು ಇವರು ಒಪ್ಪಿಕೊಳ್ಳುವಂತಿದೆ. ಆ ಅಸಾಧ್ಯವಾದ ಕೆಲಸವನ್ನು ಭಾರತ ಮಾಡಬಹುದೆಂದು ಇವರೇಕೆ ಭಾವಿಸುವರೋ? ನಮ್ಮ ಪುರಾತನರು ಇದನ್ನು ಮಾಡಬಹುದಾಗಿದ್ದಿದ್ದರೆ ಎಷ್ಟೋ ಹಿಂದೆಯೇ ಇದನ್ನು ಮಾಡಿಬಿಡುತ್ತಿದ್ದರೆಂದೇಕೆ ತಿಳಿಯಬಾರದು? ಈ ಎಲ್ಲ ಪ್ರಯತ್ನ ಮಾಡಿದ ಬಳಿಕವೇ ಉಪನಿಷತ್ಕಾರರು ಹೇಳಿದ್ದು: "ಎಲ್ಲವೂ ಭಗವಂತನದು, ಆದುದರಿಂದ ಪರರ ಒಡವೆಗೆ ಆಸೆಪಡದಂತೆ ಬದುಕು" ಎಂದು. ನಿಜಕ್ಕೂ ಶೋಷಣವೆಂದರೆ ಅಪಹರಣವೇ. ಅಪಹರಣ ಆಧ್ಯಾತ್ಮಿಕತೆಯೊಂದಿಗೆ ಎಂದಿಗೂ ಸಮನ್ವಯಗೊಳ್ಳದು. ಆದುದರಿಂದ ಅಧ್ಯಾತ್ಮಸಂಸ್ಕೃತಿಗಾಗಿಯೇ ಮೀಸಲಾದ ಪತ್ರಿಕೆಯಲ್ಲಿ ಇಂಥ ವಿಷಾದಕರ ನಿರ್ಣಯಕ್ಕೆ ಬಂದ ಲೇಖ ಓದಿ ನನಗೆ ನೋವಾಯಿತು.

ಈ ಎರಡಲಗಿನ ಕತ್ತಿಯಂಥ ಸಿದ್ಧಾಂತದ ಪ್ರತಿಪಾದನೆಯೊಡನೆ ಸ್ವಾಮಿ ವಿವೇಕಾನಂದರ ಹೆಸರನ್ನು ಲೇಖಕರು ದುರುಪಯೋಗಮಾಡಿದುದು ನನಗೆ ಇನ್ನೂ ಹೆಚ್ಚು ದುಃಖ ಉಂಟುಮಾಡಿದೆ. ತರ್ಕಬದ್ಧ ಚರ್ಚೆಯೊಂದರಲ್ಲಿ ದಿವಂಗತ ಮಹಿಮಾವಂತರ ಆಧಾರವಾಕ್ಯವನ್ನು ಆನುಮಾನಿಕ ಆವಾಹನೆಯಾಗಿ ತರುವುದನ್ನು ಧರ್ಮಲಂಡತನವೆಂದೇ ಭಾವಿಸಬೇಕು. ಎಷ್ಟೇ ಆದರೂ ಸುಶಿಕ್ಷಿತ ಭಾರತೀಯರಾದ ನಾವು ಹಿಡಿಯಷ್ಟು ಜನ, ಮೂಕ ಜನಕೋಟಿಯ ಧರ್ಮದರ್ಶಿಗಳು ಎಂದುಕೊಳ್ಳುತ್ತೇವೆ, ಅವರ ಭಾಗ್ಯದೊಡನೆ ದ್ಯೂತವಾಡುತ್ತಿರುವ ನಮ್ಮ ಹೊಣೆ ತುಂಬ ಗಂಭೀರ. ಅಂಥದರಲ್ಲಿ ಸ್ವಲ್ಪ ಅಧ್ಯಾತ್ಮದರ್ಶನ ಪಡೆದವರೆಂದುಕೊಳ್ಳುವವರ ಹೆಗಲಿನ ಹೊಣೆಯೋ ಇನ್ನೂ ಗಂಭೀರತರ.೧೧೬

**ಡಾ|| ಜಾನ್-ಡಿ-ಬೋಯೆರ್** — ಜೀವನವನ್ನು ಸರಳಗೊಳಿಸಬೇಕು ಎನ್ನುವಿರಿ, ಔದ್ಯೋಗೀಕರಣವನ್ನು ತೊಡೆಯಬೇಕೆಂದೆನ್ನುವಿರಿ.

**ಗಾಂಧೀಜೀ**—೩ ಕೋಟಿ ಜನರ ಬದಲು ೩೦,೦೦೦ ಜನರ ಶ್ರಮದಿಂದ ನನ್ನ ದೇಶಕ್ಕೆ ಬೇಕಾದುದೆಲ್ಲವನ್ನೂ ಉತ್ಪನ್ನಮಾಡಬಲ್ಲೆನಾದರೆ ನನಗೇನು ಪರಿವೆ ಇಲ್ಲ, ಆದರೆ ಮೂರು ಕೋಟಿ ಜನ ಸೋಮಾರಿಗಳೂ ನಿರುದ್ಯೋಗಿಗಳೂ ಆಗಬಾರದು, ಅಷ್ಟೆ. ಸೋಷಲಿಸ್ಟರು ದಿನಕ್ಕೆ ಒಂದು ಅಥವಾ ಎರಡು ಘಂಟೆಗಳ ವರೆಗೆ ಕೆಲಸದ ಕಾಲವನ್ನು ಇಳಿಸುವಷ್ಟರಮಟ್ಟಿಗೆ ಔದ್ಯೋಗೀಕರಣವನ್ನು ತರಬಯಸುತ್ತಾರೆ ಎಂದು ಬಲ್ಲೆ. ಆದರೆ ನನಗದು ಬೇಕಿಲ್ಲ.

" ಹೆಚ್ಚು ಬಿಡುವು ಪಡೆದಾರು ಅವರು "

" ಬಿಡುವು, ಹಾಕಿ ಆಡಲಿಕ್ಕೇ ? "

" ಅದಕ್ಕೇ ಅಲ್ಲ, ಉದಾಹರಣೆಗೆ, ನಿರ್ಮಾಪಕ ಹಸ್ತಕೌಶಲದ ಕೆಲಸ ಮಾಡಬಹುದು."

" ನಿರ್ಮಾಪಕ ಹಸ್ತಕೌಶಲದ ಕೆಲಸಗಳಲ್ಲೇ ತೊಡಗಿರೆಂದು ನಾನೂ ಹೇಳುತ್ತಿದೇನೆ. ದಿನಕ್ಕೆ ಎಂಟು ಘಂಟೆಕಾಲ ಕೈಯಿಂದ ಕೆಲಸ ಮಾಡಿ ಅವರು ವಸ್ತು ಉತ್ಪತ್ತಿಮಾಡಿಯಾರು."

" ಪ್ರತಿ ಮನೆಯಲ್ಲೂ ಒಂದು ರೇಡಿಯೋ, ಪ್ರತಿಯೊಬ್ಬನಿಗೂ ಒಂದು ಕಾರು ಇರುವಂಥ ಸಮಾಜವ್ಯವಸ್ಥೆಯನ್ನಂತೂ ಖಂಡಿತ ನೀವು ಕಲ್ಪಿಸಿ ಕೊಳ್ಳುವುದಿಲ್ಲ. ಅದು ಅಧ್ಯಕ್ಷ ಹೂವರರ ಸೂತ್ರ. ಅವರು ಒಂದಲ್ಲ ಎರಡು ರೇಡಿಯೋ, ಎರಡು ಕಾರು ಬಯಸಿದರು."

" ನಮ್ಮ ಬಳಿ ಅಷ್ಟೆಲ್ಲ ಕಾರುಗಳಾದರೆ ನಮಗೆ ನಡೆದಾಡಲೇ ಸ್ಥಳವಿಲ್ಲ ವಾದೀತು "—ಎಂದರು ಗಾಂಧೀಜೀ.

" ಹೌದು. ನಮ್ಮಲ್ಲಿ ವರ್ಷಕ್ಕೆ ೪೦,೦೦೦ ಮಂದಿ ಅಪಘಾತಗಳಲ್ಲಿ ಸಾಯುತ್ತಾರೆ. ಅದಕ್ಕೆ ಮೂರರಷ್ಟು ಜನ ಅಂಗಹೀನರಾಗುತ್ತಾರೆ."

" ಏನೇ ಆದರೂ ಭಾರತದ ಎಲ್ಲ ಹಳ್ಳಿಗಳಿಗೂ ರೇಡಿಯೋ ಬರುವ ದಿನವನ್ನು ನೋಡಲು ನಾನಂತೂ ಬದುಕಿರುವುದಿಲ್ಲ."

" ಪಂಡಿತ ಜವಾಹರಲಾಲರು ಸಮೃದ್ಧಿಯ ಅರ್ಥಶಾಸ್ತ್ರದ ಪ್ರಕಾರ **ಯೋಚಿಸುವಂತಿದೆ ? "**

" ನಾ ಬಲ್ಲೆ. ಆದರೆ ಯಾವುದು ಸಮೃದ್ಧಿ ? ಅಮೆರಿಕದಲ್ಲಿ ನೀವು ಮಾಡುವಂತೆ ಲಕ್ಷಾಂತರ ಟನ್ನುಗಳ ಗೋಧಿಯನ್ನು ಹಾಳುಮಾಡುವ ಸಾಮರ್ಥ್ಯವೇ ? "

" ಹೌದು. ಅದು ಬಂಡವಾಳವಾದದ ಪಾಪದ ಪ್ರಾಯಶ್ಚಿತ್ತ. ಈಗ ಅವರೂ ಹಾಳುಮಾಡರು. ಗೋಧಿಯನ್ನು ಬೆಳೆಯಬೇಡಿರೆಂದು ಹಣ, ಲಂಚ ಕೊಡುತ್ತಾರೆ. ಮೊಟ್ಟೆಗಳ ಧಾರಣೆ ಇಳಿದುಹೋಗಿತ್ತಂತೆ. ಆಗ ಒಬ್ಬರೊಬ್ಬರಿಗೆ ಮೊಟ್ಟೆ ಎಸೆದಾಡುವ ಆಟಕ್ಕೆ ತೊಡಗಿದರು ಜನ."

" ಅದೇ ನಮಗೆ ಬೇಡ ಎನ್ನುವುದು. ಸಮೃದ್ಧಿ ಎಂದರೆ ಪ್ರತಿಯೊಬ್ಬನಿಗೂ ಉಣಲು, ಕುಡಿಯಲು, ಉಡಲು ಸಾಕಷ್ಟು, ಮನಸ್ಸನ್ನು ಸುಶಿಕ್ಷಿತಗೊಳಿಸಲು ತಕ್ಕ ವ್ಯವಸ್ಥೆ ಎಂದರೆ ನನಗೆ ಸಾಕು. ನಾನು ಅರಗಿಸಿಕೊಳ್ಳಲಾರದಷ್ಟನ್ನು ನನ್ನ ಹೊಟ್ಟೆಗೆ ತುರುಕುವುದಿಲ್ಲ. ನಾನು ಉಪಯುಕ್ತವಾಗಿ ಬಳಸಬಹುದಾದು ದಕ್ಕಿಂತ ಹೆಚ್ಚು ಬಯಸೆ. ಆದರೆ ಬಡತನ, ಬವಣೆ, ಗೋಳು, ಧೂಳು, ಹೊಲಸುಗಳೂ ನನಗೆ ಬೇಡ ಭಾರತದಲ್ಲಿ."

" ನೀವು ದರಿದ್ರನಾರಾಯಣನ ಆರಾಧಕರು, ದಾರಿದ್ರ್ಯವನ್ನು ಕೇವಲ ಅದಕ್ಕಾಗಿಯೇ ಎತ್ತಿಹಿಡಿಯುವಿರಿ ಎನ್ನುತ್ತಾರಲ್ಲ ಪಂಡಿತ ಜವಾಹರಲಾಲರು ತಮ್ಮ ಆತ್ಮಕಥೆಯಲ್ಲಿ."

" ಬಲ್ಲೆ " ಎಂದರು ಗಾಂಧೀಜೀ ನಗುತ್ತಾ.೧೧೭

**ಪ್ರಶ್ನೆ**—ಜಗತ್ತನ್ನೇ ಕೊಚ್ಚಿಕೊಂಡು ಹೋಗುತ್ತಿರುವ ಔದ್ಯೋಗೀ ಕರಣದ ಮಹಾಪೂರದ ಬಗೆಗೆ ವಾಸ್ತವವಾದಿಯಾದ ನನ್ನ ನಿಲುವು ಎಂಥದಿರ ಬೇಕು ? ಸ್ವಯಂಪೂರ್ಣ ಹಳ್ಳಿಗಳ ಅಂತಿಮ ಆದರ್ಶವಂತೂ ಇದ್ದೇ ಇದೆ. ಆದರೆ ಅದು ಬರಬೇಕಾದರೆ ಭಾರತೀಯ ಅರ್ಥದಲ್ಲಿ ಪ್ರತಿಯೊಬ್ಬರೂ ಸಂಸ್ಕೃತ ರಾದಾಗ ಮಾತ್ರ ಸಾಧ್ಯ. ಔದ್ಯೋಗೀಕರಣ ಇದಕ್ಕೆ ನೆಲವನ್ನು ಮಟ್ಟ ಮಾಡದೇ ? ಅದರ ಬರಿಯ ವಿರೋಧದಿಂದ ಶಕ್ತಿ ವ್ಯರ್ಥವಾಗದೇ ? ಅದರ ದಿಕ್ಕನ್ನು ಬದಲಿಸಲು ಯತ್ನಿಸುವುದು ಉತ್ತಮವಾಗದೇ ?

**ಉತ್ತರ**— ನೀವೊಬ್ಬ ಎಂಜಿನಿಯರರು. ಯಂತ್ರಶಾಸ್ತ್ರದ ಉಪಮೆ ನಿಮಗೆ ಹಿಡಿಸೀತು. ಬಲಗಳ ಸಮಾನಾಂತರ ಚತುರ್ಭುಜ ನಿಮಗೆ ಗೊತ್ತು.

ಅದರಲ್ಲಿ ಬಲಗಳು ಒಂದನ್ನೊಂದು ಹೊಡೆದುಹಾಕುವುದಿಲ್ಲ. ಒಂದೊಂದು ಬಲವೂ ತನ್ನ ರೇಖೆಯಲ್ಲಿ ತಾನು ತನ್ನ ಕೆಲಸಮಾಡುತ್ತದೆ. ಕಡೆಗೆ ಫಲಿತಾಂಶ ಬರುತ್ತದೆ, ಚಲನೆಯ ಅಂತಿಮ ದಿಶೆಯನ್ನು ಅದು ಸೂಚಿಸುತ್ತದೆ. ನೀವು ಹೇಳುವ ಸಮಸ್ಯೆಯ ವಿಷಯವೂ ಹೀಗೆ. ಔದ್ಯೋಗೀಕರಣವನ್ನೇ ದೇವರೆಂದು ಭಾವಿಸುವ ಸ್ಥಿತಿ ಹುಟ್ಟಿರುವ ರಷ್ಯದ ಕಡೆ ನೋಡಿದರೂ ಅಲ್ಲಿನ ಜೀವನವೂ ನನಗೇಕೋ ಚಲೋ ಕಾಣಿಸುತ್ತಿಲ್ಲ. ಬೈಬಲ್ಲಿನ ಭಾಷೆ ಬಳಸುವುದಾದರೆ: "ಆತ್ಮವನ್ನೇ ಕಳೆದುಕೊಂಡ ಮೇಲೆ ಇಡೀ ಲೋಕವನ್ನೇ ಗಳಿಸಿ ಏನು ಲಾಭ ?" ಆಧುನಿಕ ಪರಿಭಾಷೆಯಲ್ಲಿ, ಮಾನವನ ವ್ಯಕ್ತಿತ್ವ ಕಳೆದುಕೊಂಡು ಯಂತ್ರದ ಗಾಲಿಯಾಗುವುದು ಅವನ ಘನತೆಗೇ ಕಡಿಮೆ. ಪ್ರತಿವ್ಯಕ್ತಿಯೂ ಸಮಾಜದ ಪರಿಪೂರ್ಣ, ಪೂರ್ಣ ವಿಕಸಿತ ಸದಸ್ಯನಾಗಬೇಕು ಎಂಬುದೇ ನನ್ನ ಆಪೇಕ್ಷೆ. ಗ್ರಾಮಗಳು ಸ್ವಪರಿಪೂರ್ಣವಾಗಬೇಕು. ಅಹಿಂಸಾತ್ಮಕವಾಗಿ ಕೆಲಸ ಮಾಡಲು ಬೇರೆ ಹಾದಿಯನ್ನೇ ಕಾಣೆ ನಾನು. ಈಗ ನನ್ನದು ಅದೇ ಶ್ರದ್ಧೆ. ಔದ್ಯೋಗೀಕರಣದ ವಿಶ್ವಾಸವಿರುವ ಇತರರಿದ್ದಾರೆ, ಬಲ್ಲೆ. ನನ್ನ ಶ್ರದ್ಧೆಗಾಗಿ ಸಜೀವವಾಗಿ ಶ್ರಮಿಸುವೆ ನಾನು. ಸಮನ್ವಯದ ವಿಧಾನ ನಡೆಯುತ್ತಲೇ ಹೋಗಬೇಕು. ಫಲಿತಾಂಶವೇನಾದೀತೋ ನಾನರಿಯೆ. ಏನೇ ಇರಲಿ, ಅದೆಲ್ಲ ಒಳ್ಳೆಯದಕ್ಕೇ.

**ಪ್ರಶ್ನೆ**—ಸ್ವಸಂಪೂರ್ಣ ಗ್ರಾಮದ ಆದರ್ಶಕ್ಕೆ ಧಕ್ಕೆ ತರದ ರೀತಿಯಲ್ಲಿ ಔದ್ಯೋಗೀಕರಣದೊಡನೆ ಒಪ್ಪಂದ ಸಾಧ್ಯವಿಲ್ಲವೇ ?

**ಉತ್ತರ**— ಓಹೋ, ರೈಲುಗಳಿವೆ, ನಾ ಬೇಡವೆನ್ನುವುದಿಲ್ಲ. ಮೋಟಾರು ಕಾರುಗಳೆಂದರೆ ನನಗಾಗುವುದಿಲ್ಲ, ಆದರೂ ಇಷ್ಟವಿರಲಿ ಬಿಡಲಿ ಅವನ್ನೂ ಬಳಸುತ್ತೇನೆ. ಮತ್ತೆ ಫೌಂಟೆನ್‌ಪೆನ್ನು ಕಂಡರೆ ನನಗೆ ದ್ವೇಷ, ನೋಡಿ ಈಗ ಪೆನ್ನಿನಿಂದಲೇ ಬರೆಯುತ್ತಿದ್ದೇನೆ, ಬಿದಿರಿನ ಲೆಕ್ಕಣಿಕೆ ಪೆಟ್ಟಿಗೆಯಲ್ಲಿ ಇದ್ದರೂ. ಪೆನ್ನನ್ನು ಬಳಸುವಾಗೆಲ್ಲ ನನಗೆ ನೋವಾಗುತ್ತದೆ, ಎಲ್ಲೋ ಪೆಟ್ಟಿಗೆಯಲ್ಲಿ ಬಿಸುಟ ದೌತಿಕಡ್ಡಿಯ ದುರ್ಗತಿ ಕುರಿತು ಚಿಂತಿಸುತ್ತೇನೆ. ಹೆಜ್ಜೆಹೆಜ್ಜೆಗೂ ರಾಜಿಯೇ, ಆದರೆ ರಾಜಿಮಾಡಿಕೊಳ್ಳುತ್ತಿದ್ದೇವೆ ಎಂಬ ಪ್ರಜ್ಞೆ ಇರಬೇಕು, ಅಂತಿಮ ಗುರಿ ಸದಾ ಚಿತ್ತದೆದುರು ಇರಬೇಕು.

**ಪ್ರಶ್ನೆ**—ಗಡಿಬಿಡಿಯ ಪಡುವಲ ಜಗತ್ತಿನಿಂದ ಭಾರತದ ಹಳ್ಳಿಗಳ ಜನಸ್ತೋಮದ ಕಡೆ ತಿರುಗಿದಾಗಲೆಲ್ಲ ಜಡತೆ ರಾಜ್ಯವಾಳುವ ಯಾವುದೋ ಬೇರೆ ಲೋಕದಲ್ಲಿ ಸಂಚರಿಸುತ್ತಿರುವಂತೆ ಭಾಸವಾಗುತ್ತದೆ.

**ಉತ್ತರ**—ಮೇಲೆ ಮೇಲೆ ನೋಡುತ್ತಿರುವತನಕ ಹಾಗೆಯೇ. ಆದರೆ ಅವರೊಡನೆ ಮಾತಾಡಿದ ಗಳಿಗೆಯೇ, ಅವರಿಂದ ಮಾತು ಹೊರಟ ಕ್ಷಣವೇ ಅವರ ಬಾಯಿಂದ ಜ್ಞಾನ ಹೊರಬರುವುದನ್ನು ಕಂಡೀರಿ. ಒರಟು ಮೈಯ ಹಿಂದೆ ಅಧ್ಯಾತ್ಮದ ಗಂಭೀರ ಸರೋವರವೇ ಕಂಡೀತು. ಇದನ್ನು ಸಂಸ್ಕೃತಿ ಎನ್ನುತ್ತೇನೆ ನಾನು. ಪಶ್ಚಿಮದಲ್ಲಿ ಅಂಥದು ನಿಮಗೆ ಸಿಗದು. ಯೂರೋಪಿನ ರೈತನೊಂದಿಗೆ ನೀವು ಮಾತಾಡಿ, ಅಧ್ಯಾತ್ಮವಿಷಯಗಳಲ್ಲಿ ಅವನಿಗೆ ಆಸಕ್ತಿಯೇ ಇರದು. ಭಾರತದ ಹಳ್ಳಿಗಳಲ್ಲಿ ಒರಟು ಹೊರಮೈಯ ಮರೆಯಲ್ಲಿ ಯುಗ ಯುಗದ ಸಂಸ್ಕೃತಿ ಅಡಗಿದೆ. ಹೊರತೊಗಟೆ ತೆಗೆದುಹಾಕಿ, ಅವನ ನಿರಂತರ ದಾರಿದ್ರ್ಯವನ್ನು, ಅನಕ್ಷರತೆಯನ್ನು ತೊಡೆಯಿರಿ, ಅಗೋ! ಅಲ್ಲಿ ಕಾಣುವಿರಿ ಸುಸಂಸ್ಕೃತ, ಸಭ್ಯ, ಸ್ವತಂತ್ರ ನಾಗರಿಕನ ಸೊಗಸಾದ ಮಾದರಿಯನ್ನು.೧೧೮

**ಅಮೆರಿಕದ ಪತ್ರಿಕರ್ತ**—ಭಾರತದ ಜನ ಕೈನೂಲಿನಿಂದಾದ ಬಟ್ಟೆಯನ್ನೇ ಬಳಸಲಿ. ಭಾರತದ ಗಿರಣಿಗಳು ತಯಾರಿಸುವ ಬಟ್ಟೆಯನ್ನೂ, ನೂಲನ್ನೂ ಹೊರದೇಶಗಳಿಗೇಕೆ ಕಳಿಸಬಾರದು? ಹೀಗೆ ಮಾಡಿದರೆ ಹತ್ತಿಯ ಬೆಳೆಗಾರನಿಗೆ ಹಿತವಾಗದೇ ?

**ಗಾಂಧೀಜೀ**—ಅಂಥ ಸೂಚನೆಗೆ ನನ್ನದೇನು ಅಡ್ಡಿಯಿಲ್ಲ. ಆದರೆ ನಮ್ಮ ಬಟ್ಟೆಯನ್ನು ಪಡೆವ ದೇಶಕ್ಕೆ ಅಂಥ ಆವಶ್ಯಕತೆ ಮನಗಂಡಿರಬೇಕು. ಭಾರತದ ಸಲುವಾಗಿ ಇತರ ದೇಶಗಳನ್ನು ಸುಲಿಗೆ ಮಾಡುವ ಇಚ್ಛೆ ನನಗಿಲ್ಲ. ನಾವೇ ಶೋಷಣೆಯ ವಿಷಜಾಡ್ಯದಿಂದ ಬಳಲುತ್ತಿದೇವೆ. ನನ್ನ ದೇಶವೇ ಅಂಥ ಪಾಪಕ್ಕೆ ಗುರಿಯಾಗುವುದನ್ನು ನಾ ಬಯಸೆ. ಸ್ವತಂತ್ರ ರಾಷ್ಟ್ರವಾದ ಜಪಾನ್ ಭಾರತದ ನೆರವನ್ನು ಬಯಸಿ ನಾವು ಕೆಲ ಸಾಮಾನುಗಳನ್ನು ಅಗ್ಗವಾಗಿ ತಯಾರಿಸಿ ತಮಗೆ ಕಳಿಸಲಿ ಎಂದು ಹೇಳಿದರೆ ಸಂತೋಷದಿಂದ ನಾವು ಮಾಡಿಯೇವು. ನನ್ನ ಯೋಜನೆಯಲ್ಲಿ ಒಂದು ದೇಶ ತನ್ನ ಸೇನೆ, ನೌಕಾದಳದ ಬಲದಿಂದ ಇನ್ನೊಂದು ದೇಶದ ಮೇಲೆ ತನ್ನ ಸರಕು ಹೇರುವುದಂತೂ ನಿಲ್ಲಲೇ ಬೇಕು.

**ಅಮೆರಿಕದ ಪತ್ರಕರ್ತ**—ವ್ಯಾಪಾರದ ಸರಕುಗಳ ಹೊರತಾಗಿ ಭಾರತ ಅಮೆರಿಕಕ್ಕೆ ಕೊಡತಕ್ಕುದೇನಿದೆ? ಅಮೆರಿಕದಿಂದ ಭಾರತ ಪ್ರತಿಯಾಗಿ ನಿರೀಕ್ಷಿಸುವುದೇನಿದೆ?

**ಗಾಂಧೀಜೀ**—ನಿಮ್ಮ ಪ್ರಶ್ನೆಯನ್ನು ಸ್ವಲ್ಪ ತಿದ್ದಬೇಕು ನಾನು. ಭಾರತ ಅಮೆರಿಕಕ್ಕೆ ಯಾವ ವ್ಯಾಪಾರದ ಸರಕನ್ನೂ ಕಳಿಸದು. ಬರಿಯ ಕಚ್ಚಾಮಾಲನ್ನು ಮಾತ್ರ ಕಳಿಸುತ್ತದೆ. ಇದು ಪ್ರತಿಯೊಬ್ಬ ರಾಷ್ಟ್ರಪ್ರೇಮಿಯೂ ಗಂಭೀರವಾಗಿ ವಿಚಾರ ಮಾಡಬೇಕಾದ ಅಂಶ. ಕಚ್ಚಾವಸ್ತುವನ್ನು ರಫ್ತು ಮಾಡುವ ದೇಶವಾಗಿ ಉಳಿಯುವುದನ್ನು ನಾವು ಸಹಿಸಲಾರೆವು, ಅದರಿಂದ ನಮ್ಮ ಕೈಗಾರಿಕೆ, ಕುಶಲಕಲೆ ನಶಿಸಿಹೋಗುತ್ತವೆ. ಅಮೆರಿಕ, ಭಾರತ ತನ್ನ ಶೋಷಣೆಗೆ ಒಂದು ಪ್ರದೇಶವೆಂದು ಪರಿಗಣಿಸಬಾರದು, ಶಸ್ತ್ರರಹಿತ ವಾಗಿದ್ದರೂ ಯೋಗ್ಯವಾದ ಸ್ವತಂತ್ರ ರಾಷ್ಟ್ರದಂತೆಯೇ ಭಾವಿಸಿ, ತನಗೆ ಭಾರತ ಯಾವ ಮಾನ ಕೊಡಬೇಕೆಂದು ನಿರೀಕ್ಷಿಸೀತೊ ಅದೇ ಮಾನವನ್ನು ಭಾರತಕ್ಕೂ ಅಮೆರಿಕ ಕೊಡಬೇಕೆಂದು ನನ್ನ ನಿರೀಕ್ಷೆ.

**ಪತ್ರಕರ್ತ**—ಸ್ವಾಮಿ, ತಾವು ಏಸುವಿನ ಸಂದೇಶವನ್ನೇ ಪುನರುಚ್ಚರಿಸುತ್ತಿದೀರಿ.

**ಗಾಂಧೀಜೀ**—ಯಂತ್ರ-ತಂತ್ರಕೌಶಲದಲ್ಲಿ ನಾವು ಅಜ್ಞರು, ಆದರೆ ಏಸುವಿನ ಉಪದೇಶವನ್ನು ಒಪ್ಪಿ ಅದರಂತೆ ನಡೆಯಲು ಅನುವಾದಿರೆಂದರೆ ಎಲ್ಲ ಕೌಶಲವನ್ನೂ ಅಮೆರಿಕವೇ ಸರ್ವಮಾನ್ಯ ಮಾಡಿಕೊಂಡಿತೆಂದು ನಾನು ಆಪಾದಿಸುವ ಅವಕಾಶ ಬರಬಾರದು. ಆಗ ನೀವು ಎಂದೀರಿ: 'ತಂತ್ರ ಕೌಶಲದಲ್ಲಿ ಅಜ್ಞ ಸೋದರ ರಾಷ್ಟ್ರವೊಂದು ಇದು. ನಮ್ಮ ಕುಶಲತೆಯ ನೆರವನ್ನು ಇವರಿಗೆ ನೀಡೋಣ. ಭಯಂಕರ ಬೆಲೆಗೆ ಅಲ್ಲ, ಅದರ ಒಳಿತಿಗಾಗಿ, ಅಂತಲೇ ಯಾವ ಪ್ರತಿಫಲವೂ ಬೇಡದೆ ಕೊಡೋಣ'—ಎಂದು. ಇಲ್ಲಿ ನಿಮ್ಮ ಮಿಷನರಿಗಳನ್ನು ಕುರಿತು ಒಂದು ಮಾತು ಹೇಳುತ್ತೇನೆ. ಅವರನ್ನು ನೀವು ಇಲ್ಲಿಗೆ ಉಚಿತವಾಗಿಯೇ ಕಳುಹಿಸುತ್ತೀರಿ. ಅದೂ ಸಹ ಸಾಮ್ರಾಜ್ಯ ವಾದೀ ಶೋಷಣೆಗಾಗಿಯೇ. ಏಕೆಂದರೆ ಅವರು ನಮ್ಮನ್ನೂ ನಿಮ್ಮಂತೆಯೇ ಮಾಡಿಯಾರು, ನಿಮ್ಮ ಸಾಮಾನು ಹೆಚ್ಚು ಕೊಳ್ಳುವಂತೆ ಮಾಡಿಯಾರು.

ನಿಮ್ಮ ಕಾರುಗಳು, ಭೋಗಸಾಮಗ್ರಿಗಳಿಲ್ಲದೆ ನಡೆಯದು ಎಂಬಂತೆ ಮಾಡಬಹುದು. ಅಂತಲೇ ನೀವು ಇಲ್ಲಿಗೆ ಕಳುಹಿಸುವ ಈನಾಯಿ ಧರ್ಮ ಬೆರಿಕೆ ಜಾತಿಯದು. ಕ್ರಿಶ್ಚಿಯನರ ಜನಸಂಖ್ಯೆಯನ್ನು ಹೆಚ್ಚಿಸುವ ಉದ್ದೇಶ್ಯವಿಲ್ಲದೆ ನೀವು ನಿಮ್ಮ ಶಾಲೆಗಳು, ಕಾಲೇಜುಗಳು ಹಾಗೂ ಆಸ್ಪತ್ರೆಗಳನ್ನು ಸ್ಥಾಪಿಸುವಿರಾದರೆ ನಿಮ್ಮ ಔದಾರ್ಯ ಅಕಲಂಕಿತವಾದುದಾದೀತು.

"ಯಂತ್ರಕೌಶಲದ ವಿಷಯದಲ್ಲಿ ಟಾಟಾ ಮನೆತನ ಮಾಡುತ್ತಿರುವುದನ್ನು ನಾ ಎಸಗಲಾರೆ. ತಿಂಗಳಿಗೆ ೨೦ ಸಾವಿರ ರೂಪಾಯಿ ಕೊಟ್ಟು ಒಬ್ಬ ಅಮೆರಿಕನ್ ತಜ್ಞನನ್ನು ಕರೆಸುವುದು ಅವರಿಗೆ ಸಾಧ್ಯ. ಸಾಹಸವೃತ್ತಿಗೇನೋ ಅವರು ಸಂಕೇತ, ಆದರೆ ದರಿದ್ರ ಭಾರತದ ಪ್ರತಿನಿಧಿಗಳು ಅವರಲ್ಲ. ಭಾರತದ ಶೇಕಡಾ ೯೦ ಪಾಲಿನ ಜನಸಂಖ್ಯೆಯುಳ್ಳ ಏಳು ಲಕ್ಷ ಹಳ್ಳಿಗಳಿವೆ ಇಲ್ಲಿ. ಅಮೆರಿಕ ನಿಜವಾಗಿ ನೆರವಾಗಬಯಸುವುದಾದರೆ ತನ್ನ ಪ್ರತ್ಯುತ್ಪನ್ನಶಕ್ತಿಯನ್ನು ಈ ದಿಕ್ಕಿನಲ್ಲಿ ಹರಿಸಬೇಕು. ಅದಕ್ಕಾಗಿ ದುಡಿಯಬೇಕಾದರೆ ಅಗ್ರಗಾಮಿ ರಷ್ಟ್ರ ರಾಷ್ಟ್ರವಾಗಿರುವ ಗುಣವನ್ನು ಅಮೆರಿಕ ಕಳೆದುಕೊಳ್ಳಬೇಕಾದೀತು. ರಾಷ್ಟ್ರೀಯ ಯೋಜನೆಯ ಕುರಿತಾದ ನನ್ನ ಅಭಿಪ್ರಾಯಗಳು ಪ್ರಚಲಿತ ಅಭಿಪ್ರಾಯಗಳಿಗಿಂತ ವಿಭಿನ್ನ. ಅದು ಔದ್ಯೋಗೀಕರಣದ ಸೂತ್ರಗಳಂತೆ ನಡೆಯತಕ್ಕುದಲ್ಲ. ನಮ್ಮ ಹಳ್ಳಿಗಳಿಗೆ ಔದ್ಯೋಗೀಕರಣದ ಸೋಂಕು ಹತ್ತದಂತೆ ಇಡಬೇಕೆಂದು ನನ್ನ ಇಚ್ಛೆ. ಅಮೆರಿಕನರು ಎಸಗಿರುವ ಶೋಷಣೆಯಿಂದ ಶೋಷಿತ ರಾಷ್ಟ್ರಗಳದಾಗಲಿ, ಶೋಷಕ ರಾಷ್ಟ್ರದ್ದಾಗಲಿ ನೀತಿಘನತೆ ಏರಿಲ್ಲ. ತದ್ವಿರುದ್ಧ ಅವರ ಆಧ್ಯಾತ್ಮಿಕ ಪ್ರಗತಿಯಾತ್ರೆಗೆ ಅಡ್ಡಿಯಾಗಿದೆ, ಅಮೆರಿಕದ ನಿಜವಾದ ಆಧ್ಯಾತ್ಮಿಕ ಔದಾರ್ಯವನ್ನು ಸಾಯಬಡಿದಿದೆ. ಅಮೆರಿಕ ಅನುಸರಿಸುತ್ತಿರುವ ವಿಧಾನ ಭಾರತದಲ್ಲಿ ನಡೆಯಲಾರದು. ಟನ್ನುಗಟ್ಟಲೆ ಸಕ್ಕರೆ ಹಾಗೂ ಇತರ ಬೇಸಾಯದ ಉತ್ಪನ್ನಗಳ ವಿನಾಶದ ಮಾತು ಹೇಳುತ್ತಿದೇನೆ. ಇತರ ದೇಶಗಳಿಗೆ ಆ ಸಕ್ಕರೆ, ಗೋಧಿ ಕೊಡಬಹುದಾಗಿತ್ತು, ಇಲ್ಲವೆ ಅಮೆರಿಕದ ನಿರುದ್ಯೋಗಿಗಳಿಗೇ ಉಣಿಸಬಹುದಾಗಿತ್ತು."

**ಪತ್ರಕರ್ತ**—ಆದರೆ ನಮ್ಮ ಹಂದಿಗಳನ್ನು ನೀವೆಲ್ಲಿ ತೆಗೆದುಕೊಳ್ಳುತ್ತಿದ್ದಿರಿ?

**ಗಾಂಧೀಜೀ**—ಹೌದು, ಆದರೆ ಎಲ್ಲರೂ ನನ್ನಂತೆಯೇ ವಿಚಾರ ಮಾಡುವರೇ? ಔದ್ಯೋಗೀಕರಣ ಪಂಡಿತ ನೆಹರೂಗೆ ಬೇಕು, ಅದು ಸಮಾಜದ ಒಡೆತನಕ್ಕೆ ಒಳಪಟ್ಟರೆ ಬಂಡವಾಳವಾದದ ದೋಷಗಳಿಂದ ಅದು ಮುಕ್ತವಾಗುತ್ತದೆಯೆಂದು ಅವರ ನಂಬಿಕೆ. ಔದ್ಯೋಗೀಕರಣದಲ್ಲೇ ದೋಷಗಳು ಅಡಗಿವೆ, ಎಷ್ಟು ಸಮಾಜೀಕರಣವಾದರೂ ಅವು ಎಂದೂ ಹೋಗಲಾರವು, ಇದು ನನ್ನ ದೃಷ್ಟಿ.೧೧೯

## ಯಂತ್ರವಲ್ಲ, ಯಂತ್ರಭ್ರಾಂತಿ ಬೇಡ

**ರಾಮಚಂದ್ರನ್**—ಎಲ್ಲ ಯಂತ್ರಕ್ಕೂ ನೀವು ವಿರೋಧಿಯೇ?

**ಗಾಂಧೀಜೀ**—ಉಂಟೆ? ಹಾಗೆನ್ನಬಹುದೆ?—ಎಂದರು ಗಾಂಧೀಜೀ ಇಂಥ ಸರಳ ಪ್ರಶ್ನೆ ಕೇಳಿ. ನಮ್ಮ ಈ ಮೈಯೇ ಒಂದು ಕುಶಲವಾದ ಯಂತ್ರ ಅಲ್ಲವೆ? ರಾಟೆಯೇ ಒಂದು ಯಂತ್ರ. ಹಲ್ಲಿನ ಸಂದಿನೊಳಗೆ ಸೇರಿರುವ ಕಸ ತೆಗೆವ ಹುಲ್ಲುಕಡ್ಡಿಯೂ ಒಂದು ಯಂತ್ರ. **ಯಂತ್ರವನ್ನಲ್ಲ, ನಾನು ಬೇಡ ಎನ್ನುವುದು; ಯಂತ್ರ ಯಂತ್ರ ಎಂಬ ಭ್ರಾಂತಿಯನ್ನು.** ಶರೀರ ಶ್ರಮವನ್ನು ಕಡಿಮೆ ಮಾಡುವ ಯಂತ್ರ ಬೇಕೆಂಬ ಭ್ರಾಂತಿ ಈಗ ಬೆಳೆಯುತ್ತಿದೆ. 'ದುಡಿತ ಕಡಿಮೆ' ಆಗಿಯಾಗಿ, ಸಾವಿರಾರು ಜನ ಹಸಿವಿನಿಂದ ಸಾಯಲಾಗಿ ಬೀದಿಯಲ್ಲಿ ಬಿದ್ದಾರು. ಹತ್ತು ಜನಕ್ಕೆ ದುಡಿತ ಕಡಮೆ ಮಾಡುವ ಉದ್ದೇಶ್ಯವಲ್ಲ ನನ್ನದು; ಇಡೀ ಮಾನವಕೋಟಿಗೇ ಕಡಮೆಮಾಡ ಬಯಸುತ್ತೇನೆ. ಹತ್ತು ಜನರ ಕೈಯಲ್ಲಿ ಧನಸಂಗ್ರಹವಾಗಲೆಂದಲ್ಲ, ಎಲ್ಲರ ಕೈಯಲ್ಲೂ ಹಣ ಸೇರಲಿ ಎಂದು ನನ್ನ ಬಯಕೆ. ಕೋಟಿಗಟ್ಟಲೆ ಜನರ ಬೆನ್ನ ಮೇಲೆ ಒಂದು ಹಿಡಿ ಜನ ಸವಾರಿಮಾಡುವ ಹಾಗಾಗಿದೆ ಯಂತ್ರದಿಂದ. ಇದೆಲ್ಲದರ ಹಿಂದಿನ ಉದ್ದೇಶ್ಯ ದುಡಿತ ಕಡಮೆ ಮಾಡುವ ಔದಾರ್ಯವಲ್ಲ; ಲೋಭ. ಇದನ್ನು ನಾನು ಸಹಿಸಲಾರೆ ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ನಾನು ವಿರೋಧಿಸುತ್ತಿರುವುದು ಈ ಪರಿಯ ನಿರ್ಮಾಣವನ್ನು.

**ರಾಮಚಂದ್ರನ್**—ಹಾಗಾದರೆ ನೀವು ಯಂತ್ರವನ್ನೇ ಅಲ್ಲ ವಿರೋಧಿಸುತ್ತಿರುವುದು; ಈಗ ಬೆಳೆದುಹೋಗಿರುವ ಅದರ ದುರುಪಯೋಗವನ್ನು ಅಲ್ಲವೇ?

**ಗಾಂಧೀಜೀ**—ನಿಸ್ಸಂಶಯವಾಗಿ ಹೌದು ಎನ್ನುವೆ. ಒಂದು ಮಾತು ನೆನಪಿರಲಿ. ವಿಜ್ಞಾನದ ಸತ್ಯಸೂತ್ರಗಳು, ಸಂಶೋಧನೆಗಳು ಲೋಭದ ಸಾಧನಗಳಾಗಬಾರದು. ಮೊದಲು ಇದು ನಿಲ್ಲಬೇಕು. ಆಗ ಕೂಲಿಗಾರರಿಗೆ ಅತಿದುಡಿತ ತಪ್ಪೀತು; ಯಂತ್ರ ಅಡ್ಡಿಯಾಗುವ ಬದಲು ಅನುಕೂಲವಾದೀತು. ಯಂತ್ರವೆಂಬುದೆಲ್ಲ ಹಾಳಾಗಲಿ ಎಂಬುದಲ್ಲ ನನ್ನ ಗುರಿ, ಅದಕ್ಕೊಂದು ಪರಿಮಿತಿ ಇರಲಿ ಎಂಬುದು.

**ರಾಮಚಂದ್ರನ್** — ಈ ಮಾತನ್ನು ತರ್ಕಬದ್ಧವಾಗಿ ಬೆಳೆಸಿದರೆ 'ಬಲ'ದಿಂದ ನಡೆವ ಎಲ್ಲ ತೊಡಕಾದ ಯಂತ್ರವೂ ಹೋಗಲೆಂದೇ ತಾನೇ ಇದರ ಕೊನೆ ?

**ಗಾಂಧೀಜೀ**—ಹೋಗಬೇಕಾಗಿ ಬಂದರೆ ಹೋಗಲಿ. ಆದರೆ ಒಂದು ಮಾತು ಮಾತ್ರ ಸ್ಪಷ್ಟವಾಗಿ ತಿಳಿದುಕೋ. ನನಗೆ ಪರಮಪ್ರಧಾನ ಮಾನವ ಜೀವನ. ಯಂತ್ರ ಮನುಷ್ಯನ ಕೈಕಾಲು ನಶಿಸುವಂತೆ ಮಾಡತಕ್ಕದ್ದಲ್ಲ. ಕೆಲವೊಂದು ಬುದ್ಧಿವಂತಿಕೆಯ ಅಪೂರ್ವವಾದ ತೋರಿಸಿಯೇನು. ಬಟ್ಟೆ ಹೊಲಿವ ಸಿಂಗರ್ ಯಂತ್ರ ಇದೆಯಲ್ಲ. ಜಗತ್ತಿನಲ್ಲಿ ಕಂಡುಹಿಡಿದ ಅನೇಕ ವಸ್ತುಗಳಲ್ಲಿ ಇದರಷ್ಟು ಉಪಯುಕ್ತವಾದುದು ಕೆಲವೇ. ಆ ಯಂತ್ರದ್ದೊಂದು ರೋಮಾಂಚಕಾರಿ ಕತೆಯೇ ಇದೆ. ತನ್ನ ಹೆಂಡತಿ ಅತಿ ಪ್ರಯಾಸಪಟ್ಟು ಹೊಲೆಯುತ್ತಿದ್ದುದನ್ನು ನೋಡಿ ಸಿಂಗರ್‌ಗೆ ಬಹಳ ನೋವಾಯಿತು. ಆಕೆಯ ಮೇಲಿನ ಪ್ರೀತಿಗಾಗಿ ಹೊಲಿಗೆಯ ಯಂತ್ರವನ್ನು ಕಂಡುಹಿಡಿದ. ಅದರಿಂದ ಆಕೆ ಒಬ್ಬಳಿಗಲ್ಲ, ಆ ಯಂತ್ರವನ್ನು ಕೊಳ್ಳಬಲ್ಲವರಿಗೆಲ್ಲ ಅನಾವಶ್ಯಕ ದುಡಿತವನ್ನು ಕಡಿಮೆ ಮಾಡಿದ.

**ರಾಮಚಂದ್ರನ್**—ಈ ಯಂತ್ರವನ್ನು ಮಾಡಲು ಕಾರ್ಖಾನೆ ಬೇಡವೇ ಮತ್ತೆ ? ಅದಕ್ಕೆ ಪ್ರಕೃತಿಬಲದಿಂದ ನಡೆವ ಸಾದಾ ಯಂತ್ರವಾದರೂ ಬೇಕಲ್ಲವೇ ?

**ಗಾಂಧೀಜೀ** — ಹೌದು, ಖಂಡಿತ ಬೇಕು — ಎಂದರು ರಾಮಚಂದ್ರನ್‌ನ ವಿರೋಧ ದೃಷ್ಟಿಯತ್ತ ನಸುನಗುತ್ತ. ಆದರೆ ಅಂಥ ಕಾರ್ಖಾನೆಗಳು ರಾಷ್ಟ್ರದ ಆಡಳಿತಕ್ಕೆ ಒಳಪಟ್ಟು ನಡೆಯಲಿ ಎನ್ನುವಷ್ಟುಮಟ್ಟಿಗೆ ನಾನು

ಸಮಾಜವಾದಿ. ಒಳ್ಳೇ ಆದರ್ಶ ರೀತಿಯಲ್ಲಿ ಆಕರ್ಷಕವಾಗಿ ಅದನ್ನು ನಡೆಸಬೇಕು. ಅದರ ಮೂಲಸೂತ್ರ ಲಾಭದ ದುರಾಶೆಯಲ್ಲ, ಮಾನವಕಲ್ಯಾಣವಾಗಬೇಕು. ಲೋಭದ ಸ್ಥಳವನ್ನು ಪ್ರೇಮ ಪಡೆಯಬೇಕು. ಶ್ರಮಿಕರ ಪರಿಸ್ಥಿತಿಯಲ್ಲಿ ಬದಲಾವಣೆ ಆಗಬೇಕು. ನಾಗಾಲೋಟದ ಧನಸಂಗ್ರಹದ ಈ ಪಿತ್ತ ನಿಲ್ಲಬೇಕು. ಕೂಲಿಗಾರನಿಗೆ ಬಾಳುಗೂಲಿ ಸಿಗುವುದಷ್ಟೇ ಅಲ್ಲ, ಅವನ ದಿನದ ಕೆಲಸ ಅವನಿಗೆ ದಿನದಿನವೂ ಭಾರವಾಗಬಾರದು, ಬೇಸರವಾಗಬಾರದು. ಹೀಗೆ ನಡೆಸಿದರೆ ಕೂಲಿಗಾರನಿಗೂ, ರಾಷ್ಟ್ರಕ್ಕೂ, ಯಂತ್ರದ ಒಡೆಯನಿಗೂ ಎಲ್ಲರಿಗೂ ಯಂತ್ರ ಅನುಕೂಲಪ್ರದವಾಗಿದ್ದೀತು. ಈಗಿನ ಹುಚ್ಚು ರಭಸ ನಿಂತು ಕೂಲಿಗಾರರು ನಾನು ಹೇಳಿದಂತೆ ಆಕರ್ಷಕ, ಆದರ್ಶ ಪರಿಸ್ಥಿತಿಯಲ್ಲಿ ಕೆಲಸ ಮಾಡಿಯಾರು. ನನ್ನ ಮನಸ್ಸಿನಲ್ಲಿರುವ ಅಪವಾದಗಳಲ್ಲಿ ಇದೊಂದು. ಹೊಲಿಗೆ ಯಂತ್ರದ ಹಿನ್ನೆಲೆಯಲ್ಲಿ ಪ್ರೀತಿ ಇತ್ತು. ವ್ಯಕ್ತಿಯೇ ಪರಮಪ್ರಧಾನ ಲಕ್ಷ್ಯ. ವ್ಯಕ್ತಿಯ ದುಡಿತ ಕಡಮೆ ಮಾಡುವುದೇ ಉದ್ದೇಶ್ಯವಾಗಿರಬೇಕು, ಪ್ರಾಮಾಣಿಕ ಮಾನವೀಯ ಪರಿಗಣನೆಯೇ ಗುರಿಯಾಗಿರಬೇಕಲ್ಲದೆ ಲೋಭವಾಗಿರಬಾರದು. ಇಲ್ಲಿ ನೋಡು : ಸೊಟ್ಟಾದ ಕದಿರುಗಳನ್ನು ಸರಿಮಾಡುವ ಯಂತ್ರ ಬಂದರೆ ನನಗೆ ಸಂತೋಷವಾದೀತು. ಕಮ್ಮಾರರು ಕದಿರುಗಳನ್ನು ಮಾಡಲಿ. ಅವು ಹಸಗೆಟ್ಟಾಗ ಸರಿಮಾಡಿಕೊಳ್ಳುವ ಯಂತ್ರ ನೂಲುವವರೆಲ್ಲರಲ್ಲೂ ಇರಲಿ. ಹಾಗೆ, ದುರಾಶೆಯ ಬದಲು ಪ್ರೀತಿ ಬರಲಿ; ಆಮೇಲೆ ಎಲ್ಲವೂ ಸರಿಹೋಗುತ್ತದೆ.

**ರಾಮಚಂದ್ರನ್**—ಸಿಂಗರ್ ಯಂತ್ರ, ನಿಮ್ಮ ಕದಿರು ಮುಂತಾದ ಯಂತ್ರ ಇರಬೇಕು ಎನ್ನುತ್ತೀರಿ. ಈ ರೀತಿಯಾದರೆ ಇದಕ್ಕೆ ಮಿತಿ ಬೇಡವೇ? ಈ ಪಟ್ಟಿಗೆ ಕೊನೆಯೆಲ್ಲಿ?

**ಗಾಂಧೀಜೀ**—ಮನುಷ್ಯನ ವ್ಯಕ್ತಿತ್ವಕ್ಕೆ ಅಡ್ಡಿ ಬಂದರೆ ಯಂತ್ರ ಅಲ್ಲಿಗೇ ಕಡೆ. ಮನುಷ್ಯನಿಗೆ ನೆರವಾಗುವುದನ್ನು ಬಿಟ್ಟು ಅವನ ಸಂಗಡ ಕುಸ್ತಿಗೆ ನಿಂತರೆ ಯಂತ್ರಕ್ಕೆ ಅಲ್ಲೇ ಕೊನೆ. ಯಂತ್ರ ಮನುಷ್ಯನ ಕೈಕಾಲು ಮುರಿಯಬಾರದು.

**ರಾಮಚಂದ್ರನ್**—ನಾನೀಗ ವ್ಯಾವಹಾರಿಕ ವಿಷಯ ಯೋಚಿಸುತ್ತಿಲ್ಲ. ಆದರ್ಶ ದೃಷ್ಟಿಯಿಂದ ಸಕಲ ಯಂತ್ರವನ್ನೂ ನಿಷೇಧಿಸುವಿರಲ್ಲವೇ ನೀವು?

ಹೊಲಿಗೆ ಯಂತ್ರ ಇರಲಿ ಎಂದರೆ ಬೈಸಿಕಲ್, ಮೋಟಾರ್ ಕೂಡ ಇರಲಿ ಎನ್ನಬೇಕು ತಾನೆ ?

**ಗಾಂಧೀಜೀ**—ಇಲ್ಲ, ಹಾಗೆನ್ನಲಾರೆ. ಅವು ಮನುಷ್ಯನ ಪ್ರಾಥಮಿಕ ಅಗತ್ಯಗಳನ್ನು ಪೂರೈಸುವಂಥವಲ್ಲ. ವೇಗವಾಗಿ ದೂರ ದೂರ ಪ್ರಯಾಣ ಮಾಡುವ ಅಗತ್ಯವೇನಿದೆ ಮನುಷ್ಯನಿಗೆ ? ಆದರೆ ಸೂಜಿ ಹಾಗಲ್ಲ. ಬಾಳಿನಲ್ಲಿ ಸೂಜಿ ಅತ್ಯಗತ್ಯ. ಅದು ಇಲ್ಲದೆ ನಡೆಯದು. ಆದರ್ಶ ದೃಷ್ಟಿಯಿಂದಲೇನೋ ಸಕಲ ಯಂತ್ರನನ್ನೂ ಬೇಡವೆಂದೇನು ; ಮೋಕ್ಷಸಾಧನೆಗೆ ಅಡ್ಡಬಂದರೆ ಈ ಮೈಯನ್ನೇ ಬೇಡವೆಂದೇನು, ಸಂಪೂರ್ಣ ಮುಕ್ತಿಯನ್ನು ಬಯಸಿಯೇನು. ಈ ದೃಷ್ಟಿಯಿಂದ ಎಲ್ಲ ಯಂತ್ರವೂ ಹೊಲ್ಲ, ನಿಜ. ಆದರೆ ಮೈಯಿದ್ದಂತೆಯೇ ಯಂತ್ರ ; ಬೇಡವೆಂದರೂ ಅಂಟಿಕೊಂಡೇ ತೀರುತ್ತದೆ ; ಅನಿವಾರ್ಯ. ಆಗಲೇ ಹೇಳಿದೆನಲ್ಲ, ನಮ್ಮ ಮೈಯೇ ಒಂದು ಕುಶಲವಾದ ಹಸನಾದ ಯಂತ್ರ. ನಮ್ಮ ಮೈಯೇ ಆಗಲಿ ಆತ್ಮವಿಕಾಸಕ್ಕೆ ಅನುಕೂಲವಾಗಬೇಕು. ಆತ್ಮಗರುಡ ಅತ್ಯಂತ ಎತ್ತರಕ್ಕೆ ಹಾರಲು ಮೈ ಅಡ್ಡಿಯಾದರೆ, ಪ್ರತಿಕೂಲವಾದರೆ, ಅದು ತ್ಯಾಜ್ಯವೇ ಸರಿ.೧೨೦

## ಬೃಹತ್ ಪ್ರಮಾಣದ ಉತ್ಪಾದನೆ

**ಪ್ರಶ್ನೆ**—ಬೃಹತ್ ಪ್ರಮಾಣದ ಉತ್ಪಾದನೆಗೆ ನೀವು ವಿರೋಧಿಯೇ ?

**ಉತ್ತರ**—ನಾನೆಂದೂ ಹಾಗೆ ಹೇಳಲಿಲ್ಲ. ನನ್ನ ಬಗೆಗೆ ಹರಡಿರುವ ಕುರುಡುನಂಬಿಕೆಗಳಲ್ಲಿ ಇದೂ ಒಂದು. ಹಳ್ಳಿಗರೇ ಯಾವ ಕಷ್ಟವೂ ಇಲ್ಲದೆ ಉತ್ಪಾದಿಸಬಹುದಾದ ವಸ್ತುಗಳನ್ನು ಭಾರಿ ಪ್ರಮಾಣದಲ್ಲಿ ಉತ್ಪತ್ತಿಮಾಡುವುದಕ್ಕೇ ನಾನು ವಿರುದ್ಧವಾಗಿರುವುದು.

**ಪ್ರಶ್ನೆ**—ಕುಟೀರ ಉದ್ಯೋಗಗಳನ್ನೂ ಭಾರಿ ಕಾರ್ಖಾನೆಗಳನ್ನೂ ಸಮರಸಗೊಳಿಸುವುದು ಸಾಧ್ಯವೇ ?

**ಉತ್ತರ**—ಸಾಧ್ಯವಿದೆ, ಹಳ್ಳಿಗರಿಗೆ ಸಹಾಯಕವಾಗುವಂತೆ ಯೋಜಿಸಿದರೆ ರಾಷ್ಟ್ರಕ್ಕೆ ಬೇಕಾದ ಪ್ರಧಾನ ಉದ್ಯೋಗಗಳು ಕೇಂದ್ರೀಕೃತವಿರಬಹುದು. ಹಳ್ಳಿಗರು ಸ್ವಲ್ಪ ಸಂಘಟನೆ ಮಾಡಿಕೊಂಡು ಕೈಗೊಳ್ಳಬಹುದಾದ ಯಾವುದೇ

ಉದ್ಯೋಗವನ್ನೂ ಪ್ರಧಾನ ಉದ್ಯೋಗವೆಂದು ಆರಿಸಲಾರೆ ನಾನು. ಉದಾಹರಣೆಗೆ ಕೈಕಾಗದದ ಉದ್ಯಮದ ರಹಸ್ಯ ನನಗೆ ತಿಳಿದಿರಲಿಲ್ಲ. ಈಗ ಪ್ರತಿಯೊಂದು ಹಳ್ಳಿಯೂ ತನಗೆ ಬೇಕಾಗುವ ಕಾಗದವನ್ನು ತಾನೇ ತಯಾರಿಸಿಕೊಳ್ಳಬಹುದೆಂದು ನನಗೆ ನಂಬಿಕೆಯಾಗಿದೆ. ವೃತ್ತಪತ್ರಿಕೆಗಳಿಗೆ ಸಾಕಾಗುವಷ್ಟು ಆಗದಿರಬಹುದು. ರಾಷ್ಟ್ರ, ಪ್ರಭುತ್ವ ಕಾಗದದ ತಯಾರಿಕೆಯನ್ನು ನಿಯಂತ್ರಣಗೊಳಿಸಿ ಕೇಂದ್ರೀಕರಿಸಿತೆನ್ನಿ. ಆಗ ಅದು ಹಳ್ಳಿಗಳು ತಯಾರಿಸಬಹುದಾದ ಕಾಗದಕ್ಕೆಲ್ಲ ಸಂರಕ್ಷಣೆ ಕೊಡಬೇಕು.

**ಪ್ರಶ್ನೆ**—ಹಳ್ಳಿಗಳನ್ನು ಸಂರಕ್ಷಿಸುವುದು ಎಂದರೆ ಏನು ?

**ಉತ್ತರ**—ಹಳ್ಳಿಗಳನ್ನು ನಗರಗಳ ಆಕ್ರಮಣದ, ದಾಳಿಯ ವಿರುದ್ಧ ರಕ್ಷಿಸುವುದು ಎಂದು. ಹಿಂದೆ ನಗರಗಳು ಹಳ್ಳಿಗಳನ್ನು ಅವಲಂಬಿಸಿದ್ದುವು. ಈಗ ಅದು ತಿರುವುಮುರುವು. ಪರಸ್ಪರಾವಲಂಬನೆ ಇಲ್ಲ ಈಗ. ಹಳ್ಳಿಗಳ ಸುಲಿಗೆ ನಡೆದಿದೆ. ಸಂಪತ್ತಿನ ಹೊಳೆ ಹಳ್ಳಿಗಳಿಂದ ನಗರಗಳಿಗೆ ಹರಿಯುತ್ತಿದೆ.

**ಪ್ರಶ್ನೆ**—ನಗರಗಳಲ್ಲಿ ಉತ್ಪತ್ತಿಯಾಗುವ ಎಷ್ಟೋ ಪದಾರ್ಥಗಳು ಹಳ್ಳಿಗಳಿಗೆ ಬೇಡವೇ ?

**ಉತ್ತರ**—ನನಗೆ ಆಶ್ಚರ್ಯವಾಗುತ್ತದೆ. ನನ್ನ ಯೋಜನೆಯಲ್ಲಿ ಹಳ್ಳಿಗಳಲ್ಲೇ ನಗರಗಳಷ್ಟೇ ಚೆನ್ನಾಗಿ ತಯಾರಾಗಬಹುದಾದ ಪದಾರ್ಥಗಳನ್ನು ನಗರಗಳಲ್ಲಿ ತಯಾರಿಸಲು ನಾವು ಬಿಡೆವು. ಹಳ್ಳಿಗಳಲ್ಲಿ ತಯಾರಾಗುವ ವಸ್ತುಗಳ ಮಾರುಕಟ್ಟೆಗಳಾಗುವುದೇ ನಗರಗಳ ನ್ಯಾಯುವಾದ ಪಾತ್ರ, ಕೆಲಸ.

**ಪ್ರಶ್ನೆ**—ಗಿರಣಿ ಅರಿವೆಯ ಉದ್ಯಮವನ್ನೂ ಕೈಮಗ್ಗದ ಉದ್ಯಮವನ್ನೂ ಸಮರಸಗೊಳಿಸಬಹುದೇ ?

**ಉತ್ತರ**—ನನಗೆ ತಿಳಿದಮಟ್ಟಿಗೆ ಗಟ್ಟಿಯಾದ "ಇಲ್ಲ" ಎಂಬುದೇ ಇದಕ್ಕೆ ನನ್ನ ಉತ್ತರ. ನಮಗೆ ಬೇಕಾದ ಎಲ್ಲ ಬಟ್ಟೆಯನ್ನೂ ನಾವು ಹಳ್ಳಿಗಳಲ್ಲೇ ತಯಾರಿಸಬಲ್ಲೆವು.

**ಪ್ರಶ್ನೆ**—ಗಿರಣಿಗಳ ಸಂಖ್ಯೆ ಹೆಚ್ಚುತ್ತಿದೆಯಲ್ಲ ?

**ಉತ್ತರ**—ಅದೊಂದು ದುರ್ದೈವ.೧೨೧

" ಗ್ರಾಮ ಉದ್ಯೋಗಗಳನ್ನು, ಕುಶಲ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸುವುದೇನೋ ಸರಿ " ಎಂದು ಹೇಳಿದರು ತರುಣ ಮಿತ್ರರೊಬ್ಬರು, ತನ್ನ ಇದಿರಾಳಿಯ ಶ್ರದ್ಧೆಯ ಔಚಿತ್ಯಕ್ಕಿಂತ ಹೆಚ್ಚಾಗಿ ಅವರ ನಿಷ್ಠೆಗೆ ಭಾರಿ ರಿಯಾಯಿತಿ ತೋರುವ ಧೋರಣೆಯಿಂದ. " ನಮ್ಮ ಹಳ್ಳಿಗರಿಗೆ ತುಂಬ ಬೇಕಿರುವ ಜೀವನಸೌಂದರ್ಯವನ್ನು ಅದು ಕೊಟ್ಟೀತು. ಆದರೆ ಶ್ರೀ ಜೀನ್ಸ್ ಹೇಳುವಂತೆ ಈ " ನಿತ್ಯವ್ಯಾಪಕ ವಿಶ್ವ "ಕ್ಕೆ ಬೃಹತ್‌ಪ್ರಮಾಣದ ಉತ್ಪಾದನ ವ್ಯವಸ್ಥೆಯಿಲ್ಲದೆ ಸಾಧ್ಯವೇ ಎಂದು ನನಗೆ ಶಂಕೆ. ಇಲ್ಲ, ಸ್ವಾಮಿ, ' ಬೃಹತ್ ಉತ್ಪಾದನೆ ', ಅದರೊಟ್ಟಿಗೆ ಜನನಿಯಂತ್ರಣ — ಇದೇ ನಮ್ಮ ದುಡಿಮೆಗಾರ ಜನಕೋಟಿಗೆ ಆಶಾಕಿರಣ. ಇದರ ಬದಲು ಗಾಂಧೀಜೀ ಸೂಚಿಸುವುದೇನು ? "

ಈ ಪ್ರಶ್ನೆ ಎರಡನೆಯ ಚಕ್ರಗೋಷ್ಠಿಯ ಸಮಯದಲ್ಲಿ ಲಂಡನ್ನಿನಲ್ಲಿ ಅಮೆರಿಕನ್ ಪತ್ರಕರ್ತನೊಬ್ಬನ ಸಂಗಡ ಯಂತ್ರದ ವಿಷಯವಾಗಿ ಗಾಂಧೀಜೀ ನಡೆಸಿದ ಸಂಭಾಷಣೆಯ ನೆನಪು ಮಾಡಿತು ನನಗೆ. ಗಾಂಧೀಜೀಯ ಮಾತುಗಳನ್ನೇ ಪುನರುಚ್ಚರಿಸುತ್ತಾ ನಾ ಹೇಳಿದೆ: " ಜನಕೋಟಿಯಿಂದ ಉತ್ಪಾದನೆ." ಗಾಂಧೀಜೀ ಇದೇ ಮಾತುಗಳನ್ನೇ ಬಳಸಿದ್ದರು.

ಈ ಭೇಟಿಗೆ ಒಂದು ವರ್ಷ ಮುನ್ನ ಈ ಅಮೆರಿಕನ್ ಗೆಳೆಯರು ಅಮೆರಿಕದಲ್ಲಿ ಶ್ರೀ ಫೋರ್ಡ್ ಅವರನ್ನು ಕಂಡಿದ್ದರು. ಅವರೊಡನೆ ನಡೆಸಿದ ಸಂಭಾಷಣೆಯಲ್ಲಿ ಇತರ ಸಂಗತಿಗಳ ಜತೆಗೆ ಬೃಹತ್ ಉತ್ಪಾದನ ವ್ಯವಸ್ಥೆಗೆ ಯೂರೋಪಿನ ಸ್ಥಿತಿಗತಿಗಳು ಅನುಕೂಲಕರವಿಲ್ಲ ಎಂಬ ತಮ್ಮ ಮಾತನ್ನೂ ಸೇರಿಸಿದ್ದರು. ಆ ಪರಿಸ್ಥಿತಿ ಬೇಗ ಕಳೆದು ಅಗ್ಗದ ವಸ್ತುಗಳ ಬೇಡಿಕೆ ಬೇಗ ಹುಟ್ಟುವುದು ಎಂಬುದಾಗಿ ಶ್ರೀ ಫೋರ್ಡ್ ಹೇಳಿದ್ದರಂತೆ. " ಅದು ಜನರ ಜೀವನಮಟ್ಟವನ್ನು ಎತ್ತರಿಸುವ ಪ್ರಶ್ನೆ "—ಎಂದು ಕೊನೆಯಲ್ಲಿ ಹೇಳಿದರಂತೆ ಫೋರ್ಡ್. " ಗಾಂಧೀಜೀ, ಬೃಹತ್ ಉತ್ಪಾದನೆ ಜನತೆಯ ಜೀವನಮಟ್ಟವನ್ನು ಎತ್ತರಿಸುವುದೆಂದು ನೀವು ನಂಬುವಿರಾ ? "—ಎಂದು ಕೇಳಿದರು ಆ ಮಿತ್ರರು.

" ನನಗೆ ಅದರಲ್ಲಿ ನಂಬಿಕೆಯೇ ಇಲ್ಲ " ಎಂದು ಉತ್ತರಿಸಿದ್ದರು ಗಾಂಧೀಜೀ. " ಶ್ರೀ ಫೋರ್ಡರ ತರ್ಕದ ಹಿಂಬದಿಯಲ್ಲಿ ಭಯಂಕರ ಭ್ರಮೆಯೊಂದಿದೆ. ಅಷ್ಟೇ ಬೃಹತ್ತರ ವಿತರಣಕ್ರಿಯೆಯೂ ಉತ್ಪಾದನೆಯೊಂದಿಗೇ ಏಕಕಾಲದಲ್ಲೇ

ಆಗದೆ ಹೋದರೆ ಉತ್ಪಾದನೆ ಭಾರಿ ವಿಪ್ಲವದುರಂತವಾಗಿ ಪರಿಣಮಿಸೀತು. ಫೋರ್ಡರ ಕಾರುಗಳನ್ನೇ ತೆಗೆದುಕೊಳ್ಳಿ. ಬೇಗಲೋ ತಡವಾಗಿಯೋ ಪರ್ಯಾಪ್ತಸ್ಥಿತಿ ಬಂದೇ ತೀರುವುದು. ಆ ಮಟ್ಟದಿಂದಾಚೆ ಕಾರುಗಳ ಉತ್ಪಾದನೆ ನಡೆಸುವುದು ಅಸಾಧ್ಯವಾದೀತು. ಆಗೇನು ಗತಿ ?

"ಬೃಹತ್ ಉತ್ಪಾದನ ವ್ಯವಸ್ಥೆಗೆ ಬಳಕೆಗಾರನ ಆವಶ್ಯಕತೆಯ ಪರಿವೆಯೇ ಇಲ್ಲ. ಬೃಹತ್ ಉತ್ಪಾದನೆಯೇ ಸ್ವತಂತ್ರ ಗುಣವಾಗಿದ್ದಲ್ಲಿ ಅದು ಅನಂತವಾಗಿ ಹೆಚ್ಚುವ ಸಾಮರ್ಥ್ಯ ಪಡೆದಿರಬೇಕು. ಆದರೆ ಬೃಹತ್ ಉತ್ಪಾದನೆಯಲ್ಲಿ ಅದರ ಪರಿಮಿತಿಗಳು ಅಡಕವಾಗಿರುವುದನ್ನು ನಿರ್ದಿಷ್ಟವಾಗಿ ತೋರಿಸಬಹುದು. ಎಲ್ಲ ದೇಶಗಳೂ ಬೃಹತ್ ಉತ್ಪಾದನೆಯ ತಂತ್ರವನ್ನೇ ಅಳವಡಿಸಿಕೊಂಡರೆ ಅವುಗಳ ಸರಕುಗಳಿಗೆ ಸಾಕಷ್ಟು ದೊಡ್ಡ ಪೇಟೆಯೇ ಇರದು. ಆಗ ಬೃಹತ್ ಉತ್ಪಾದನೆ ನಿಲ್ಲಲೇಬೇಕಲ್ಲ."

"ಈ ಪರ್ಯಾಪ್ತ ಪರಿಸ್ಥಿತಿ ಪಶ್ಚಿಮದ ಜಗತ್ತಿನಲ್ಲಿ ಈಗಾಗಲೇ ಬಂದಿರುವುದು ನಿಮಗೆ ಅರಿವಾಗಿದೆಯೋ ಇಲ್ಲವೋ" ಎಂದರು ಪ್ರಶ್ನಕರು. "ಒಳ್ಳೆಯ ವಸ್ತುಗಳು ಎಂದೂ ಅಪಾರವಾಗಿ ಬರಲಾರವು ಎನ್ನುತ್ತಾರೆ ಫೋರ್ಡ್. ಜಗತ್ತಿನ ಅಗತ್ಯ ದಿನದಿನವೂ ಸತತ ಏರುತ್ತಲೇ ಇದೆ. ಆದಕಾರಣ ಯಾವುದೋ ಒಂದು ವಿಶಿಷ್ಟ ವಸ್ತುವಿಗೆ ಪರ್ಯಾಪ್ತಸ್ಥಿತಿ ಬಂದಿರಬಹುದು ಪೇಟೆಯಲ್ಲಿ, ಸಾರ್ವತ್ರಿಕ ಪರ್ಯಾಪ್ತಸ್ಥಿತಿ ಎಂದೂ ಬಾರದು ಎಂದು ಅವರ ಮತ."

"ಹೆಚ್ಚು ವಾದಮಾಡಲೇಕೆ? ಬೃಹತ್ ಉತ್ಪಾದನೆಯ ಹುಚ್ಚೇ ಇಂದಿನ ಜಗತ್ತಿನ ಸಂಕಟಸ್ಥಿತಿಗೆ ಕಾರಣ. ಯಂತ್ರಗಳು ಮಾನವಕುಲದ ಎಲ್ಲ ಬೇಡಿಕೆಗಳನ್ನೂ ಪೂರೈಸಬಲ್ಲವೆಂದೇ ಇಟ್ಟುಕೊಳ್ಳೋಣ. ಆಗಲೂ ಉತ್ಪಾದನೆ ಕೆಲವೇ ಸ್ಥಳಗಳಲ್ಲಿ ಕೇಂದ್ರೀಕೃತವಾಗಿದ್ದೀತು. ಆಗ ಹಂಚಿಕೆಯನ್ನು ನಿಯಮನಗೊಳಿಸಲು ಬಳಸಿ ಬಳಸಿ ಹೋಗಬೇಕಾದೀತು; ಅದರ ಬದಲು ಉತ್ಪಾದನೆ, ವಿತರಣ ಎರಡೂ ವಸ್ತುವಿನ ಅಗತ್ಯವಿರುವೆಡೆ, ಒಂದೇ ಕಡೆ ಆದರೆ ಅವುಗಳ ನಿಯಮನ ತನ್ನತಾನೇ ಆದೀತು, ಮೋಸಕ್ಕೆ ಅವಕಾಶ ಕಡಿಮೆ, ಸಟ್ಟಾಬಾಜಿಗಂತೂ ಎಡೆಯೇ ಇರದು"—ಎಂದರು ಉತ್ತರವಾಗಿ ಗಾಂಧೀಜೀ.

ಕಲ್ಲಿದ್ದಲನ್ನೂ ಹಬೆಯನ್ನೂ ಬಳಸುವ ಬದಲು ಮೂಲೆಮೂಲೆಗೂ ತಂತಿಗಳ ಮೂಲಕ ವಿದ್ಯುತ್ತನ್ನು ಪೂರೈಸಿ ಉದ್ಯೋಗಗಳನ್ನು ವಿಕೇಂದ್ರೀಕರಿಸುವ ಫೋರ್ಡರ ನೆಚ್ಚಿನ ಯೋಜನೆಯನ್ನು ಅಮೆರಿಕದ ಗೆಳೆಯರು ಉಲ್ಲೇಖಿಸಿದರು. ಅದೂ ಒಂದು ಸಾಧ್ಯವಾದ ಪರಿಹಾರವೆಂದು ಹೇಳಿ ನೂರಾರು, ಸಾವಿರಾರು ಸಣ್ಣ ಸಣ್ಣ, ಚೊಕ್ಕವಾದ, ಹೊಗೆಯಿಲ್ಲದ, ಅಲ್ಲಲ್ಲಿ ಹಳ್ಳಿಯ ಜನಸಮುದಾಯ ನಡೆಸುವ ಅನೇಕ ಕಾರ್ಖಾನೆಗಳಿಂದ ಕೂಡಿದ ಹಳ್ಳಿಗಳ ಚಿತ್ರವನ್ನು ಅವರು ಚಿತ್ರಿಸಿದರು. "ಇದೆಲ್ಲ ಸಾಧ್ಯವೆಂದೇ ಭಾವಿಸೋಣ. ಇವೆಲ್ಲ ಎಷ್ಟರಮಟ್ಟಿಗೆ ನಿಮ್ಮ ಆಕ್ಷೇಪವನ್ನು ಎದುರಿಸಿಯಾವು ?" ಎಂದು ಕೊನೆಯದಾಗಿ ಕೇಳಿದರು. "ನನ್ನ ಆಕ್ಷೇಪವನ್ನು ಇವು ಎದುರಿಸಲೇ ಆರವು. ಏಕೆಂದರೆ ಅಸಂಖ್ಯ ಸ್ಥಳಗಳಲ್ಲೇನೋ ನೀವು ಉತ್ಪಾದನೆ ನಡೆಸುತ್ತಿರುತ್ತೀರಿ. ಆದರೆ ಅವಕ್ಕೆಲ್ಲ ವಿದ್ಯುಚ್ಛಕ್ತಿ ಒಂದು ವಿಶಿಷ್ಟ ಕೇಂದ್ರದಿಂದ ಬಂದೀತು. ಒಂದೇ ಒಂದು ಮಾನವಕೃತ ವ್ಯವಸ್ಥೆಯ ಕೈಲಿ ಅಷ್ಟೆಲ್ಲ ಅಪಾರ ಶಕ್ತಿಯೇ? ಆ ಕಲ್ಪನೆಯೇ ನನಗೆ ಭೀತಿಕಾರಕ. ಪರಿಣಾಮವೋ, ಬೆಳಕಿಗೆ, ನೀರಿಗೆ, ಗಾಳಿಗೂ, ಮತ್ತಿತರ ವಸ್ತುಗಳಿಗೂ ನಾನು ಆ ಶಕ್ತಿಗೆ ಅಧೀನ, ಅಂಥ ವ್ಯವಸ್ಥೆಯಲ್ಲಿ. ಇದು ತೀರಾ ಭಯಂಕರ" ಎಂದು ಮಾರುತ್ತರ ಕೊಟ್ಟರು ಗಾಂಧೀಜೀ.

ಈ ವಾದ ಗೆಳೆಯರಿಗೆ ತುಂಬ ಹಿಡಿಸಿತು. "ಗಾಂಧೀಯವರೇ, ನೀವು ಲಂಡನ್ನಿಗೆ ಬಂದುದು ಅತ್ಯಂತ ಸಕಾಲಿಕ ಎನಿಸುತ್ತದೆ ನನಗೆ. ರಾಜಕೀಯ ಪ್ರಶ್ನೆ ಹಾಗಿರಲಿ. ಪಶ್ಚಿಮದ ಜಗತ್ತಿಗೆ ಯಂತ್ರಗಾರಿಕೆಯ ಬಗೆಗೇ ಆಶಾಭಂಗವಾಗಿದೆ, ಅದರಲ್ಲೂ ವಿಶೇಷವಾಗಿ ಜರ್ಮನಿಯಲ್ಲಿ, ಅಮೆರಿಕದಲ್ಲಿ ನಾವು ನಿರ್ಮಿಸಿರುವ ಬೃಹತ್ ಉತ್ಪಾದನೆಯ ವ್ಯವಸ್ಥೆಯ ವಿಷಯದಲ್ಲಿ. ಅವುಗಳ ಬೆಲೆ ಎಷ್ಟೆಂಬುದೇ ನಮಗೆ ಸಂದೇಹ. ನಾವು ಮಿತಿಮೀರಿ ಮುಂಬರಿದೆವಲ್ಲವೇ ಎಂದು ಜನ ತಮ್ಮನ್ನು ತಾವೇ ಚಕಿತರಾಗಿ ಕೇಳಿಕೊಳ್ಳುತ್ತಿದಾರೆ. ಈ ಅತಿ ಯಂತ್ರಗಾರಿಕೆಯಿಂದ ಹುಟ್ಟಿರುವ ಸಮಸ್ಯೆಯನ್ನು ಬಗೆಹರಿಸಲು ಯೂರೋಪ್ ಹಾಗೂ ಅಮೆರಿಕ ಏನು ಮಾಡಬೇಕೆಂದು ನಿಮಗೇನಾದರೂ ಕಲ್ಪನೆ ಇದೆಯೇ ?

"ನೋಡಿ, ಈ ರಾಷ್ಟ್ರಗಳು ಜಗತ್ತಿನ ದುರ್ಬಲರೆನಿಸಿಕೊಂಡ, ಅಸಂಘಟಿತ ಜನಾಂಗಗಳನ್ನು ಶೋಷಿಸಲು ಸಮರ್ಥವಾಗಿವೆ. ಆ ಜನಾಂಗಗಳಿಗೆ

ಈ ಸಾಮಾನ್ಯ ಪ್ರಜ್ಞೆ ಉಂಟಾಗಿ, ನಾವು ಇನ್ನು ಶೋಷಣೆಗೆ ತುತ್ತಾಗೆವು ಎಂದು ನಿಶ್ಚಯಿಸಿಬಿಟ್ಟರೆ ತಾವು ಒದಗಿಸಿಕೊಳ್ಳಬಹುದಾದ ವಸ್ತುಗಳಿಂದಲೇ ಅವರು ತೃಪ್ತಿಪಟ್ಟಾರು. ಆಗ ಮುಖ್ಯ ಆವಶ್ಯಕತೆಗಳ ವಿಷಯದಲ್ಲಂತೂ ಬೃಹತ್ ಉತ್ಪಾದನವ್ಯವಸ್ಥೆ ಮಾಯವಾದೀತು"—ಎಂದರು ಗಾಂಧೀಜೀ.

"ವಿಶ್ವವ್ಯವಸ್ಥೆಯಾಗಿಯೇ?

"ಹೌದು."

"ಅವರ ಆವಶ್ಯಕತೆಗಳು ಹೆಚ್ಚಿದಂತೆಲ್ಲ ಈ ಜನಾಂಗಗಳಿಗೂ ಹೆಚ್ಚು ಹೆಚ್ಚು ವಸ್ತುಗಳು ಬೇಕಾಗವೇ?"

"ಆಗ ತಮ್ಮ ಉತ್ಪಾದನೆಯನ್ನು ತಾವೇ ಮಾಡಿಕೊಂಡಾರು ಅವರು. ಹಾಗಾದಾಗ ಇಂದು ಪಶ್ಚಿಮ ರಾಷ್ಟ್ರಗಳಲ್ಲಿ ಪ್ರಚಲಿತವಿರುವ ಅರ್ಥದಲ್ಲಿ ಬೃಹತ್ಪ್ರಮಾಣದ ಉತ್ಪಾದನೆ ನಿಂತುಹೋದೀತು."

"ಅದು ಸ್ಥಳೀಯ(ಸ್ಥಾನಿಕ)ವಾದೀತೆನ್ನುವಿರಾ?"

"ಉತ್ಪಾದನೆ–ಉಪಯೋಗಗಳೆರಡೂ ಒಂದೇ ಕಡೆ, ಸ್ಥಳದಲ್ಲೇ ಆದರೆ ಉತ್ಪಾದನೆಯ ವೇಗವನ್ನು ಅನಂತವಾಗಿ, ಏನೇ ಆದರೂ ಹೆಚ್ಚಿಸುವ ಸೆಳವು ಮಾಯವಾದೀತು. ನಮ್ಮ ಇಂದಿನ ಅರ್ಥವ್ಯವಸ್ಥೆಯಿಂದಾಗಿರುವ ಅಪಾರ ತೊಡಕುಗಳೂ ಸಮಸ್ಯೆಗಳೂ ಕೊನೆಗಂಡಾವು. ಉದಾಹರಣೆಯೊಂದನ್ನೇ ತೆಗೆದುಕೊಳ್ಳಿ. ಇಂಗ್ಲೆಂಡ್ ಇಂದು ಇಡೀ ಜಗತ್ತಿನ ಅರಿವೆಯ ಅಂಗಡಿ. ಆದುದರಿಂದ ತನ್ನ ಮಾರುಕಟ್ಟೆಗಾಗಿ ಇಡೀ ಜಗತ್ತನ್ನೇ ತನ್ನ ಬಂಧನದಲ್ಲಿಟ್ಟು ಕೊಳ್ಳಬೇಕು. ನಾವು ಯೋಚಿಸಿರುವ ಬದಲಾವಣೆಯಂತೆ ಅದು ತನ್ನ ನಾಲ್ಕೂವರೆ ಕೋಟಿ ಜನರ ಆವಶ್ಯಕತೆಗಳ ಮಟ್ಟಿಗೆ ಮಾತ್ರ ತನ್ನ ಉತ್ಪಾದನೆಯನ್ನು ಮಿತಿಗೊಳಿಸಿಕೊಳ್ಳಬೇಕಾದೀತು. ಆ ಅಗತ್ಯ ಪೂರೈಕೆಯಾದ ಬಳಿಕ ಹೆಚ್ಚಿನ ಉತ್ಪಾದನೆ ನಿಂತೀತು. ಜನಕ್ಕೆ ಅಗತ್ಯವಿರಲಿ ಬಿಡಲಿ ಅವರನ್ನು ಬಡತನಕ್ಕೆ ದೂಡಿಯೂ ಬಂಗಾರ ತರಲೆಂದು ಅದನ್ನು ಮುಂದುವರಿಸುವುದಿಲ್ಲ. ಇಂದು ಅಮೆರಿಕದಲ್ಲಿರುವಂತೆ ಕೆಲವರ ಕೈಲಿ ಅಪಾರ ಸಂಗ್ರಹ, ಉಳಿದವರಿಗೆಲ್ಲ ಸಮೃದ್ಧಿಯ ನಡುವೆಯೂ ಅಭಾವದ ಅಸ್ವಾಭಾವಿಕ ಸ್ಥಿತಿ ಇರದು. ಎಂಥೆಂಥದೋ ಥಳುಕಿನ ವಸ್ತುಗಳನ್ನು, ಅಥವಾ ತನ್ನ ಹಕ್ಕಾದ ಅಸಮಾನ ಕೌಶಲವನ್ನು ಜಗತ್ತಿಗೆಲ್ಲ ಮಾರಿ ಅಮೆರಿಕ ಇಂದು ಜಗತ್ತಿನಲ್ಲಿ ಬಲವಾಗಿ

ಮೆರೆಯುತ್ತಿದೆ. ಬೃಹತ್ ಉತ್ಪಾದನೆಯ ಪರಾಕಾಷ್ಠೆಯನ್ನು ಅದು ಮುಟ್ಟಿದೆ. ಆದರೂ ನಿರುದ್ಯೋಗವನ್ನೂ ಬರವನ್ನೂ ಹೋಗಲಾಡಿಸಲಾಗಿಲ್ಲ ಅದಕ್ಕೆ. ಕೆಲವರು ಅತ್ಯಪಾರವಾಗಿ ಶ್ರೀಮಂತರಾಗಿದ್ದರೂ ಸಾವಿರಾರು ಮಂದಿ, ಬಹುಶಃ ಲಕ್ಷಾಂತರ ಜನ ಅಮೆರಿಕದಲ್ಲಿ ಇನ್ನೂ ಗೋಳಿನ ಬಾಳನ್ನೇ ನೂಕುತ್ತಿದಾರೆ. ಈ ಬೃಹತ್ ಉತ್ಪಾದನೆಯಿಂದ ಇಡೀ ಅಮೆರಿಕನ್ ರಾಷ್ಟ್ರಕ್ಕೆ ಲಾಭವಾಗಿಲ್ಲ."

"ದೋಷ ವಿತರಣಪದ್ಧತಿಯದು"—ಎಂದರು ಆ ಪತ್ರಕರ್ತ ಮಿತ್ರ. "ನಮ್ಮ ಉತ್ಪಾದನವ್ಯವಸ್ಥೆ ಪರಿಪೂರ್ಣತೆಯ ಉನ್ನತ ಮಟ್ಟವನ್ನೇರಿದ್ದರೂ ನಮ್ಮ ವಿತರಣಪದ್ಧತಿ ಇನ್ನೂ ದೋಷಯುಕ್ತವಾಗಿದೆಯೆಂದೇ ಇದರ ಅರ್ಥ. ವಿತರಣ ಸಮವಾಗಿ ಆದರೆ ಬೃಹತ್ ಉತ್ಪಾದನೆಯ ದೋಷ ನಿವಾರಣೆ ಆಗದೇ?"

"ಇಲ್ಲ" ಎಂದರು ಗಾಂಧೀಜೀ: "ಈ ಪದ್ಧತಿಯಲ್ಲೇ ಇದೆ ದೋಷ. ಉತ್ಪಾದನೆ ಸ್ಥಾನಿಕವಾದಾಗಲೇ ವಿತರಣ ಸಮವಾಗಿ ಆದೀತು; ಎಂದರೆ, ಉತ್ಪನ್ನ-ವಿತರಣಗಳೆರಡೂ ಏಕಕಾಲದಲ್ಲೇ ಆದರೆ ಮಾತ್ರವೇ. ನಿಮ್ಮ ಸರಕುಗಳನ್ನು ಮಾರಲು ನೀವು ಪ್ರಪಂಚದ ಇತರ ಮಾರುಕಟ್ಟೆಗಳನ್ನು ಹುಡುಕುತ್ತ ಹೋದಂತೆಲ್ಲ ವಿತರಣ ಸಮಗೊಳ್ಳುವುದೇ ಇಲ್ಲ. ಹಾಗೆಂದ ಕೂಡಲೇ ಪಶ್ಚಿಮ ರಾಷ್ಟ್ರಗಳು ಸಾಧಿಸಿರುವ ಅದ್ಭುತ ವೈಜ್ಞಾನಿಕ ಹಾಗೂ ವ್ಯವಸ್ಥಾಪ್ರಗತಿಯಿಂದ ಜಗತ್ತಿಗೇನೂ ಲಾಭವಿಲ್ಲ ಎಂದಲ್ಲ. ಪಶ್ಚಿಮ ರಾಷ್ಟ್ರಗಳು ತಮ್ಮ ಕೌಶಲವನ್ನು ಬಳಸಬೇಕು, ಅಷ್ಟೆ. ಮಾನವಹಿತದ ಉದ್ದೇಶ್ಯಗಳಿಗಾಗಿ ವಿದೇಶಗಳಲ್ಲಿ ತಮ್ಮ ಕೌಶಲವನ್ನು ಬಳಸುವುದೆಂದಾದರೆ ಅಮೆರಿಕ ಹೇಳೀತು: 'ಸೇತುವೆ ಕಟ್ಟುವುದು ನಮಗೆ ಗೊತ್ತು, ಅದನ್ನೇನೂ ನಾವು ಗುಟ್ಟಾಗಿ ಇಟ್ಟುಕೊಳ್ಳುವುದಿಲ್ಲ. ನಿಮಗೂ ಅದನ್ನು ಹೇಳಿಕೊಡುತ್ತೇವೆ. ನಮಗೇನೂ ಅದಕ್ಕೆ ಹಣ ಕೊಡಬೇಡಿ'—ಎಂದು. ಆದರೆ ಅಮೆರಿಕ ಹೇಳುತ್ತದೆ: 'ನೀವು ಒಂದು ತೆನೆ ಗೋಧಿ ಬೆಳೆದರೆ ನಾವು ಅಷ್ಟರಲ್ಲೇ ಎರಡು ಸಾವಿರ ತೆನೆ ಬೆಳೆಯುತ್ತೇವೆ'—ಎಂದು. ಅಮೆರಿಕ ಆ ಕಲೆಯನ್ನು ಕಲಿಯಬೇಕೆನ್ನುವವರಿಗೆ ಕಲಿಸಬೇಕು, ಅದನ್ನು ಬಿಟ್ಟು ಇಡೀ ಜಗತ್ತಿಗೆ ಬೇಕಾದ ಗೋಧಿಯನ್ನೆಲ್ಲ ತಾನೇ ಬೆಳೆಯತೊಡಗಬಾರದು. ಹಾಗೆ ಮಾಡಿದರೆ ಇಡೀ ಜಗತ್ತಿಗದು ಅತ್ಯಂತ ದುರ್ದಿನ."

ಅಮೆರಿಕದ ಗೆಳೆಯ ತರುವಾಯ ರಷ್ಯದ ಕಡೆ ತೋರಿಸಿ, ಬೃಹತ್ ಉತ್ಪಾದನೆಯನ್ನು ಕೈಗೊಂಡರೂ ಗಾಂಧೀಜೀಯ ಅರ್ಥದಲ್ಲಿ ಕಡಮೆ ಔದ್ಯೋಗೀಕೃತವಾದ ರಾಷ್ಟ್ರಗಳನ್ನು ಶೋಷಿಸದೆ, ವಿಷಮ ವಿತರಣದ ಹಳ್ಳಕ್ಕೆ ಬೀಳದೆ ಇರುವ ರಾಷ್ಟ್ರವಾಗಿಲ್ಲವೇ ಎಂದು ಗಾಂಧೀಜೀಯನ್ನು ಕೇಳಿದರು.

"ಅಂದರೆ ರಾಷ್ಟ್ರಪ್ರಭುತ್ವಕ್ಕೆ ಅಧೀನವಾದ ಔದ್ಯೋಗೀಕರಣ ಕುರಿತು ಅಭಿಪ್ರಾಯ ಹೇಳಬೇಕು ಎನ್ನುತ್ತೀರಿ. ಸೋವಿಯಟ್ ರಷ್ಯದಲ್ಲಿ ಇಂದು ಆಗುತ್ತಿರುವಂತೆ ಉತ್ಪಾದನೆ–ವಿತರಣಗಳೆರಡನ್ನೂ ಪ್ರಭುತ್ವ ತನ್ನ ಅಂಕೆಯಲ್ಲಿ ಇಟ್ಟುಕೊಂಡಿದೆ, ನಿಯಮನಗೊಳಿಸುತ್ತಿದೆ. ಸರಿ, ಅದೊಂದು ಹೊಸ ಪ್ರಯೋಗ. ಅಂತಿಮವಾಗಿ ಅದು ಎಷ್ಟು ಯಶಸ್ವಿಯಾದೀತೋ ನಾನು ಅರಿಯೆ. ಅದು ದಂಡಶಕ್ತಿಯ ಆಧಾರದ ಮೇಲೆ ಇಲ್ಲದಿದ್ದಲ್ಲಿ ನಾನು ಅದಕ್ಕಾಗಿ ಬಾಯಿಬಿಡುತ್ತಿದ್ದೆನೋ ಏನೋ. ಆದರೆ ದಂಡಶಕ್ತಿಯ ಮೇಲೆ ನಿಂತಿರುವುದರಿಂದ ಅದು ನಮ್ಮನ್ನು ಎಲ್ಲಿಗೆ ಒಯ್ಯುವುದೋ ಅರಿಯೆ."

"ಹಾಗಾದರೆ ಬೃಹತ್ ಉತ್ಪಾದನೆ ಭಾರತಕ್ಕೆ ಭವಿಷ್ಯದ ಆದರ್ಶವೆಂದು ಕಲ್ಪಿಸಿಕೊಳ್ಳಿರಿ ?" ಪ್ರಶ್ನಿಸಿದರು ಅಮೆರಿಕದ ಗೆಳೆಯ.

"ಓ, ಹೌದು, ಬೃಹತ್‌ಪ್ರಮಾಣದ ಉತ್ಪಾದನೆ, ಖಂಡಿತವಾಗಿಯೂ" ಉತ್ತರಿಸಿದರು ಗಾಂಧೀಜೀ : "ಆದರೆ ದಂಡಶಕ್ತಿಯ ಆಧಾರದ ಮೇಲಲ್ಲ. ನಮ್ಮ ರಾಟೆಯ ಸಂದೇಶವೂ ಅದೇ. ಬೃಹತ್ ಉತ್ಪಾದನೆ ಅದು, ಆದರೆ ಜನರ ಮನೆಮನೆಯಲ್ಲೇ ಬೃಹತ್ ಉತ್ಪಾದನೆ. ಬಿಡಿಬಿಡಿ ಜನರ ಉತ್ಪಾದನೆಯ ಗುಣಾಕಾರ ಮಾಡಿದರೆ, ಲಕ್ಷಪಟ್ಟು, ಆಗ ಅತ್ಯಪಾರ ಪ್ರಮಾಣದ ಬೃಹತ್ ಉತ್ಪಾದನೆಯೇ ಲಭಿಸೀತಲ್ಲವೇ ? ನಿಮ್ಮ ಬೃಹತ್ ಉತ್ಪಾದನೆಯೆಂಬುದು ಅತ್ಯಂತ ಸಂಕೀರ್ಣ ಯಂತ್ರವಿಧಾನದ ಮೂಲಕ ಆದಷ್ಟು ಕಡಮೆ ಜನರಿಂದ ಉತ್ಪಾದನೆ ಎಂಬುದಕ್ಕೆ ಬಳಸುವ ಒಂದು ಪಾರಿಭಾಷಿಕ ಪದ, ಅಷ್ಟೇ ಎಂದು ನನ್ನ ತಿಳಿವಳಿಕೆ. ಅದು ಸರಿಯಲ್ಲ. ನನ್ನ ಯಂತ್ರ ಅತಿ ಸುಲಭವಾಗಿರಬೇಕು. ಜನಕೋಟಿಯ ಮನೆಮನೆಗಳಲ್ಲಿ ಬಳಸುವಂಥದಾಗ ಬೇಕು. ನನ್ನ ವ್ಯವಸ್ಥೆಯಲ್ಲಿ ಪರಿಶ್ರಮವೇ ನಡೆಯುವ (ಚಲಾವಣೆಯ) ನಾಣ್ಯ, ಲೋಹವಲ್ಲ. ದುಡಿಮೆಯ ಶಕ್ತಿಯನ್ನು ಉಪಯೋಗಿಸಬಲ್ಲವನ ಬಳಿಯೆಲ್ಲ ಆ ನಾಣ್ಯ ಇದ್ದೀತು, ಭಾಗ್ಯ ಇದ್ದೀತು. ಅವನು ತನ್ನ ದುಡಿಮೆ

ಯನ್ನು ಬಟ್ಟೆಯಾಗಿ ಪರಿವರ್ತಿಸಿಯಾನು, ಧಾನ್ಯರೂಪಕ್ಕೆ ಪರಿವರ್ತಿಸಿಯಾನು. ಅವನಿಗೆ ತಾನು ತಯಾರಿಸಲಾಗದ ಪ್ಯಾರಾಫಿನ್ ಎಣ್ಣೆ ಬೇಕಿದ್ದರೆ ತಾನು ಹುಟ್ಟಿಸುವ ಹೆಚ್ಚುವರಿ ಧಾನ್ಯ ಕೊಟ್ಟು ಅದನ್ನು ಪಡೆದಾನು. ಅದು ಸ್ವತಂತ್ರ ವಾದ, ನ್ಯಾಯವಾದ, ಸಮಾನವಾದ ಪರಿಶ್ರಮವಿನಿಮಯ—ಅರ್ಥಾತ್ ದರೋಡೆಯಲ್ಲ. ಇದು ಹಳೆಯ ಕಾಲದ ವಿನಿಮಯ ಪದ್ಧತಿ ಎಂದು ನೀವು ಆಕ್ಷೇಪಿಸಬಹುದು. ಇಡೀ ಅಂತರರಾಷ್ಟ್ರೀಯ ವ್ಯಾಪಾರವೆಲ್ಲ ವಿನಿಮಯದ ಆಧಾರದ ಮೇಲೆ ನಡೆಯುತ್ತಿಲ್ಲವೇ ?

"ಈ ಪದ್ಧತಿಯ ಇನ್ನೊಂದು ಅನುಕೂಲ ನೋಡಿ. ಎಷ್ಟು ಬೇಕಾದರೂ ಹೆಚ್ಚಿಸಬಹುದು. ಆದರೆ ಉತ್ಪಾದನೆಯ ಅಪಾರವಾದ ಕೇಂದ್ರೀಕರಣದ ಪರಿಣಾಮ ನಿರುದ್ಯೋಗವೇ. ಸುಧಾರಿಸಿದ ಯಂತ್ರಗಳ ದೆಸೆಯಿಂದ ಉಚ್ಚಾಟನೆಗೊಂಡವರಿಗೆ ಬೇರೆ ಕೆಲಸ ಸಿಕ್ಕೀತು ಎನ್ನಬಹುದು ನೀವು. ಆದರೆ ಸುವ್ಯವಸ್ಥಿತ ರಾಷ್ಟ್ರದಲ್ಲಿ ಉದ್ಯೋಗಾವಕಾಶ ನಿರ್ದಿಷ್ಟ, ಪರಿಮಿತ; ಕೆಲಸ ಗಾರನಿಗೋ ಕೇವಲ ಯಾವುದೋ ಒಂದು ಬಗೆಯ ಯಂತ್ರಕೌಶಲದಲ್ಲೇ ಪಳಕ, ಆದುದರಿಂದ ಬೇರೆ ಕೆಲಸ ಸಿಗುವುದು ಬಲು ಕಷ್ಟ, ಇದು ನಿಮ್ಮ ಅನುಭವಕ್ಕೇ ಬಂದಿದೆಯಲ್ಲ. ಇಂದು ಇಂಗ್ಲೆಂಡಿನಲ್ಲಿ ೩೦ ಲಕ್ಷಕ್ಕೂ ಮೀರಿ ನಿರುದ್ಯೋಗಿಗಳು ಇಲ್ಲವೇ ? ಮೊನ್ನೆ ತಾನೆ ನನ್ನನ್ನು ಕೇಳಿದರು : 'ಈ ೩೦ ಲಕ್ಷ ಜನರನ್ನೇನು ಮಾಡೋಣ ? ಅವರನ್ನೆಲ್ಲ ಒಂದೇ ದಿನದಲ್ಲಿ ಕಾರ್ಖಾನೆಯಿಂದ ಹೊಲಕ್ಕೆ ಅಟ್ಟುವುದು ಸಾಧ್ಯವಿಲ್ಲ. ಭಾರಿ ಸಮಸ್ಯೆ ಇದು '—ಎಂದು."

ಇಲ್ಲಿ ಚರ್ಚೆ ಬೇಸಾಯಕ್ಕೆ ಯಂತ್ರ ಬಳಸುವ ವಿಷಯಕ್ಕೆ ಬಂತು.

"ಯಾಂತ್ರಿಕ ಬೇಸಾಯದಿಂದ ಅಮೆರಿಕ ಕೆನಡಾಗಳಲ್ಲಿ ಆದಂತೆ ಭಾರತ ದಲ್ಲೂ ಭಾರಿ ವ್ಯತ್ಯಾಸವಾಗದೆ ?" ಎಂದು ಕೇಳಿದರು ಅಮೆರಿಕದ ಗೆಳೆಯ.

"ಬಹುಶಃ ಆದೀತು", ಎಂದರು ಗಾಂಧೀಜೀ : "ಆದರೆ ಆ ಪ್ರಶ್ನೆಗೆ ಉತ್ತರ ಹೇಳಲು ನಾ ಸಮರ್ಥನಲ್ಲ ಎಂದು ಭಾವಿಸುವೆ. ಭಾರತದಲ್ಲಿ ಈವರೆಗೆ ತೊಡಕಾದ ಯಂತ್ರಗಳನ್ನು ಬೇಸಾಯಕ್ಕೆ ಲಾಭಕರವಾಗಿ ಬಳಸಲು ಸಾಧ್ಯವಾಗಿಲ್ಲ. ಯಂತ್ರ ಬೇಡವೆನ್ನುವುದಿಲ್ಲ ನಾವು. ಎಚ್ಚರಿಕೆಯಿಂದ ಪ್ರಯೋಗ ನಡೆಸುತ್ತಿದೇವೆ. ಶಕ್ತಿಯಿಂದ ನಡೆವ ಬೇಸಾಯದ ಯಂತ್ರ ಬೇಕೆಂದು ನಮಗನಿಸಿಲ್ಲ."

ಇತರರಂತೆಯೇ ಈ ಅಮೆರಿಕನ್ ಗೆಳೆಯರೂ ಗಾಂಧೀಜೀ ಎಲ್ಲ ಯಂತ್ರಗಳ ಬದ್ಧವೈರಿ ಎಂಬ ಭಾವನೆ ತುಂಬಿಕೊಂಡು ಬಂದಿದ್ದರು. "ನೀವು ಎಲ್ಲ ಯಂತ್ರಕ್ಕೂ ವಿರೋಧಿಯೆಂದು ಕೆಲವರ ಭಾವನೆ. ಅದು ನಿಜವಲ್ಲವೆಂದು ನನ್ನ ನಂಬಿಕೆ" ಎಂದರು ಅವರು.

"ಅದು ತಪ್ಪು, ತಪ್ಪು. ನೂಲುವ ರಾಟೆಯೂ ಯಂತ್ರವೇ, ಅದೊಂದು ಸೊಗಸಾದ ಕಲಾಕೃತಿ. ವ್ಯಾಪಕ ಪ್ರಮಾಣದಲ್ಲಿ ಯಂತ್ರದ ಬಳಕೆಯ ಸಂಕೇತ ಅದು. ಜನಕೋಟಿಯ ಸೌಕರ್ಯಕ್ಕೆ ಇಳಿಸಿ ತಂದ ಯಂತ್ರ ಅದು" ಎಂದರು ಗಾಂಧೀಜೀ.

"ಕೆಲವರ ಕೈಲಿ ಉತ್ಪಾದನೆ ಹಾಗೂ ವಿತರಣವನ್ನು ಕೇಂದ್ರೀಕರಿಸಿದಾಗ, ಆ ಕಾರಣಕ್ಕೆ ಮಾತ್ರವೇ ನೀವು ಯಂತ್ರವಿರೋಧಿ"—ಎಂದು ಅಂತಿಮವಾಗಿ ನಿಷ್ಕರ್ಷಿಸಿದರು ಆ ಅಮೆರಿಕದ ಗೆಳೆಯ.

"ನಿಮ್ಮ ಮಾತು ಸರಿ. ವಿಶಿಷ್ಟ ಅಧಿಕಾರ, ಸರ್ವಮಾನ್ಯಗಳೆಂದರೆ ನನಗೆ ದ್ವೇಷ. ಜನಕೋಟಿಯೊಂದಿಗೆ ಹಂಚಿಕೊಳ್ಳಲಾಗದುದೆಲ್ಲ ನನಗೆ ನಿಷಿದ್ಧ, ಅಷ್ಟೆ"—ಉತ್ತರಿಸಿದರು ಗಾಂಧೀಜೀ.[೧೨೨]

* * * *

ಒಂದು ಕಾರ್ಖಾನೆ ಕೆಲವು ನೂರು ಜನರಿಗೆ ಕೆಲಸ ಕೊಡುತ್ತದೆ, ಸಾವಿರಾರು ಮಂದಿಯನ್ನು ಕೆಲಸದಿಂದ ತೆಗೆಯುತ್ತದೆ. ಎಣ್ಣೆಗಿರಣಿಯಿಂದ ಟನ್‌ಗಟ್ಟಲೆ ಎಣ್ಣೆ ತಯಾರಿಸಬಲ್ಲೆ, ಆದರೆ ಸಾವಿರಾರು ಮಂದಿ ಎಣ್ಣೆ ಗಾಣಿಗರನ್ನೂ ಇದರಿಂದಾಗಿ ಉದ್ಯೋಗದಿಂದ ಹೊರಗಟ್ಟುತ್ತೇನೆ. ಇದನ್ನು ವಿನಾಶಕಾರೀ ಶಕ್ತಿ ಎನ್ನುವೆ, ಲಕ್ಷಾಂತರ ಜನರ ಕೈಯಿಂದ ಆಗುವ ಕೆಲಸ ವಾದರೋ ವಿಧಾಯಕ (ರಚನಾತ್ಮಕ), ಸರ್ವರ ಹಿತಸಾಧಕ. ರಾಷ್ಟ್ರದ ಕೈಲೇ ಇದ್ದರೂ ಶಕ್ತಿಸಂಚಾಲಿತ ಯಂತ್ರದ ಮೂಲಕ ಬೃಹತ್ ಉತ್ಪಾದನೆ ವ್ಯರ್ಥ.

ಲಕ್ಷಾಂತರ ಜನರ ಶ್ರಮವನ್ನೇಕೆ ಉಳಿಸಬಾರದು, ಬೌದ್ಧಿಕ ಕ್ರಿಯೆ ಗಳಿಗೆ ಅವರಿಗೇಕೆ ವಿರಾಮ ಕೊಡಬಾರದು?—ಎಂದು ಕೇಳುತ್ತಾರೆ. ಬಿಡುವು ಒಳ್ಳೆಯದು, ಆವಶ್ಯಕ—ಒಂದು ಮಿತಿಯಲ್ಲಿ ಮಾತ್ರ. ತನ್ನ ತನ್ನ ಬೆವರು ಹರಿಸಿ ದುಡಿದು ಉಣ್ಣಲೆಂದೇ ದೇವರು ಮಾನವನನ್ನು ಸೃಷ್ಟಿಸಿದ.

ನಮಗೆ ಬೇಕಾದುದನ್ನೆಲ್ಲ, ನಮ್ಮ ಆಹಾರವನ್ನೂ, ಮಂತ್ರವಾದಿಯ ಯಕ್ಷಿಣೀ ದಂಡದಿಂದ, ಬವನಾಸಿಯಿಂದ ತಯಾರಿಸುವಂತಾದೀತೋ ಎಂದು ನನಗೆ ಗಾಬರಿ.೧೨೩

*　　　*　　　*　　　*

**ಜಪಾನೀ ಮಿತ್ರ**—ಜಪಾನು-ಭಾರತಗಳ ನಡುವೆ ಎಷ್ಟೋ ಸಾಮಾನ್ಯ ಸಂಗತಿಗಳಿದೆಯಲ್ಲವೇ ?

**ಗಾಂಧೀಜೀ**—ಸರಿ, ಪೂರ್ವ ಪೂರ್ವವೇ, ಆದರೆ ಈಗಲ್ಲ. ಜಪಾನು ಅಮೆರಿಕದಂತಾಗಿಬಿಟ್ಟಿದೆ. ಹಾಗೆ ನೋಡಿದರೆ ಜಪಾನು ಭಾರತವನ್ನು ಸುಲಿಯುವುದರಲ್ಲಿ ಇಂಗ್ಲೆಂಡ್ ಅಮೆರಿಕಗಳನ್ನೂ ಮಣ್ಣು ಮುಕ್ಕಿಸುತ್ತಿದೆ. ಜಪಾನು ಇಲ್ಲಿ ತಂದು ಹೇರುವ ಫೆಂಟ್ ಬಟ್ಟೆ ಎಷ್ಟು ಗೊತ್ತೆ ?

**ಜಪಾನೀ ಮಿತ್ರ**—(ಅಚ್ಚರಿಗೊಂಡು) ಅಗ್ಗದ ಮಾಲು ಮಾರುತ್ತೇವೆ, ಸ್ವಾಮಿ. ಅವು ಹಾನಿಕರವೇ ?

**ಗಾಂಧೀಜೀ** — ಅವು ಅಗ್ಗವಾದುದರಿಂದ ಹಾನಿಕರವೆಂದು ನಾನು ಹೇಳುವುದಿಲ್ಲ. ಆದರೆ ನಮ್ಮನ್ನು ಅವು ಬಡವು ಮಾಡುತ್ತವೆ.

**ಜಪಾನೀ ಮಿತ್ರ**—ಅಗ್ಗದ ಸಾಮಾನು ಒದಗಿಸುವುದು ಒಳ್ಳೆಯದೇ ಅಲ್ಲವೇ ?

**ಗಾಂಧೀಜೀ**—ನಮ್ಮ ಕೈಕಾಲು ಕಸಿದುಕೊಳ್ಳಲು ನಿಮಗೆ ಏನು ಅಧಿಕಾರ ?

**ಜಪಾನೀ ಮಿತ್ರ**— ಹಾಗಾದರೆ ನೀವು ಈ ಯಂತ್ರಯುಗಕ್ಕೆ ವಿರೋಧಿ ಎನ್ನಿ !

**ಗಾಂಧೀಜೀ**—ಹಾಗೆನ್ನುವುದು ನನ್ನ ವಿಚಾರಗಳ ಅಣಕಮಾಡಿದಂತೆ. ನಾನೇನು ಯಂತ್ರಕ್ಕೆ ವಿರೋಧಿಯಲ್ಲ, ಆದರೆ ಅದು ನಮ್ಮ ಮೇಲೆ ಸವಾರಿ ಮಾಡುವುದಕ್ಕೆ ನಾನು ಪೂರಾ ವಿರೋಧಿ. ಜಪಾನ್, ಇಂಗ್ಲೆಂಡ್, ಅಮೆರಿಕ ಇಂದು ಹಾಗೆ ಮಾಡುತ್ತಿವೆ. ಭಾರತ-ಜಪಾನ್‌ಗಳ ನಡುವೆ ಒಪ್ಪಂದ ಎಂಬ ಹೆಸರೇ ತಪ್ಪು. ಅದು ಇಂಗ್ಲೆಂಡ್-ಜಪಾನುಗಳ ನಡುವಣ ಒಪ್ಪಂದ.

ಜಪಾನು ಈ ಸ್ಪರ್ಧೆಯಿಂದ ಕೈ ಹಿಂತೆಗೆದುಕೊಳ್ಳಬೇಕು. ನಿಮಗೂ ಹಾನಿ, ನಮಗೂ ಹಾನಿ ಅದರಿಂದ. ತಾನೂ ನೀಚನಾಗದೆ, ಯಾರೂ ಇನ್ನೊಬ್ಬರನ್ನು ಬದ್ಧಗುಲಾಮರನ್ನಾಗಿ ಮಾಡಿಕೊಳ್ಳಲಾರ. ಕೆಲವೇ ವರ್ಷಗಳ ಹಿಂದೆ ನಮ್ಮ ಬಟ್ಟೆ ನಾವೇ ತಯಾರಿಸಿಕೊಳ್ಳುತ್ತಿದ್ದೆವು. ಈಗ ಅದು ಜಪಾನ್-ಇಂಗ್ಲೆಂಡು ಗಳಿಂದ ಬರುತ್ತಿದೆ. ಇದು ಅಸಹಜ ಸ್ಥಿತಿ. ನಾವು ನಮಗೂ ಇಡೀ ಜಗತ್ತಿಗೂ ಸಾಕಾಗುವಷ್ಟು ಬಟ್ಟೆ ತಯಾರಿಸಬಲ್ಲೆವು. ನಿಸರ್ಗಸಂಪತ್ತು ನಮ್ಮ ದೇಶದಲ್ಲಿ ಹೇರಳವಾಗಿದೆ. ತಮ್ಮ ಹತ್ತಿ ಹೊರಕ್ಕೆ ಕಳಿಸಿ ಅದನ್ನು ಸಿದ್ಧವಸ್ತುವಾಗಿ ತರಿಸಿಕೊಳ್ಳುವುದರಲ್ಲಿ ಅತ್ಯಂತ ಕರಾಳ ಪ್ರಮಾದವಿದೆ. ಒಂಬತ್ತು ಕೋಟಿ ರೂಪಾಯಿಗಳಷ್ಟು ಬೆಲೆಯ ದನದ ಚರ್ಮ ಹೊರಗೆ ಹೋಗುತ್ತದೆ, ಸಿದ್ಧ ವಸ್ತುವಾಗಿ ತಿರುಗಿ ಬರುತ್ತದೆ. ಹೀಗಾಗಲು ಯಾವ ಕಾರಣವೂ ಇಲ್ಲ.

**ಜಪಾನೀ ಮಿತ್ರ**—ಭಾರತವನ್ನು ನೀವು ಔದ್ಯೋಗೀಕೃತವಾಗಿಸಿರಿ ?

**ಗಾಂಧೀಜೀ**—ನಿಜವಾಗಿ ಹಾಗೆ ಮಾಡಿಯೇನು, ನನ್ನ ಅರ್ಥದಂತೆ. ಗ್ರಾಮಸಮುದಾಯಗಳು ಮತ್ತೆ ತಲೆ ಎತ್ತಿಯಾವು. ಭಾರತದ ಹಳ್ಳಿಗಳು ಹಿಂದೆ ಭಾರತದ ಊರುಗಳಿಗೂ ನಗರಗಳಿಗೂ ಬೇಕಾದುದೆಲ್ಲವನ್ನೂ ಒದಗಿಸುತ್ತಿದ್ದುವು. ನಮ್ಮ ನಗರಗಳು ವಿದೇಶಗಳಿಗೆ ಮಾರುಕಟ್ಟೆಗಳಾಗಿ ಹಳ್ಳಿಗಳಿಗೆ ವಿದೇಶದ ಅಗ್ಗದ, ಕಳಪೆ ಮಾಲುಗಳನ್ನು ತಂದು ಒಟ್ಟಿದಾಗಲೇ ಭಾರತ ಬಡವಾದುದು.

**ಜಪಾನೀ ಮಿತ್ರ**—ಹಾಗಾದರೆ ನೀವು ಹಿಂದಿನ ನೈಸರ್ಗಿಕ ಅರ್ಥ ವ್ಯವಸ್ಥೆಗೆ ಮರಳುವಿರೆನ್ನಿ ?

**ಗಾಂಧೀಜೀ**—ಹೌದು. ಇಲ್ಲದಿದ್ದರೆ ನಾನು ಪಟ್ಟಣ ಸೇರಬೇಕಾದೀತು. ಭಾರಿ ಉದ್ಯಮವೊಂದನ್ನು ನಡೆಸುವ ಸಾಮರ್ಥ್ಯ ನನ್ನಲ್ಲಿದೆ, ಬೇಕೆಂತಲೇ ನಾನು ಆ ಆಸೆ ತೊರೆದಿದೇನೆ, ತ್ಯಾಗವೆಂದಲ್ಲ, ನನ್ನ ಹೃದಯ ಅದರ ವಿರುದ್ಧ ಸಿಡಿದೆದ್ದ ಕಾರಣದಿಂದ. ಸ್ವಾಮಿ, ಅನುದಿನವೂ ನಡೆಯುತ್ತಿರುವ ನಮ್ಮ ರಾಷ್ಟ್ರದ ಲೂಟಿಯಲ್ಲಿ ನಾನು ಪಾಲುಗಾರನಾಗತಕ್ಕುದಲ್ಲ. ಆದರೆ ಬೇರೊಂದು ಅರ್ಥದಲ್ಲಿ ನಾನು ಹಳ್ಳಿಯನ್ನು ಔದ್ಯೋಗೀಕೃತಗೊಳಿಸುತ್ತಿದೇನೆ.೧೨೪

## ಯೋಜನೆಯ ತತ್ತ್ವ

**ಪ್ರಶ್ನೆ** — ರಾಷ್ಟ್ರದ ಕಚ್ಚಾವಸ್ತುಗಳನ್ನು ಅತ್ಯಂತ ಪರಿಪೂರ್ಣವಾಗಿ ಬಳಸುವುದಕ್ಕಾಗಿ ಔದ್ಯೋಗೀಕರಣದ ಯೋಜನೆಗಳನ್ನು ಸರಕಾರ ತರುತ್ತಿದೆ. ಬಳಕೆಗೆ ಬಂದಿಲ್ಲದ ಅಪಾರ ಜನಬಲವನ್ನು ಮಾತ್ರ ಅದರ ಪಾಡಿಗೆ ಅದನ್ನೇ ಬಿಟ್ಟುಬಿಡಲಾಗಿದೆ. ಇಂಥ ಯೋಜನೆಗಳನ್ನು **ಸ್ವದೇಶಿ** ಎನ್ನಬಹುದೇ ?

**ಉತ್ತರ**—ಚೆನ್ನಾಗಿ ಕೇಳಿದ ಪ್ರಶ್ನೆ. ಸರ್ಕಾರದ ಯೋಜನೆ ಏನು ಎಂಬುದು ಸರಿಯಾಗಿ ನನಗೆ ತಿಳಿಯದು. ಒಂದು ದೇಶದ ಕಚ್ಚಾವಸ್ತುಗಳನ್ನು ಮಾತ್ರ ಉಪಯೋಗಿಸಿ ಅದಕ್ಕೂ ಹೆಚ್ಚು ಪ್ರಚ್ಛನ್ನಶಕ್ತಿಯುಳ್ಳ ಜನಬಲವನ್ನು ನಿರ್ಲಕ್ಷಿಸುವ ಯಾವುದೇ ಯೋಜನೆ ತಿರುವುಮುರುವಾದ ಯೋಜನೆ ಎಂಬ ಸಂಗತಿಯನ್ನು ನಾನು ಹಾರ್ದಿಕವಾಗಿ ಅನುಮೋದಿಸುತ್ತೇನೆ. ಅಂಥದು ಮಾನವರಲ್ಲಿ ಸಮಾನತೆಯನ್ನೆಂದಿಗೂ ಸ್ಥಾಪಿಸಲಾರದು.

ಅಮೆರಿಕ ಜಗತ್ತಿನಲ್ಲೇ ಅತ್ಯಂತ ಔದ್ಯೋಗೀಕೃತ ರಾಷ್ಟ್ರ. ಆದರೂ ಅದು ಬಡತನ, ಅಧಃಪತನಗಳನ್ನು ತೊಡೆದಿಲ್ಲ. ಏಕೆಂದರೆ ಅದು ಸರ್ವ ವ್ಯಾಪಕ ಜನಬಲವನ್ನು ಮರ್ಲಕ್ಷಿಸುತ್ತದೆ, ಕೆಲವರ ಕೈಲಿ ಅಧಿಕಾರವನ್ನು ಕೇಂದ್ರೀಕರಿಸುತ್ತದೆ, ಅವರು ಬಹುಜನರನ್ನು ಬಲಿಗೊಟ್ಟು ಹೇರಳ ಸಂಪತ್ತಿನ ಸಂಗ್ರಹವನ್ನು ದೋಚುತ್ತಾರೆ. ಫಲತಃ ಅದರ ಔದ್ಯೋಗೀಕರಣ ಅಲ್ಲಿನ ಬಡವರಿಗೂ, ಜಗತ್ತಿನ ಇತರರಿಗೂ ಮಿತ್ತು.

ಭಾರತ ಅಂಥ ವಿಚಾರದಿಂದ ತಪ್ಪಿಸಿಕೊಳ್ಳಬೇಕಾದರೆ ಅಮೆರಿಕದಲ್ಲಿ, ಇತರ ಪಶ್ಚಿಮದೇಶಗಳಲ್ಲಿ ಉತ್ತಮವಾದುದನ್ನು ಅನುಕರಿಸಬೇಕು, ಆಕರ್ಷಕ ವಾಗಿ ತೋರುವ, ಆದರೆ ವಿನಾಶಕರವಾದ ಅವುಗಳ ಅರ್ಥನೀತಿಗಳನ್ನು ಕೈಬಿಡಬೇಕು. ಆದುದರಿಂದ ಭಾರತದ ಸಮಸ್ತ ಜನಬಲವನ್ನು ಪೂರಾ ಸದುಪಯೋಗಪಡಿಸಿಕೊಂಡು ಕಚ್ಚಾವಸ್ತುವನ್ನೆಲ್ಲ ಹೊರಗಡೆ ಕಳುಹಿಸಿ ಅವುಗಳ ಬದಲಾಗಿ ಭಾರಿ ಬೆಲೆ ತೆತ್ತು ಸಿದ್ಧವಸ್ತುಗಳನ್ನು ಪುನಃ ಕೊಳ್ಳುವುದರ ಬದಲು ಅವನ್ನೆಲ್ಲ ಭಾರತದ ಎಲ್ಲ ಹಳ್ಳಿಗಳಲ್ಲೂ ಹಂಚುವುದೇ ಯಥಾರ್ಥವಾದ, ಸಾರ್ಥಕವಾದ ಯೋಜನೆ.೧೨೫

## ಅಧ್ಯಾಯ – ೧೦

# ಬಂಡವಾಳ ಹಾಗೂ ಶ್ರಮಶಕ್ತಿ

ಜಗತ್ತಿನಲ್ಲಿ ಬಂಡವಾಳವೇ ಸರ್ವಸ್ವವೆಂದು ನಂಬತೊಡಗಿದ್ದೇವೆ. ಆದರೆ ಒಂದು ಗಳಿಗೆ ವಿಚಾರಮಾಡಿದರೆ ಬಂಡವಾಳಗಾರ ಎಂದೂ ಪಡೆಯಲಾಗದಷ್ಟು ಬಂಡವಾಳ ಶ್ರಮಶಕ್ತಿಯ ಬಳಿ ಇರುವುದು ಗೋಚರವಾದೀತು. ಶ್ರಮಶಕ್ತಿಗೆ ಅಪ್ರತಿಮ ಅವಕಾಶಗಳಿವೆಯೆಂಬುದನ್ನು ರಸ್ಕಿನ್ ತನ್ನ ಕಾಲದಲ್ಲಿ ಬೋಧಿಸಿದ. ಆದರೆ ಆತ ನಮ್ಮ ಅಳತೆಗೆ ಮೀರಿ ಮಾತಾಡಿದ. ಈಗಲಾದರೋ ಅಂತಹ ಒಂದು ಪ್ರಯೋಗವನ್ನೇ ನಿಜವಾಗಿ ನಡೆಸಿರುವ ಇಂಗ್ಲಿಷ್ ಗೃಹಸ್ಥ ಸರ್ ಡೇನಿಯಲ್ ಹ್ಯಾಮಿಲ್ಟನ್ ಎಂಬಾತನಿದ್ದಾನೆ. ಆತ ಅರ್ಥಶಾಸ್ತ್ರಜ್ಞ, ಬಂಡವಾಳಗಾರನೂ ಸಹ; ತನ್ನ ಆರ್ಥಿಕ ಸಂಶೋಧನೆಗಳಿಂದ ಹಾಗೂ ಪ್ರಯೋಗಗಳಿಂದ ರಸ್ಕಿನ್ ಸ್ಫೂರ್ತಿವಶನಾಗಿ ಬಂದ ನಿರ್ಣಯಗಳಿಗೇ ಬಂದಿದ್ದಾನೆ. ಶ್ರಮಶಕ್ತಿಗೆ, ಶ್ರಮವರ್ಗಕ್ಕೆ ಸಜೀವ ಸಂದೇಶವೊಂದನ್ನು ಆತ ತಂದಿದ್ದಾನೆ. ಒಂದು ಲೋಹದ ಚೂರಿನಲ್ಲಿ ಬಂಡವಾಳ ಅಡಕವಾಗಿದೆ ಎಂಬುದು ತಪ್ಪು ಎನ್ನುತ್ತಾನೆ ಆತ. ಇಂತಿಷ್ಟು ಉತ್ಪನ್ನವೇ ಬಂಡವಾಳ ಎಂಬುದೂ ತಪ್ಪು; ಮೂಲಕ್ಕೇ ನಾವು ಹೋಗುವುದಾದರೆ ಶ್ರಮಶಕ್ತಿಯೇ ಬಂಡವಾಳ, ಮತ್ತು ಆ ಸಜೀವ ಬಂಡವಾಳ ಅಕ್ಷಯವಾದುದು ಎಂದೂ ಆತನ ಹೇಳಿಕೆ.೧೨೬

ಬಂಡವಾಳ ಹಾಗೂ ಶ್ರಮಶಕ್ತಿ ಎರಡರ ನಡುವೆ ಯೋಗ್ಯ ಸಂಬಂಧದ ಸ್ಥಾಪನೆಯ ಪಕ್ಷಪಾತಿ ನಾನು. ಒಂದು ಇನ್ನೊಂದರ ಮೇಲೆ ಸವಾರಿ ಮಾಡಬೇಕೆಂದು ನಾ ಇಚ್ಛಿಸುವುದಿಲ್ಲ. ಎರಡರ ನಡುವೆಯೂ ಯಾವುದೇ ನೈಸರ್ಗಿಕ ವಿರೋಧವಿದೆಯೆಂದೂ ನಾನು ನಂಬುವುದಿಲ್ಲ.೧೨೭

ಬಂಡವಾಳ ಒಂದು ಶಕ್ತಿಯಾದುದಾದರೆ ದುಡಿಮೆಯೂ ಅಂತೆಯೇ. ಎರಡೂ ಶಕ್ತಿಗಳನ್ನೂ ವಿನಾಶಕಾರಿಯಾಗಿ ಅಥವಾ ವಿಧಾಯಕವಾಗಿ ಬಳಸಬಹುದು. ಎರಡೂ ಪರಸ್ಪರ ಅವಲಂಬಿಗಳು. ಒಮ್ಮೆ ದುಡಿಮೆಗಾರನಿಗೆ

ಅವನ ಶಕ್ತಿ ಮನವರಿಕೆಯಾಯಿತೆಂದರೆ ಬಂಡವಾಳಗಾರನು ಗುಲಾಮನಾಗಿ ಇರುವುದನ್ನು ಬಿಟ್ಟು ಅವನೊಡನೆ ಪಾಲುಗಾರನಾಗಿಬಿಡುತ್ತಾನೆ. ಅವನು ತಾನೊಬ್ಬನೇ ಏಕಮಾತ್ರ ಒಡೆಯನಾಗಬೇಕೆಂದು ಬಯಸಿದರೆ ಬಂಗಾರದ ತತ್ತಿಯಿಡುವ ಕೋಳಿಯನ್ನೇ ಆತ ಕೊಂದಾನು.[೧೨೮]

## ಬಂಡವಾಳಕ್ಕೆ ನೈತಿಕ ಅಧಿಕಾರವಿಲ್ಲ

**ಪ್ರಶ್ನೆ**—ಒಬ್ಬ ಮನುಷ್ಯ ಭೌತಸಂಪತ್ತನ್ನಾಗಲಿ ನೀತಿಸಂಪತ್ತನ್ನಾಗಲಿ ಸಂಗ್ರಹಿಸುವುದಾದರೆ ಸಮಾಜದ ಇತರ ಸದಸ್ಯರ ಸಹಾಯ-ಸಹಕಾರಗಳಿಂದ ಮಾತ್ರವೇ ಆತ ಹಾಗೆ ಮಾಡಬಲ್ಲ. ಅಂಥದರಲ್ಲಿ, ಅದರಲ್ಲಿ ಏನನ್ನಾಗಲಿ ಕೇವಲ ಸ್ವಲಾಭಕ್ಕಾಗಿಯೇ ಬಳಸಲು ಅವನಿಗೆ ನೈತಿಕ ಅಧಿಕಾರವಿದೆಯೇ?

**ಉತ್ತರ**—ಇಲ್ಲ, ಅವನಿಗೆ ನೈತಿಕ ಅಧಿಕಾರವಿಲ್ಲ[೧೨೯]

* * * *

"ಒಂದು ರಾಷ್ಟ್ರಕ್ಕೆ ತನ್ನ ಲಕ್ಷಾಧೀಶರಿಲ್ಲದಿದ್ದರೂ ನಡೆದೀತು, ಬಂಡವಾಳಗಾರರಿಲ್ಲದೆಯೂ ನಡೆದೀತು, ಆದರೆ ಶ್ರಮಿಕವರ್ಗವಿಲ್ಲದೆ ಯಾವ ರಾಷ್ಟ್ರವೂ ನಡೆಯದು."

ಶ್ರಮಪ್ರತಿಷ್ಠೆಯ ಬಗೆಗೆ ನನಗೆ ಎಷ್ಟು ಅಪಾರ ಗೌರವವೆಂದರೆ ನಾನು ಅನೇಕಾನೇಕ ವರ್ಷಗಳಿಂದ ದುಡಿಮೆಗಾರರ ಭಾಗ್ಯದೊಂದಿಗೆ ನನ್ನದನ್ನೂ ಸೇರಿಸಿಕೊಂಡುಬಿಟ್ಟಿದೇನೆ; ಅವರಂತೆಯೇ ನನ್ನ ಕೈಕಾಲುಗಳಿಂದಲೂ ದುಡಿಯುತ್ತ ಅವರೊಂದಿಗೇ ಬದುಕತೊಡಗಿದೇನೆ. ನಿಮ್ಮ ಶರೀರಶ್ರಮದಿಂದ ದುಡಿದರೆ ನೀವು ಕೇವಲ ನಿಮ್ಮ ಅಸ್ತಿತ್ವದ ನಿಯಮದ ಪ್ರಕಾರವೇ ನಡೆಯುತ್ತಿದ್ದಂತೆ; ನಿಮ್ಮ ಸ್ಥಿತಿಯ ಬಗೆಗೆ ಅತೃಪ್ತಿಪಡಲು ಯಾವ ಕಾರಣವೂ ಇಲ್ಲ. ಹಾಗೆ ಅತೃಪ್ತಿಪಡುವ ಬದಲು ಯಾವ ರಾಷ್ಟ್ರಕ್ಕಾಗಿ ದುಡಿಯುತ್ತಿರುವಿರೋ ಅದರ ಧರ್ಮದರ್ಶಿಗಳು ನೀವೆಂದು ಭಾವಿಸಿಕೊಳ್ಳಿ. ನಿಮ್ಮ ದುಡಿಮೆಗೂ ನನ್ನ ದುಡಿಮೆಗೂ ಒಂದು ಮುಖ್ಯ ವ್ಯತ್ಯಾಸವಿದೆ. ನೀವು ಬೇರೊಬ್ಬರಿಗಾಗಿ ದುಡಿಯುತ್ತೀರಿ. ನಾನಾದರೋ ನನಗಾಗಿಯೇ ದುಡಿಯುತ್ತಿದೇನೆಂದು ತಿಳಿಯುತ್ತೇನೆ. ಆಗ ನನಗೆ ನಾನೇ ಒಡೆಯ. ಆದಕಾರಣ ನನ್ನ ಸ್ಥಿತಿ ಸ್ವಾಭಾವಿಕ. ನಾವೆಲ್ಲರೂ ನಮ್ಮ ನಮ್ಮ ಒಡೆಯರು ನಾವೇ ಆಗಬೇಕು. ಅಂಥ ಸ್ಥಿತಿ

ಒಂದೇ ದಿನದಲ್ಲಿ ಬಾರದು. ಇತರರ ಆಳುಗಳಾಗಿ ಕೆಲಸಮಾಡುವಾಗ ನೀವು ಹೇಗೆ ನಡೆದುಕೊಳ್ಳಬೇಕೆಂಬುದು ಒಂದು ಗಂಭೀರ ಪ್ರಶ್ನೆಯೇ. ತನಗಾಗಿ ದುಡಿಮೆಗಾರನಾಗುವುದರಲ್ಲಿ ಹೇಗೆ ಅವಮಾನವಿಲ್ಲವೋ ಅಂತೆಯೇ ಪರರ ಆಳಾಗಿ ಕೆಲಸಮಾಡುವುದರಲ್ಲಿಯೂ ಯಾವ ಅವಮಾನವೂ ಇಲ್ಲ.

ಆದರೆ ಒಡೆಯ–ಆಳುಗಳ ನಡುವೆ ನಿಜವಾದ ಸಂಬಂಧವನ್ನು ಕಂಡುಕೊಳ್ಳಬೇಕಾದುದು ಅಗತ್ಯ. ನಿಮ್ಮ ಕರ್ತವ್ಯಗಳಾವುವು, ನಿಮ್ಮ ಹಕ್ಕುಗಳು ಯಾವುವು? ನಿಮ್ಮ ದುಡಿಮೆಗೆ ಅಧಿಕ ವೇತನ ಪಡೆಯುವುದು ನಿಮ್ಮ ಹಕ್ಕು, ಇದು ತಿಳಿಯುವುದು ಸುಲಭ. ಹಾಗೆಯೇ ನೀವು ಪಡೆವ ವೇತನಕ್ಕೆ ಪ್ರತಿಯಾಗಿ ನಿಮ್ಮ ಶಕ್ತಿಯಿದ್ದಷ್ಟೂ ದುಡಿಯಬೇಕು ಎಂಬುದೂ ಅಷ್ಟೇ ಸರಳ. ದುಡಿಮೆಗಾರರು ನಿಯಮರೂಪವಾಗಿ ತಮ್ಮ ಹೊಣೆಯನ್ನು ದುಡಿಮೆಗಾರರ ವಿಷಯಕ್ಕೆ ಸಮಾನವಾದ ಹೊಣೆಯುಳ್ಳ ಒಡೆಯನಿಗಿಂತ ಹೆಚ್ಚು ಪರಿಣಾಮಕಾರಿಯಾಗಿ, ಬುದ್ಧಿಪೂರ್ವಕವಾಗಿ ನಿರ್ವಹಿಸುವರೆಂಬುದು ನನ್ನ ಸಾರ್ವತ್ರಿಕ ಅನುಭವ. ಆದಕಾರಣ ದುಡಿಮೆಗಾರರು ಒಡೆಯರ ಮೇಲೆ ತಮ್ಮ ಅಭೀಷ್ಟವನ್ನು ಎಷ್ಟರಮಟ್ಟಿಗೆ ಹೊರಿಸಬಹುದೆಂಬುದನ್ನು ಅರಿಯಬೇಕಾದುದು ಅಗತ್ಯ. ನಮಗೆ ಸರಿಯಾಗಿ ಸಂಬಳ ಕೊಡುತ್ತಿಲ್ಲವಾದರೆ, ಒಳ್ಳೆಯ ವಸತಿ ಇಲ್ಲವಾದರೆ, ಸಾಕಷ್ಟು ಕೂಲಿ ಪಡೆಯುವುದು, ಒಳ್ಳೆಯ ವಸತಿ ಪಡೆಯುವುದು ಎಂತು? ವೇತನದ ಪ್ರಮಾಣ, ಮಟ್ಟ ಗೊತ್ತುಪಡಿಸುವವರು, ಕಾರ್ಮಿಕರಿಗೆ ಬೇಕಾದ ಸೌಕರ್ಯದ ಪ್ರಮಾಣ ನಿರ್ಧರಿಸುವವರು ಯಾರು? ನೀವೇ ನಿಮ್ಮ ಹಕ್ಕುಗಳನ್ನು, ಅವನ್ನು ಅನ್ವಯಗೊಳಿಸುವ ವಿಧಾನವನ್ನು ಅರಿತುಕೊಳ್ಳುವುದು, ಅನ್ವಯಗೊಳಿಸುವುದು ಉತ್ತಮ ಪಕ್ಷ. ಆದರೆ ಅದಕ್ಕೆ ನಿಮಗೆ ಪೂರ್ವತಯಾರಿ, ಶಿಕ್ಷಣ ಬೇಕಾದೀತು. ದೇಶದ ಹಲವಾರು ಭಾಗಗಳಿಂದ ನಿಮ್ಮನ್ನು ಕರೆತಂದು ಇಲ್ಲಿ ಒಟ್ಟಿಗೆ ಸೇರಿಸಿದಾರೆ. ಆದರೆ ನಿಮಗೆ ಸಾಕಷ್ಟು ಕೂಲಿ ಸಿಗುತ್ತಿಲ್ಲ, ಮನೆಗಳು ಸರಿಯಾಗಿ ಇಲ್ಲ ಎಂದು ಗೊತ್ತು. ಆದುದರಿಂದ ನಿಮಗೆ ದಾರಿ ತೋರುತ್ತಿರುವವರು, ಸಲಹೆಗಾರರಾಗಿರುವವರು ಅಕ್ಷರ ಕಲಿಸಿಯಲ್ಲ, ಮಾನವ ವ್ಯವಹಾರಗಳ, ಮಾನವ ಸಂಬಂಧಗಳ ಪರಿಜ್ಞಾನವನ್ನು ಮೊದಲು ಮಾಡಿಕೊಡಬೇಕೆಂದು ಸೂಚಿಸುವ ಸಾಹಸ ಮಾಡುತ್ತೇನೆ. ಗೌರವಪೂರ್ವಕವಾಗಿ, ನಮ್ರತೆಯಿಂದ ಈ ಸೂಚನೆ ಕೊಡುತ್ತಿದೇನೆ.

ಏಕೆಂದರೆ ದಕ್ಷಿಣ ಆಫ್ರಿಕದಲ್ಲಿ ಶ್ರಮಜೀವಿಗಳ ವಿಷಯ ಪರಿಶೀಲನೆ ಮಾಡಿದಾಗ ಎಷ್ಟೋ ವೇಳೆ ಕಾರ್ಮಿಕನಾಯಕರು ಕಾರ್ಮಿಕರಿಗೆ ಓದುಬರಹ ಕಲಿಸಿಬಿಟ್ಟರೆ ಸಾಕೆಂದು ತಿಳಿದಿದ್ದುದು ನನಗೆ ತಿಳಿಯಬಂತು. ಓದುಬರಹ ನಿಸ್ಸಂಶಯ ವಾಗಿ ಬೇಕು. ಆದರೆ ಅದಕ್ಕೂ ಮುಂಚೆ ನಿಮ್ಮ ಹಕ್ಕುಗಳ, ಅವನ್ನು ಅನ್ವಯಿಸಿಕೊಳ್ಳುವ ವಿಷಯಕ್ಕೆ ಸರಿಯಾದ ತಿಳಿವಳಿಕೆ ಬೇಕು ನಿಮಗೆ. ಈ ತಿಳಿವಳಿಕೆಯನ್ನು ಕೆಲವು ದಿನಗಳಲ್ಲೇ ಕಾರ್ಮಿಕರಿಗೆ ಕೊಡಬಹುದೆಂದು ಎಷ್ಟೋ ಮುಷ್ಕರಗಳನ್ನು (ಸಂಪುಗಳನ್ನು) ನಡೆಸುವಾಗ ನನಗೆ ತಿಳಿದುಬಂದಿದೆ.

ಇದು ನನ್ನನ್ನು ಸಂಪಿನ ಪ್ರಶ್ನೆಗೆ ಒಯ್ಯುತ್ತದೆ. ಇಂದು ಜಗತ್ತಿನ ವಾತಾವರಣವೆಲ್ಲ ಸಂಪಿನಿಂದ ತುಂಬಿಹೋಗಿದೆ. ಚಿಲ್ಲರೆ ಕಾರಣಕ್ಕಾಗಿಯೂ ಇಂದು ಕಾರ್ಮಿಕರು ಸಂಪುಹೂಡಿಬಿಡುತ್ತಾರೆ. ಎಷ್ಟೋ ಸಂಪುಗಳು ಕಾರ್ಮಿಕರಿಗೆ ಹಿತಮಾಡುವುದಕ್ಕಿಂತ ಹಾನಿಯನ್ನೇ ಎಸಗಿವೆಯೆಂಬುದು ನನ್ನ ಅನುಭವ. ಮುಂಬಯಿಯ ಮುಷ್ಕರ, ಟಾಟಾ ಉಕ್ಕಿನ ಕಾರ್ಖಾನೆಯ ಸಂಪು ಮತ್ತು ಪಂಜಾಬಿನ ರೈಲ್ವೆ ಕೆಲಸಗಾರರ ಪ್ರಸಿದ್ಧ ಸಂಪು—ಇವನ್ನು ನನ್ನ ಕೈಲಾದಮಟ್ಟಿಗೆ ಅಭ್ಯಸಿಸಿದೇನೆ. ಇವೆಲ್ಲ ಸಂಪುಗಳಲ್ಲಿಯೂ ಒಂದು ದೋಷ ವಿತ್ತು. ಕಾರ್ಮಿಕರು ತಮ್ಮ ಪಕ್ಷವನ್ನು ಪೂರಾ ಪೂರಾ ಗೆಲ್ಲಲಿಲ್ಲ. ಕಾರಣ ವೇನು? ಕಾರ್ಮಿಕರ ನಾಯಕತ್ವ ಕೆಟ್ಟದಾಗಿದೆ. ಎರಡು ಬಗೆಯ ನಿಮ್ಮ ನಾಯಕರಲ್ಲಿ ನೀವು ಅಂತರವನ್ನು ಪರಿಗಣಿಸಬೇಕು. ನಿಮ್ಮಿಂದ ಬಂದ ನಾಯಕರೂ ನಿಮ್ಮಲ್ಲಿ ಇದಾರೆ, ಅವರ ಸಲಹೆಗಾರರಾಗಿರುವ ತಾವೇ ಸ್ವತಃ ಕಾರ್ಮಿಕರಲ್ಲದ, ಕಾರ್ಮಿಕರ ಸಹಾನುಭೂತಿಪರರಾದ ಅಥವಾ ಕಾರ್ಮಿಕರ ಬಗೆಗೆ ಸಹಾನುಭೂತಿಪರರೆಂದು ನಿರೀಕ್ಷಿಸಲ್ಪಟ್ಟ ನಾಯಕರೂ ಇದಾರೆ. ಇವರೆಲ್ಲರಲ್ಲೂ ಪೂರ್ಣ ಸಾಮರಸ್ಯವಿಲ್ಲದೆ ಹೋದರೆ ಸೋಲು ಕಟ್ಟಿಟ್ಟದ್ದೇ. ಈ ನಾಲ್ಕೂ ಸಂಪುಗಳಲ್ಲಿ ಇಂಥ ಪೂರ್ಣ ಸಾಮರಸ್ಯ ಇರಲಿಲ್ಲ. ಇನ್ನೂ ಒಂದು ಪ್ರಬಲ ಕಾರಣವನ್ನು ನಾ ಕಂಡುಕೊಂಡೆ. ಕಾರ್ಮಿಕರು ತಮ್ಮ ನಿರ್ವಾಹಕ್ಕೆ ಸಂಘಗಳಿಂದ ಆರ್ಥಿಕ ಸಹಾಯ ನಿರೀಕ್ಷಿಸುತ್ತಾರೆ. ತಮ್ಮ ಸಂಘಗಳ ಹಣಕಾಸಿನ ಆಧಾರವನ್ನು ಅವಲಂಬಿಸಿ ಯಾವ ಕಾರ್ಮಿಕರೂ ಸಂಪನ್ನು ಅನಿರ್ದಿಷ್ಟಕಾಲ ಮುಂದುವರಿಸುವುದು ಸಾಧ್ಯವಿಲ್ಲ. ಅನಿರ್ದಿಷ್ಟಕಾಲ ಹೂಡದ ಯಾವ ಸಂಪೂ ಪೂರಾ ಯಶಸ್ವಿಯಾಗುವುದೂ ಸಾಧ್ಯವಿಲ್ಲ. ನಾನು ನಡೆಸಿರುವ

ಎಲ್ಲ ಸಂಪುಗಳಲ್ಲೂ ಕಾರ್ಮಿಕರು ಸ್ವಾವಲಂಬಿಗಳಾಗಿಯೇ ನಿಲ್ಲಬೇಕು ಎಂಬ ಅನಿವಾರ್ಯ ಷರತ್ತೊಂದನ್ನು ಯಾವಾಗಲೂ ಹಾಕಿಯೇ ಇದೇನೆ. ಅದರಲ್ಲೇ ಗೆಲುವಿನ ಗುಟ್ಟು ಅಡಗಿರುವುದು, ನಿಮ್ಮ ಶಿಕ್ಷಣವೂ ಅದರಲ್ಲೇ. ನೀವು ಒಬ್ಬ ಒಡೆಯನಿಗೆ ಸೇವೆ ಸಲ್ಲಿಸಿ ನಿಮ್ಮ ದುಡಿಮೆಗೆ ಯೋಗ್ಯವಾದ ನಿರ್ದಿಷ್ಟ ವೇತನ ಪಡೆಯಬೇಕಾದರೆ, ಆ ವೇತನವನ್ನು ಎಲ್ಲೇ ಆಗಲಿ ಪಡೆಯುವ ಅರ್ಹತೆ ಪಡೆಯಬೇಕಾದರೆ ಇದನ್ನು ಕಂಡುಕೊಳ್ಳಬೇಕು. ಆದುದರಿಂದ ಮುಷ್ಕರ ಕಾರರು ಸೋಮಾರಿಗಳಾಗಿದ್ದು ಗೆಲುವು ಪಡೆಯುವುದನ್ನು ನಿರೀಕ್ಷಿಸಬಾರದು. ನಿಮ್ಮ ಪ್ರಯತ್ನ ನ್ಯಾಯವಾಗಿರಬೇಕು. 'ಕರಿ ಕುರಿಗಳು' ಎಂದು ನೀವು ಕರೆಯುವವರನ್ನು ನೀವು ಒತ್ತಾಯಪಡಿಸಬಾರದು. ಹಾಗೆ ನಿಮ್ಮ ಸಹಕಾರ್ಮಿಕ ರನ್ನು ಒತ್ತಾಯಪಡಿಸುವ ಯಾವುದೇ ಪ್ರಯತ್ನ ನಿಮ್ಮ ಮೇಲೇ ಎರಗಿ ಬಂದೀತು. ಹೀಗೆ ಈ ಮೂರೂ ಷರತ್ತುಗಳು ಪೂರೈಕೆಯಾದರೆ ಯಾವ ಸಂಪೂ ವಿಫಲವಾಗಬೇಕಿಲ್ಲವೆಂದು ನಿಮ್ಮ ಸಲಹೆಗಾರರು ಹೇಳಿಯಾರೆಂದು ನಂಬುತ್ತೇನೆ. ಆದರೆ ಅದೇ ಕಾಲಕ್ಕೆ ಸಂಪು ಹೂಡುವ ಮುನ್ನ ನೂರು ಸಲ ವಿಚಾರಮಾಡಬೇಕಾದ ಅಗತ್ಯವನ್ನೂ ಅವರು ತೋರಿಸಿಕೊಡಬೇಕು. ನಿಮ್ಮ ಹಕ್ಕುಗಳು ಹಾಗೂ ಅವನ್ನು ದೊರಕಿಸಿಕೊಳ್ಳಬೇಕಾದ ವಿಧಾನದ ವಿಷಯಕ್ಕೆ ಇಷ್ಟು ಸಾಕು. ಕಾ ಕರು ಸಂಘಟಿತರಾದಂತೆಲ್ಲ ಸಂಪುಗಳು ಎಲ್ಲೋ ಅಲ್ಲೊಂದು ಇಲ್ಲೊಂದು ಗೊಂದು ಈಗೊಂದು ಆಗಬೇಕು. ನಿಮ್ಮ ಮಾನಸಿಕ, ನಾಂಘಿಕ ಬೆಳವಣಿಗೆ ಹುಂಬರಿದಂತೆಲ್ಲ ಪಂಚಾಯಿತಿಯ ತತ್ತ್ವ ಸಂಪಿನ ತತ್ತ್ವದ ಸ್ಥಳ ಆಕ್ರಮಿಸಬೇಕು. ಅಂಥ ಸ್ಥಿತಿ ಮುಟ್ಟುವ ಕಾಲ ಈಗ ಒದಗಿವೆ.೧೩೦

* * * *

ಭಾರತದ ಎದುರು ಎರಡು ಹಾದಿಗಳಿವೆ: ಪಾಶ್ಚಿಮಾತ್ಯರ "ದಂಡವೇ ದೊರೆ" ಎಂಬ ತತ್ತ್ವವನ್ನು ತರುವುದು ಅಥವಾ ಸತ್ಯವೇ ಗೆಲುವುದು, ಸತ್ಯಕ್ಕೆ ಚ್ಯುತಿಯಿಲ್ಲ, ನ್ಯಾಯ ಪಡೆಯುವ ಅಧಿಕಾರ ಬಲಿಷ್ಠರು ದುರ್ಬಲರು ಇಬ್ಬರಿಗೂ ಸಮನಾಗಿ ಇದೆ ಎಂಬ ಪೌರಸ್ತ್ಯ ತತ್ತ್ವ. ಕಾರ್ಮಿಕ ವರ್ಗದಿಂದ ಈ ಎರಡರಲ್ಲಿ ಒಂದರ ಆಯ್ಕೆ ಪ್ರಾರಂಭವಾಗಬೇಕಿದೆ. ಹಿಂಸೆಗೆ ತೊಡಗಿ ಕಾರ್ಮಿಕರು ಕೂಲಿಯಲ್ಲಿ ಹೆಚ್ಚಳ ಗಳಿಸಬೇಕೆ? ಅದು ಸಾಧ್ಯವಿದ್ದರೂ, ಅವರ ಬೇಡಿಕೆಗಳು ಎಷ್ಟೇ ನ್ಯಾಯವಾಗಿದ್ದರೂ ಅವರು ಎಂಥದೇ ಹಿಂಸೆಗೂ ತೊಡಗತಕ್ಕುದಲ್ಲ.

ಹಿಂಸೆ ಪ್ರಯೋಗಿಸಿ ಹಕ್ಕು ಸಾಧಿಸುವುದು ಮೊದಲು ಸುಲಭವಾಗಿ ತೋರ ಬಹುದು. ಆದರೆ ಕಟ್ಟಕಡೆಗೆ ಕಷ್ಟಕರವೆಂದೇ ಸಿದ್ಧವಾದೀತು. ಕತ್ತಿಯ ಬಲದಿಂದ ಬದುಕುವವರು ಕತ್ತಿಯಿಂದಲೇ ಸತ್ತಾರು. ಈಜುವವ ಎಷ್ಟೋ ವೇಳೆ ನೀರಲ್ಲಿ ಮುಳುಗಿಯೇ ಪ್ರಾಣಬಿಡುತ್ತಾನೆ. ಯೂರೋಪಿನತ್ತ ನೋಡಿ. ಅಲ್ಲಿ ಯಾರೂ ಸುಖಿಗಳಾಗಿ ಕಾಣುವುದಿಲ್ಲ, ಏಕೆಂದರೆ ಒಬ್ಬರೂ ತೃಪ್ತರಲ್ಲ. ಕಾರ್ಮಿಕ ಬಂಡವಾಳಗಾರನನ್ನು ನಂಬುವುದಿಲ್ಲ, ಬಂಡವಾಳಗಾರನಿಗೆ ಕಾರ್ಮಿಕರಲ್ಲಿ ನಂಬಿಕೆಯಿಲ್ಲ. ಇಬ್ಬರಿಗೂ ಬಲ, ಶಕ್ತಿ ಇವೆ. ಹಾಗೆ ಹೋರಿ ಗಳಿಗೂ ಬಲವಿದೆಯಲ್ಲ! ಕಟ್ಟಕಡೆತನಕ ಹೋರಾಡಿಯೇ ಹೋರಾಡುತ್ತಾರೆ. ಎಲ್ಲ ಚಲನವೂ ಪ್ರಗತಿಯಲ್ಲ. ಯೂರೋಪಿನ ಜನ ಪ್ರಗತಿಗಾಮಿಗಳಾಗಿ ದಾರೆಂದು ಭಾವಿಸಲು ಯಾವ ಕಾರಣವೂ ಇಲ್ಲ. ಅವರ ಬಳಿ ಇರುವ ಸಂಪತ್ತು ಅವರ ನೀತಿಮತ್ತೆಯ ಅಥವಾ ಆಧ್ಯಾತ್ಮಿಕ ಗುಣಗಳ ಆಧಾರವಾಗುವುದಿಲ್ಲ, ಸಂಕೇತವಲ್ಲ. ರಾಜ ದುರ್ಯೋಧನ ಹೇಳಿ ಕೇಳದಷ್ಟು ಐಶ್ವರ್ಯಕ್ಕೆ ಒಡೆಯ ನಾಗಿದ್ದ. ಅಷ್ಟಿದ್ದೂ ವಿದುರ–ಸುದಾಮರೆದುರು ಅವನು ದಟ್ಟದಿವಾಳಿ. ವಿದುರ ಸುದಾಮರನ್ನು ಇಡೀ ಲೋಕವೇ ಇಂದು ಹಾಡಿ ಹರಸುತ್ತದೆ, ದುರ್ಯೋಧನನ ಹೆಸರಾದರೊ ದ್ವೇಷಿಸಬೇಕಾದ ದುಷ್ಟಗುಣಗಳಿಗೆ ಮತ್ತೊಂದು ಹೆಸರಾಗಿ ಜನ ನೆನಸುತ್ತಾರೆ, ಅಷ್ಟೆ. ಹಾಗಾದರೆ ನಾವು ಮಾಡಬೇಕಾದುದೇನು ? ಬಂಡವಾಳ ಗಾರರು ಕಾರ್ಮಿಕರ ನಡುವಣ ಹೋರಾಟದಲ್ಲಿ ಸಾಮಾನ್ಯವಾಗಿ ಹೆಚ್ಚು ಸಂದರ್ಭಗಳಲ್ಲಿ ಬಂಡವಾಳಗಾರರೇ ಅಪರಾಧಿಸ್ಥಾನದಲ್ಲಿ ಇರುತ್ತಾರೆ. ಆದರೆ ಕಾರ್ಮಿಕವರ್ಗ ತನ್ನ ಶಕ್ತಿಯನ್ನು ಮನಗಂಡ ಬಳಿಕ ಅದು ಬಂಡವಾಳವರ್ಗ ಕ್ಕಿಂತ ಹೆಚ್ಚು ದಬ್ಬಾಳಿಕೆಕೋರವಾಗಬಹುದೆಂದು ನಾ ಬಲ್ಲೆ. ಗಿರಣಿಗಳ ಒಡೆಯರು ಕಾರ್ಮಿಕರು ಹಾಕಿದ ಹಾದಿಯಲ್ಲಿ ಹೋಗಬೇಕಾದೀತು, ಕಾರ್ಮಿಕ ರಿಗೆ ಒಡೆಯರಷ್ಟು ಬುದ್ಧಿ ಬಂದುದಾದರೆ. ಆದರೆ ಕಾರ್ಮಿಕ ವರ್ಗ ಅಂಥ ಬುದ್ಧಿವಂತಿಕೆಯನ್ನು ಎಂದೂ ಪಡೆಯದೆಂಬುದು ಸ್ಪಷ್ಟವೇ. ಅದನ್ನು ಪಡೆದುದಾದರೆ ಕಾರ್ಮಿಕವರ್ಗ ಕಾರ್ಮಿಕವರ್ಗವಾಗಿ ಉಳಿಯದು, ತನ್ನ ಒಡೆಯ ತಾನೇ ಆದೀತು. ಬಂಡವಾಳಗಾರರು ಕೇವಲ ದುಡ್ಡಿನ ಬಲದಿಂದಲೇ ಹೋರಾಡುವುದಿಲ್ಲ. ಅವರ ಬಳಿ ಬುದ್ಧಿಶಕ್ತಿ, ಚಾತುರ್ಯಗಳೂ ಇವೆ.

ನಮ್ಮೆದುರಿನ ಪ್ರಶ್ನೆ ಇದು : ಹೀಗಿರುವ ಕಾರ್ಮಿಕರು ಒಂದು ಮಟ್ಟದ ಪ್ರಜ್ಞೆಯನ್ನು ಪಡೆದುಕೊಂಡ ಬಳಿಕ ಅವರು ಯಾವುದಕ್ಕಾಗಿ ಹೋರಾಡ

ಬೇಕು? ಕಾರ್ಮಿಕರು ಕೇವಲ ತಮ್ಮ ಸಂಖ್ಯೆ ಅಥವಾ ಹಿಂಸೆಯನ್ನು ಅವಲಂಬಿಸಿದುದಾದರೆ ಆತ್ಮಘಾತುಕವಾದೀತು. ಹಾಗೆ ಮಾಡಿದರೆ ತಮ್ಮ ರಾಷ್ಟ್ರದ ಉದ್ಯೋಗಗಳಿಗೆ ಅವರು ಹಾನಿ ಉಂಟುಮಾಡಿದಂತೆ. ಅದರ ಬದಲಾಗಿ ವಿಶುದ್ಧ ನ್ಯಾಯದ ಪಕ್ಷ ಹಿಡಿದು ನಿಂತು, ಅದಕ್ಕಾಗಿ ತಾವೇ ಕಷ್ಟ ಸಹಿಸತೊಡಗಿದರೆ ಅವರು ಗೆಲ್ಲುವುದಷ್ಟೇ ಅಲ್ಲ, ತಮ್ಮ ಒಡೆಯರನ್ನೂ ಸುಧಾರಿಸಿಯಾರು, ಉದ್ಯಮಗಳನ್ನೂ ಅಭಿವೃದ್ಧಿಪಡಿಸಿಯಾರು, ಒಡೆಯರೂ ದುಡಿಮೆಗಾರರೂ ಒಂದೇ ಕುಟುಂಬದ ಸದಸ್ಯರಂತಾದಾರು. ಕಾರ್ಮಿಕರ ಸ್ಥಿತಿಗತಿಯ ಸಮರ್ಪಕ ಪರಿಹಾರವೆಂದರೆ ಅದರಲ್ಲಿ ಇವೆಲ್ಲ ಅಡಕವಾಗಿರಬೇಕು:

೧. ದುಡಿಮೆಯ ಘಂಟೆಗಳು ದುಡಿಮೆಗಾರರಿಗೆ ಕೆಲವು ಘಂಟೆ ಬಿಡುವು ಒದಗಿಸುವಂತೆ ಇರಬೇಕು.

೨. ತಮ್ಮ ಶಿಕ್ಷಣಕ್ಕೆ ಅವರಿಗೆ ಸೌಕರ್ಯ ಸಿಗಬೇಕು.

೩. ಸಾಕಷ್ಟು ಹಾಲಿನ ಪೂರೈಕೆ, ಬಟ್ಟೆ ಹಾಗೂ ಅವರ ಮಕ್ಕಳಿಗೆ ಆವಶ್ಯಕ ಶಿಕ್ಷಣದ ವ್ಯವಸ್ಥೆಯಾಗಬೇಕು.

೪. ಕೆಲಸಗಾರರಿಗೆ ಆರೋಗ್ಯಕರ ವಸತಿ ವ್ಯವಸ್ಥೆಯಾಗಬೇಕು.

೫. ತಮ್ಮ ಮುಪ್ಪಿನ ಕಾಲದಲ್ಲಿ ತಮ್ಮ ನಿರ್ವಾಹಕ್ಕಾಗಿ ಸಾಕಷ್ಟು ಉಳಿಸಿಕೊಳ್ಳುವ ಸ್ಥಿತಿಯಲ್ಲಿ ಅವರಿರಬೇಕು.

ಇಂದು ಇವಾವ ಷರತ್ತೂ ಪೂರೈಕೆಯಾಗುತ್ತಿಲ್ಲ. ಇದಕ್ಕೆ ಎರಡೂ ವರ್ಗ ಹೊಣೆ. ಒಡೆಯರಿಗೆ ದುಡಿಸಿಕೊಳ್ಳುವುದೊಂದೇ ಗಮನ. ದುಡಿಮೆಗಾರರ ಗತಿ ಏನಾದರೇನು, ಅವರಿಗೆ ಪರಿವೆ ಇಲ್ಲ. ಆದಷ್ಟು ಕಡಿಮೆ ಕೊಟ್ಟು ಆದಷ್ಟು ಹೆಚ್ಚು ದುಡಿಸಿಕೊಳ್ಳುವುದರತ್ತವೇ ಅವರ ಸರ್ವಪ್ರಯತ್ನವೂ. ಕಾರ್ಮಿಕನೋ ಆದಷ್ಟು ಕಡಿಮೆ ದುಡಿದು ಆದಷ್ಟು ಹೆಚ್ಚು ಹಣ ಗಿಟ್ಟಿಸಿಕೊಳ್ಳಲು ಬೇಕಾದ ಉಪಾಯವನ್ನೆಲ್ಲ ಹೂಡುತ್ತಾನೆ. ಫಲಿತಾಂಶ: ಕಾರ್ಮಿಕನಿಗೆ ಬಡ್ತಿ ಸಿಕ್ಕರೂ ಕೆಲಸವೇನು ಉತ್ತಮವಾಗುವುದಿಲ್ಲ. ಎರಡೂ ವರ್ಗಗಳ ನಡುವಣ ಸಂಬಂಧ ವಿರುದ್ಧಗೊಳ್ಳುವುದಿಲ್ಲ. ಕಾರ್ಮಿಕನೂ ತನಗೆ ಸಿಕ್ಕ ಬಡ್ತಿಯನ್ನೂ ಸದುಪಯೋಗಪಡಿಸುವುದಿಲ್ಲ.

ಈ ಎರಡೂ ವರ್ಗಗಳ ನಡುವೆ ಮೂರನೆಯದೊಂದು ಪಕ್ಷ ಹುಟ್ಟಿ ಕೊಂಡಿದೆ. ಅದು ಕಾರ್ಮಿಕನ ಹಿತೈಷಿ ಪಕ್ಷ. ಅಂಥ ಪಕ್ಷವೊಂದು ಬೇಕು. ಕಾರ್ಮಿಕರ ಬಗೆಗೆ ಅನಾಸಕ್ತ ಮೈತ್ರಿ ಇದಕ್ಕೆ ಇರುವಷ್ಟರಮಟ್ಟಿಗೆ ಅದು ಅವರ ಗೆಳೆತನ ಬೆಳೆಸುವುದು ಸರಿ.

ಕಾರ್ಮಿಕರನ್ನು ಅನೇಕ ಬಗೆಯಲ್ಲಿ ಕೈಗೊಂಬೆಗಳಾಗಿ ಬಳಸುವ ಪ್ರಯತ್ನ ಮಾಡುವಂಥ ವೇಳೆ ಈಗ ಬಂದಿದೆ. ಪಕ್ಷೀಯ ರಾಜಕಾರಣದಲ್ಲಿ ಭಾಗವಹಿಸುವವರು ಇದನ್ನು ಪರಿಶೀಲಿಸಬೇಕು. ಅವರು ಏನನ್ನು ಆರಿಸಿ ಕೊಂಡಾರು ? ಸ್ವಹಿತವನ್ನೋ ಅಥವಾ ಕಾರ್ಮಿಕರ ಸೇವೆ ಹಾಗೂ ರಾಷ್ಟ್ರಸೇವೆ ಯನ್ನೋ? ಕಾರ್ಮಿಕರಿಗೆ ಗೆಳೆಯರು ಅತ್ಯಗತ್ಯವಾಗಿ ಬೇಕಾಗಿದ್ದಾರೆ. ಮಾರ್ಗದರ್ಶನವಿಲ್ಲದೆ ಮುಂಬರಿಯಲೇ ಆರರು. ಈ ಮಾರ್ಗದರ್ಶನ ಮಾಡುವವರು ಯಾರು ಎಂಬುದು ಕಾರ್ಮಿಕರ ಸ್ಥಿತಿಯನ್ನು ನಿರ್ಧರಿಸೀತು.

ಸಂಪುಗಳು, ಕೆಲಸ ನಿಲ್ಲಿಸುವುದು ಹಾಗೂ ಹರತಾಳ ಅದ್ಭುತ ಸಂಗತಿ ಗಳು, ನಿಸ್ಸಂಶಯ; ಆದರೆ ಅವುಗಳ ದುರುಪಯೋಗವೂ ಕಠಿಣವಲ್ಲ. ಕೆಲಸ ಗಾರರು ಬಲಿಷ್ಠ ಸಂಘಗಳಲ್ಲಿ ಸಂಘಟಿತರಾಗಬೇಕು. ಏನೇ ಬಂದರೂ ಸಂಘಗಳ ಸಮ್ಮತಿಯಿಲ್ಲದೆ ಅವರು ಸಂಪು ಹೂಡತಕ್ಕದ್ದಲ್ಲ. ಕಾರ್ಖಾನೆಗಳ ಒಡೆಯರೊಡನೆ ಮೊದಲು ಸಂಧಾನ ನಡೆಸದೆ ಸಂಪಿಗೆ ಎಳಸತಕ್ಕದ್ದಲ್ಲ. ಒಡೆಯರು ಮಧ್ಯಸ್ಥಿಕೆಗೆ ಒಪ್ಪಿದರೆ ಪಂಚಾಯಿತಿಯ ತತ್ತ್ವವನ್ನು ಅಂಗೀಕರಿಸ ಬೇಕು. ಪಂಚರನ್ನು ನೇಮಿಸಿಕೊಂಡಮೇಲೆ ಅವರ ತೀರ್ಪು ಹಿಡಿಸಲಿ ಬಿಡಲಿ ಎರಡೂ ಪಕ್ಷ ಅದನ್ನು ಸ್ವೀಕರಿಸಲೇಬೇಕು.

ಓನುಗರೇ, ಕಾರ್ಮಿಕರ ಸ್ಥಿತಿಗತಿಗಳನ್ನು ಸುಧಾರಿಸಲು ನಿಮಗೆ ಆಸಕ್ತಿ ಇದ್ದರೆ, ಕಾರ್ಮಿಕರ ಗೆಳೆತನವನ್ನು ಬೆಳೆಸಿ ಅವರಿಗೆ ಸೇವೆ ಸಲ್ಲಿಸಲು ನೀವು ಬಯಸುವಿರಾದರೆ ನಿಮ್ಮೆದುರು ಒಂದೇ ಒಂದು ರಾಜಮಾರ್ಗವಿದೆಯೆಂಬುದು ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ. ಒಡೆಯ–ಕಾರ್ಮಿಕರ ನಡುವೆ ಕುಟುಂಬದ ಬಾಂಧವ್ಯ ಕಲ್ಪಿಸಿ ಕಾರ್ಮಿಕರನ್ನು ಮೇಲಕ್ಕೆತ್ತುವುದೇ ಆ ಮಾರ್ಗ. ಈ ಗುರಿ ಸಾಧಿಸಲು ಸತ್ಯದಂಥ ಪಥಕ್ಕಿಂತ ಬೇರೊಂದಿಲ್ಲ. ಕೇವಲ ಕೂಲಿಯ ಹೆಚ್ಚಳದಿಂದ ನೀವು ತೃಪ್ತರಾಗಬಾರದು; ಯಾವ ಮಾರ್ಗದಿಂದ

ಅದನ್ನು ಅವರು ಗಳಿಸುತ್ತಾರೆ, ಹೇಗೆ ಅದನ್ನು ಬಳಸುತ್ತಾರೆ ಎಂದೂ ನೀವು ಕಾಯಬೇಕು.೧೩೧

ಪಶ್ಚಿಮ ದೇಶಗಳಲ್ಲಿ ಬಂಡವಾಳ ಹಾಗೂ ಶ್ರಮಶಕ್ತಿಗಳ ನಡುವೆ ನಿರಂತರ ಸಂಘರ್ಷ ಪ್ರಾರಂಭವಾಗಿದೆ. ಒಂದು ವರ್ಗ ಮತ್ತೊಂದನ್ನು ತನ್ನ ಸಹಜಶತ್ರುವೆಂದು ಭಾವಿಸುತ್ತದೆ. ಆ ಭಾವನೆ ಭಾರತವನ್ನೂ ಪ್ರವೇಶಿಸಿದಂತೆ ತೋರುತ್ತದೆ. ಇಲ್ಲಿ ಅದಕ್ಕೆ ಶಾಶ್ವತ ನೆಲೆ ಸಿಕ್ಕಿಬಿಡುವುದಾದರೆ ನಮ್ಮ ಉದ್ಯೋಗ, ನಮ್ಮ ಶಾಂತಿ—ಇವಕ್ಕೆ ಚರಮಗೀತೆ ಹಾಡಿದಂತೆಯೇ. ಎರಡೂ ಪಕ್ಷಗಳೂ ಪರಸ್ಪರಾವಲಂಬಿಗಳೆಂದು ಮನಗಂಡುದಾದರೆ ಕಲಹಕ್ಕೆ ಕಾರಣವೇ ಇರದು.

ಬಂಡವಾಳಗಾರನ ಕರ್ತವ್ಯವನ್ನು ನಾನು ವಿಮರ್ಶಿಸಬಯಸುವುದಿಲ್ಲ. ಕಾರ್ಮಿಕ ಮಾತ್ರವೇ ತನ್ನ ಹಕ್ಕುಹೊಣೆಗಾರಿಕೆಗಳನ್ನು ಅರಿತು ಶುದ್ಧಸಾಧನಗಳಿಗೇ ಬದ್ಧನಾಗುವುದಾದರೆ ಎರಡೂ ಪಕ್ಷಕ್ಕೂ ಹಿತವೇ, ಲಾಭವೇ. ಆದರೆ ಅದಕ್ಕೆ ಎರಡು ಸಂಗತಿಗಳು ಆವಶ್ಯಕ: ಬೇಡಿಕೆಗಳೂ, ಅವನ್ನು ಪಡೆಯುವ ವಿಧಾನವೂ ನ್ಯಾಯವಾಗಿರಬೇಕು, ಸ್ಪಷ್ಟವಾಗಿರಬೇಕು. ಬಂಡವಾಳಗಾರನ ಸ್ಥಿತಿಯ ದುರ್ಲಾಭವನ್ನು ಪಡೆಯುವ ಬೇಡಿಕೆ ಅಕ್ರಮ ಬೇಡಿಕೆ. ಆದರೆ ತನ್ನ ನಿರ್ವಾಹಕ್ಕೆ ಸಾಕಾಗುವಷ್ಟು ಮತ್ತು ತನ್ನ ಮಕ್ಕಳುಮರಿಯನ್ನು ಯೋಗ್ಯವಾದ ರೀತಿಯಲ್ಲಿ ಸುಶಿಕ್ಷಿತರನ್ನಾಗಿಸಲು ಸಾಕಷ್ಟು ವೇತನ ಕೇಳುವ ಕಾರ್ಮಿಕನದು ನಿಜಕ್ಕೂ ಕ್ರಮಬದ್ಧ ಬೇಡಿಕೆಯೇ. ಹಿಂಸೆಗೆ ತೊಡಗದೆ, ಬಂಡವಾಳಗಾರರ ಸದ್ಬುದ್ಧಿಗೆ ಬಿನ್ನವಿಸಿಕೊಂಡು ಪಂಚಾಯಿತಿಯ ಮೂಲಕ ನ್ಯಾಯಕ್ಕಾಗಿ ವ್ಯವಹರಿಸುವುದು ಕ್ರಮಬದ್ಧ ಮಾರ್ಗ.

ಸಂಪು (ಮುಷ್ಕರ)—ಕೆಲಸಗಾರರು ನ್ಯಾಯ ಪಡೆಯುವ ಸ್ವಭಾವಸಿದ್ಧ ಹಕ್ಕೆಂಬುದನ್ನು ಬಲ್ಲೆ. ಬಂಡವಾಳಗಾರರು ಪಂಚಾಯಿತಿಯ ತತ್ತ್ವವನ್ನು ಒಪ್ಪಿಕೊಂಡ ಕೂಡಲೇ ಸಂಪನ್ನು ದುಷ್ಕೃತ್ಯವೆಂದು ಭಾವಿಸಬೇಕು. ವೇತನಗಳು ಹೆಚ್ಚುತ್ತಿವೆ, ಅವುಗಳ ನಿರಂತರ ಹೆಚ್ಚಳದ ಸಂಭವವೂ ಇದೆ. ಆದರ ಜತೆಗೇ ದುಡಿಮೆಯ ಕಾಲವನ್ನು ಕಡಿಮೆ ಮಾಡುವ ಅಗತ್ಯವೂ ಇದೆ. ಗಿರಣಿಯ ಕೆಲಸಗಾರರು ಹನ್ನೆರಡು ಗಂಟೆಗಳಿಗಿಂತ ಹೆಚ್ಚು ದುಡಿಯುವಂತೆ ತೋರುತ್ತದೆ. ದಿನಕ್ಕೆ ಅಷ್ಟೊಂದು ಹೊತ್ತು ದುಡಿಯುವವರ ಮಾನಸಿಕ,

ನೈತಿಕ ಉನ್ನತಿಗೆ ಸಮಯವೇ ಸಿಗದು. ಆದುದರಿಂದ ಈ ಷರತ್ತನ್ನು ಅತಿ ಕನಿಷ್ಠ ಮಿತಿಗೆ ಇಳಿಸಬೇಕು. ಅಪಾಯವನ್ನು ತಪ್ಪಿಸಿಕೊಳ್ಳುವುದೇನೋ ನಮ್ಮ ಧರ್ಮ, ಆದರೆ ನಾವು ಹಾಕುವ ಹೆಜ್ಜೆಹೆಜ್ಜೆಯಲ್ಲೂ ನಮ್ಮ ಉದ್ಯಮಗಳಿಗೆ ಹಾನಿಯೊದಗದಂತೆ ಕಾಯ್ದುಕೊಳ್ಳಬೇಕು.

ಗಿರಣಿಯ ಕೆಲಸಗಾರರು ಸೋಮಾರಿಗಳು, ತಮ್ಮ ಕೆಲಸಕ್ಕೆ ಪೂರಾ ಸಮಯ, ಲಕ್ಷ್ಯ ಕೊಡರು, ಎಂದು ನನಗೆ ಹೇಳುತ್ತಾರೆ ಗಿರಣಿ ಒಡೆಯರು. ದಿನಕ್ಕೆ ಹನ್ನೆರಡು ಗಂಟೆಕಾಲ ದುಡಿಯಬೇಕಾಗಿರುವವರಿಂದ ನಾನಂತೂ ಲಕ್ಷ್ಯವನ್ನಾಗಲಿ ಏಕಾಗ್ರತೆಯನ್ನಾಗಲಿ ನಿರೀಕ್ಷಿಸಲಾರೆ. ಅದನ್ನು ಹತ್ತು ಗಂಟೆಕಾಲಕ್ಕೆ ಇಳಿಸಿದರೆ ಬಹುಶಃ ಕೆಲಸಗಾರರು ಉತ್ತಮವಾಗಿ ಹಾಗೂ ಹನ್ನೆರಡು ಗಂಟೆಕಾಲದಲ್ಲೇ ಮಾಡುತ್ತಿದ್ದಷ್ಟು ಕೆಲಸವನ್ನು ಮಾಡಿಯಾರೆಂದು ನನ್ನ ಪ್ರಬಲ ಆಸೆ. ಕೆಲಸದ ಹೊತ್ತನ್ನು ಕಡಿಮೆ ಮಾಡಿದುದರಿಂದ ಇಂಗ್ಲೆಂಡಿನಲ್ಲಿ ಒಳ್ಳೆಯ ಫಲಿತಾಂಶ ಉಂಟಾಗಿದೆ. ಗಿರಣಿಪತಿಗಳ ಹಿತವೇ ತಮ್ಮ ಹಿತ ಎಂದು ಗಿರಣಿಗಳ ಕೆಲಸಗಾರರು ತಿಳಿದುದಾದರೆ ಅವರೂ ಮೇಲೇರಬಹುದು, ಅವರೊಂದಿಗೆ ನಮ್ಮ ದೇಶದ ಉದ್ಯಮಗಳೂ ಮೇಲಕ್ಕೆ ಬಂದಾವು. ಆದುದರಿಂದ ಕೆಲಸದ ಹೊತ್ತನ್ನು ಹತ್ತು ಗಂಟೆಗಳಿಗೆ ಇಳಿಸಿ ಎಂದು ಗಿರಣಿಗಳ ಒಡೆಯರಿಗೆ ನಾನು ಆಗ್ರಹಪಡಿಸುತ್ತೇನೆ, ಹನ್ನೆರಡು ಗಂಟೆಗಳಲ್ಲಿ ಮಾಡುತ್ತಿದ್ದ ಕೆಲಸವನ್ನು ಹತ್ತೇ ಗಂಟೆಗಳಲ್ಲಿ ಮಾಡಿರೆಂದು ದುಡಿಮೆಗಾರರನ್ನೂ ಆಗ್ರಹ ಪಡಿಸುತ್ತೇನೆ.

ಹೆಚ್ಚಿದ ಸಂಬಳ ಹಾಗೂ ಬಿಡುವಿನ ಹೊತ್ತನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ವಿಚಾರಮಾಡುವ ಸಮಯ ಈಗ ಬಂದಿದೆ. ಹೆಚ್ಚಿನ ಕೂಲಿಯನ್ನು ಪಡಖಾನೆಗಳಲ್ಲೂ ಬಿಡುವಿನ ವೇಳೆಯನ್ನು ಜೂಜಿನ ಕಟ್ಟೆಯಲ್ಲಿಯೂ ಹಾಳುಮಾಡುವುದಾದರೆ ಹುರಿವ ಬಾಣಲೆಯಿಂದ ಉರಿವ ಬೆಂಕಿಗೆ ಬಿದ್ದಂತೆಯೇ ಸರಿ. ಬಂದ ಹಣವನ್ನು ನಮ್ಮ ಮಕ್ಕಳ ಶಿಕ್ಷಣಕ್ಕೆ ಉಪಯೋಗಿಸಬೇಕು, ಬಿಡುವನ್ನು ನಮ್ಮ ಶಿಕ್ಷಣಕ್ಕೆ ಬಳಸಿಕೊಳ್ಳಬೇಕು. ಈ ಎರಡೂ ಕೆಲಸಗಳಲ್ಲಿ ಗಿರಣಿಗಳ ಒಡೆಯರು ಬೇಕಾದಷ್ಟು ನೆರವಾಗಬಹುದು. ಕೆಲಸಗಾರರಿಗಾಗಿ ಅವರು ಅಗ್ಗದ ಬೆಲೆಯ ಉಪಾಹಾರಗೃಹಗಳನ್ನು ತೆರೆಯಬಹುದು. ಅಲ್ಲಿ ಶುದ್ಧವಾದ ಹಾಲನ್ನೂ, ಪುಷ್ಟಿಕರವಾದ ತಿಂಡಿತಿನಸನ್ನೂ

ಅವರಿಗೆ ಸಿಗುವಂತೆ ಮಾಡಬಹುದು. ವಾಚನಾಲಯಗಳನ್ನು ತೆರೆಯಬಹುದು, ಹಾನಿಕರವಲ್ಲದ ಮನೋರಂಜನೆ ಹಾಗೂ ಆಟಪಾಟಗಳಿಗೆ ಏರ್ಪಾಟುಮಾಡಬಹುದು. ಅಂಥ ಆರೋಗ್ಯದಾಯಕ ಸನ್ನಿವೇಶ ಕಲ್ಪಿಸಿದರೆ ಕುಡಿತದ, ಜೂಜಿನ ಚಟ ಬಿಟ್ಟುಹೋದೀತು. ಕಾರ್ಮಿಕ ಸಂಘಗಳೂ ಇಂಥ ಪ್ರಯತ್ನ ಕೈಗೊಳ್ಳಬೇಕು. ಇಂಥ ಉನ್ನತಿಯ ಪ್ರಯತ್ನ ಬಂಡವಾಳಗಾರರೊಡನೆ ಹೋರಾಡುವುದಕ್ಕಿಂತ ಉತ್ತಮ ಕೆಲಸ.

ಸಣ್ಣ ಮಕ್ಕಳನ್ನು ಶಾಲೆ ಬಿಡಿಸಿ ಕೂಲಿ ಕೆಲಸಕ್ಕೆ ಹಚ್ಚುವುದು ರಾಷ್ಟ್ರದ ಅಧಃಪತನದ ಸಂಕೇತ. ತನ್ನ ಮಕ್ಕಳನ್ನು ಯಾವುದೇ ಯೋಗ್ಯ ರಾಷ್ಟ್ರ ಹಾಗೆ ದುರುಪಯೋಗಪಡಿಸತಕ್ಕುದಲ್ಲ. ಕನಿಷ್ಠ ಹದಿನಾರನೆಯ ವರ್ಷದ ವರೆಗಾದರೂ ಅವರನ್ನು ಶಾಲೆಗಳಲ್ಲೇ ಇಟ್ಟಿರಬೇಕು. ಹಾಗೆಯೇ ಗಿರಣಿ ಕೆಲಸದಿಂದ ಹೆಂಗಸರನ್ನೂ ಹಿಂತೆಗೆದುಕೊಳ್ಳಬೇಕು. ಸ್ತ್ರೀಪುರುಷರಿಬ್ಬರೂ ಜೀವನದಲ್ಲಿ ಜೊತೆಗಾರರು, ಪರಸ್ಪರ ಪೂರಕರು ಎಂದಾದರೆ ಅವರಿಬ್ಬರೂ ತಮ್ಮತಮ್ಮಲ್ಲಿ ಹಂಚಿಕೊಂಡರೇ ಅವರು ಸದ್ಗೃಹಸ್ಥರಾಗುತ್ತಾರೆ; ಬುದ್ಧಿವಂತಳೂ ವಿವೇಕಿಯೂ ಆದ ತಾಯಿ ತನ್ನ ಮನೆಗೆಲಸ ಹಾಗೂ ಮಕ್ಕಳ ಪಾಲನೆಪೋಷಣೆಯಲ್ಲಿ ತನ್ನ ಸಮಯವೆಲ್ಲ ವಿನಿಯೋಗಿಸಿಯಾಳು. ಆದರೆ ಗಂಡಹೆಂಡತಿ ಇಬ್ಬರೂ ಕೇವಲ ಬದುಕಿಗಾಗಿ ದುಡಿಯಬೇಕಾಗಿ ಬಂದರೆ ಆ ರಾಷ್ಟ್ರ ಕೆಳಗೆ ಬೀಳಲೇಬೇಕು. ಅದು, ತನ್ನ ಬಂಡವಾಳವನ್ನೇ ತಿಂದು ಮುಗಿಸುತ್ತಿರುವ ದಿವಾಳಿಯ ಸ್ಥಿತಿಯಂತೆ.

ತಾವೂ ತಮ್ಮ ಮಕ್ಕಳೂ ಶಿಕ್ಷಣ ಪಡೆದು ತಮ್ಮ ಬುದ್ಧಿಯನ್ನು ಅಭಿವೃದ್ಧಿಪಡಿಸಿಕೊಳ್ಳಬೇಕಾಗಿರುವಂತೆಯೇ ಕಾರ್ಮಿಕರು ತಮ್ಮ ನೀತಿಮತ್ತೆಯನ್ನು ಬೆಳೆಸಿಕೊಳ್ಳಬೇಕಾದುದೂ ಅಗತ್ಯ. ನೀತಿಮತ್ತೆ ಬೆಳೆಸುವುದೆಂದರೆ ಧಾರ್ಮಿಕದೃಷ್ಟಿ ಬೆಳೆಸಿಕೊಳ್ಳುವುದು ಎಂದು. ದೇವರಲ್ಲಿ ನಿಜವಾದ ಶ್ರದ್ಧೆ ಇಟ್ಟುಕೊಂಡು, ಧರ್ಮದ ನಿಜವಾದ ಲಕ್ಷಣವನ್ನು ಅರಿತುಕೊಂಡಿರುವವರೊಡನೆ ಲೋಕ ಕಾದಾಡದು. ಹಾಗೇನಾದರೂ ಆದರೆ ಅಂಥವರು ಇದಿರಾಳಿಯ ಕ್ರೋಧವನ್ನು ತಮ್ಮ ಮಾರ್ದವದಿಂದ ಪರಿವರ್ತಿಸಿಯಾರು. ಇಲ್ಲಿ ಧರ್ಮ ಎಂದರೆ ಕೇವಲ ನಮಾಜು ಮಾಡುವುದೆಂದಾಗಲಿ ದೇವಾಲಯಕ್ಕೆ ಹೋಗಿ ಬರುವುದೆಂದಾಗಲಿ ಅಲ್ಲ. ಧರ್ಮವೆಂದರೆ ಭಗವದ್ಜ್ಞಾನ. ನೇಯುವ

ಕಲೆಯನ್ನು ಕಲಿಯದೆ ಯಾರೂ ನೇಕಾರನಾಗಲಾರ. ಅಂತೆಯೇ ಕೆಲವೊಂದು ನಿಯಮಗಳನ್ನು ಪಾಲಿಸದೆ ಯಾರೂ ತನ್ನನ್ನು ತಾನೇ ಅರಿಯಲಾರ. ಇವುಗಳಲ್ಲಿ ಸಾರ್ವದೇಶಿಕವಾಗಿ ಆಚರಿಸಬೇಕಾದಂಥವು ಮೂರು.

ಮೊದಲನೆಯದು ಸತ್ಯಪಾಲನೆ. ಸತ್ಯ ನುಡಿಯುವುದೆಂದರೆ ಏನೆಂದು ತಿಳಿಯದವ ಖೋಟಾ ನಾಣ್ಯದಂತೆ, ಬೆಲೆ ಇಲ್ಲದವ.

ಎರಡನೆಯದು ಪರರ ಹಿಂಸೆ ಮಾಡದಿರುವುದು. ಪರರನ್ನು ಹಿಂಸಿಸುವವ, ಇತರರನ್ನು ಕಂಡು ಕರುಬುವವ, ಈ ಜಗತ್ತಿನಲ್ಲಿ ಬದುಕಲು ಅನರ್ಹ. ಏಕೆಂದರೆ ಇಡೀ ಜಗತ್ತು ಅವನೊಂದಿಗೆ ಸತತ ಸಮರದಲ್ಲಿ ನಿರತವಾಗಿರುತ್ತದೆ, ಅವನಿಗೋ ಜಗತ್ತಿನ ನಿತ್ಯಭಯ. ನಮ್ಮೆಲ್ಲರನ್ನೂ ಬಿಗಿದಿರುವುದು ಪ್ರೇಮದ ನಂಟು. ಪ್ರತಿಯೊಂದು ಸಜೀವ ವಸ್ತುವಿನಲ್ಲೂ ಒಂದೇ ಮಧ್ಯಬಿಂದುವಿಗೆ ಅವನ್ನು ಸೆಳೆಯುವ ಶಕ್ತಿಯೊಂದಿದೆ, ಆದರಿಂದಲೇ ಜೀವನ. ಈ ನಮ್ಮ ಭೂಮಂಡಲದಲ್ಲಿರುವ ಅಣುಗಳಲ್ಲಿ ಸ್ನಿಗ್ಧಶಕ್ತಿಯಿಲ್ಲದಿದ್ದರೆ ಇಡೀ ಭೂ-ಮಂಡಲವೇ ಚುಕ್ಕಾಚೂರಾಗಿ ಒಡೆದುಹೋಗಿ, ನಾವೆಲ್ಲ ಎಂದೋ ಇಲ್ಲದಂತೆ ಆಗಿಬಿಡುತ್ತಿದ್ದೆವೆಂದು ವಿಜ್ಞಾನಿಗಳು ಹೇಳುತ್ತಾರೆ. ಕುರುಡು ಜಡವಸ್ತುವಿನಲ್ಲಿರುವಂತೆಯೇ ಜೀವಂತ ಪ್ರಾಣಿಗಳಲ್ಲಿಯೂ ಇರಬೇಕಲ್ಲವೇ? ಜೀವಂತ ವಸ್ತುಗಳಲ್ಲಿರುವ ಆ ಸ್ನಿಗ್ಧಶಕ್ತಿಯ ಹೆಸರೇ '**ಪ್ರೇಮ**'. ತಂದೆತಾಯಿಗಳಲ್ಲಿ, ಸೋದರಸೋದರಿಯರಲ್ಲಿ, ಗೆಳೆಯರಲ್ಲಿ ನಾವು ಇದನ್ನೇ ಕಾಣುತ್ತೇವೆ. ಆ ಶಕ್ತಿಯನ್ನು ಸಮಸ್ತ ಜೀವರಾಶಿಯಲ್ಲೂ ಬಳಸುವುದನ್ನು ನಾವು ಕಲಿಯಬೇಕಾಗಿದೆ. ಆ ಪ್ರಯೋಗದಲ್ಲೇ ಭಗವಂತನ ಅರಿವು ಅಡಕವಾಗಿದೆ. ಪ್ರೇಮ ಇದ್ದೆಡೆ ಜೀವನವಿದೆ; ದ್ವೇಷ ನಾಶಕ್ಕೆ ದಾರಿ.

ನಮ್ಮ ಲಾಲಸೆಗಳನ್ನು ಗೆಲ್ಲಬೇಕು, ಇದು ಮೂರನೆಯ ನಿಯಮ. ಇದನ್ನು ಸಂಸ್ಕೃತದಲ್ಲಿ '**ಬ್ರಹ್ಮಚರ್ಯ**' ಎನ್ನುತ್ತಾರೆ. ಪ್ರಚಲಿತ ಸಂಕುಚಿತ ಅರ್ಥದಲ್ಲಿ ನಾನದನ್ನು ಬಳಸುವುದಿಲ್ಲ. ಅವಿವಾಹಿತನಾದವನು ಅಥವಾ ವಿವಾಹಿತನಾಗಿದ್ದು ಶೀಲವಂತನಾಗಿದ್ದರೂ ಬಗೆಬಗೆಯ ಭೋಗಲಾಲಸೆಗಳಿಗೆ ಬಲಿಯಾಗುವವನು '**ಬ್ರಹ್ಮಚಾರಿ**' ಅಲ್ಲ. ತನ್ನ ಎಲ್ಲ ಇಂದ್ರಿಯಗಳನ್ನೂ, ಲಾಲಸೆಗಳನ್ನೂ ಪೂರಾ ಗೆದ್ದುಕೊಂಡವನೇ ಆತ್ಮವನ್ನು ಅರಿಯಬಲ್ಲಾತ.

ವ್ಯಾಪಕ ಅರ್ಥದಲ್ಲಿ ಆತ್ಮಸಂಯಮಿಯಾದ ನಿಜವಾದ ಶ್ರದ್ಧಾಳು, ನಿಜವಾದ ಹಿಂದೂ ಅಥವಾ ನಿಜವಾದ ಮುಸಲ್ಮಾನನೂ ಬ್ರಹ್ಮಚಾರಿಯೇ.

ಶಂಕಾಶೀಲವಾದ ಮಾತು ಅಥವಾ ಅಶ್ಲೀಲ ಹಾಡು ಕೇಳುವುದೂ ಬ್ರಹ್ಮಚರ್ಯದ ಉಲ್ಲಂಘನೆಯೇ. ದೇವರ ನಾಮವನ್ನು ಉಚ್ಚರಿಸುವ ಬದಲು ಕೆಟ್ಟ ಬೈಗಳನ್ನು ಬೈಯುವುದೂ ವಾಣಿಯ ವ್ಯಭಿಚಾರವೇ, ಉಳಿದ ಇಂದ್ರಿಯಗಳ ಮಾತೂ ಅಷ್ಟೆ. ಲಾಲಸೆಗಳನ್ನು ಗೆದ್ದು ಪರಿಪೂರ್ಣವಾಗಿ ಆತ್ಮಸಂಯಮಿಯಾದವನೇ ನಿಜವಾದ ಮಾನವನೆನ್ನಬಹುದು. ನಾವು ಹಿಡಿತದಲ್ಲಿಟ್ಟುಕೊಳ್ಳಲಾರದ ಕುದುರೆಸವಾರರು, ಬೇಗ ಕೆಳಗೆ ಬೀಳುವವರು. ಆದರೆ ಕಡಿವಾಣ ಸರಿಯಾಗಿ ಹಿಡಿದು ಕುದುರೆಯನ್ನು ಹತೋಟಿಯಲ್ಲಿಟ್ಟುಕೊಂಡವ ಗುರಿ ಮುಟ್ಟುವ ಸಾಧ್ಯತೆ ಉಂಟು. ಅಂತೆಯೇ ಲಾಲಸೆಗಳನ್ನು ನಿಗ್ರಹಿಸಿದವನೂ ಗುರಿ ಸೇರುತ್ತಾನೆ. ಅಂಥವನೇ ಸ್ವರಾಜ್ಯಕ್ಕೆ ಅರ್ಹ. ಅವನೇ ಸತ್ಯಶೋಧಕ. ಅಂಥವನೇ ದೇವರನ್ನು ಅರಿಯಬಲ್ಲವ.

ಇದೆಲ್ಲ ಕಾಪಿಪುಸ್ತಕದ ತಲೆಬರೆಹದ ಮಾತುಗಳು ಎಂದು ಈ ನನ್ನ ಮಾತುಗಳನ್ನು ತಿರಸ್ಕರಿಸಬೇಡಿರೆಂದು ನನ್ನ ಉತ್ಕಟ ಆಸೆ. ಈ ಸತ್ಯಗಳನ್ನು ಆಚರಿಸುವುದರ ಮಹತ್ವವನ್ನು ತಿಳಿಯದೆ ನಾವು ಎಂದೂ ಮುಂಬರಿಯಲಾರೆವು. ನಾನು ನನ್ನ ಅನುಭವಗಳ ಕಿಂಚಿತ್ ಅಂಶವನ್ನಷ್ಟೇ ನಿಮಗೆ ಈಗ ಹೇಳಿರುವುದು. ನಾನು ನಿಮಗೆಸಗುವ ಸೇವೆ ನಿಮ್ಮ ಬಗೆಗೆ ನನ್ನ ಪ್ರೇಮದ ದೆಸೆಯಿಂದಲೇ. ನಿಮ್ಮ ಕಷ್ಟಗಳಲ್ಲಿ ಪಾಲುಗೊಳ್ಳುವುದೂ ನನ್ನ ಸೃಷ್ಟಿಕರ್ತನ ಎದುರು ಆತ್ಮಸಮರ್ಥನೆ ಮಾಡಿಕೊಳ್ಳಲೋಸುಗವೇ. ಒಳ್ಳೆಯ ಮಾತಿನ ಮಹಿಮೆ ನಿಮಗೆ ಅರಿವಾಗದಿದ್ದರೆ, ನಿಮ್ಮಲ್ಲಿರುವ ಅಸುರ ಇತರರನ್ನು ಹಿಂಸಿಸುವುದಾದರೆ, ನಿಮ್ಮ ಲಾಲಸೆಗಳ ಕೈಗೆ ಕಡಿವಾಣ ಬಿಟ್ಟುಕೊಟ್ಟುದಾದರೆ ನಿಮ್ಮ ಸಂಬಳ ನಾಲ್ಕುಪಟ್ಟು ಹೆಚ್ಚಿದರೇನು, ನಿಮ್ಮ ಕೆಲಸದ ವೇಳೆ ಇಂದಿನದರ ಕಾಲುಭಾಗಕ್ಕೆ ಇಳಿದರೇನು? ನಮಗೆ ವೇತನ ಹೆಚ್ಚಬೇಕು, ಕೆಲಸದ ಗಂಟೆ ಇಳಿಯಬೇಕು, ಏಕೆಂದರೆ ನಮಗೆ ಸ್ವಚ್ಛವಾದ ಮನೆಗಳು, ಸ್ವಚ್ಛ ಶರೀರಗಳು, ಸ್ವಚ್ಛ ಮನಗಳು, ಹಾಗೂ ಸ್ವಚ್ಛವಾದ ಆತ್ಮ ಬೇಕು, ಈ ನಾಲ್ಕು ಬಗೆಯ ಸ್ವಚ್ಛತೆಗಾಗಿಯೇ ಇವೆರಡೂ ಬೇಕು. ಸಾಧಿಸಬೇಕಾದ ಗುರಿ ಅದಲ್ಲವಾದರೆ ಹೆಚ್ಚಿನ ವೇತನ, ಕಡಿಮೆ ಕೆಲಸದ ವೇಳೆಗಾಗಿ ಪ್ರಯತ್ನಿಸುವುದು ಪಾಪವೇ ಸರಿ. ದೇವರು ಈ ಗುರಿ ಸಾಧಿಸುವ ಬಲ ನಿಮಗೆ ಕೊಡಲಿ![೧೩೨]

ನಾನು ಸ್ವತಃ ಒಬ್ಬ ದುಡಿಮೆಗಾರನೇ. ನಾನೊಬ್ಬ ಭಂಗಿ, ನೇಕಾರ, ನೂಲುವವ, ರೈತ ಎಂದೆಲ್ಲ ಮುಂತಾಗಿ ಕರೆದುಕೊಳ್ಳುವುದರಲ್ಲಿ ನನಗೆ ಹೆಮ್ಮೆ. ಇವಲ್ಲಿ ಕೆಲವನ್ನು ಎಲ್ಲೋ ಅಲ್ಲಷ್ಟು ಇಲ್ಲಷ್ಟು ಬಲ್ಲೆನೆಂದು ಹೇಳಲು ನನಗೇನೂ ನಾಚಿಕೆಯಿಲ್ಲ. ದುಡಿಯುವ ವರ್ಗಗಳೊಡನೆ ಬೆರೆಯುವುದೆಂದರೆ ನನಗೊಂದು ಆನಂದ, ಏಕೆಂದರೆ ದುಡಿಮೆಯಿಲ್ಲದೆ ನಾವು ಏನನ್ನೂ ಮಾಡಲಾರೆವು. "ದುಡಿಮೆಯೆಂದರೆ ಭಗವಂತನ ಪ್ರಾರ್ಥನೆ"—ಎಂಬ ಲ್ಯಾಟಿನ್ ಮಹಾ ವಾಕ್ಯವೊಂದಿದೆ. ಯೂರೋಪಿನ ಅತಿ ಸೊಗಸಾದ ಸಾಹಿತಿಗಳಲ್ಲೊಬ್ಬ ದುಡಿಯದೆ ಉಣ್ಣಲು ಮನುಷ್ಯನಿಗೆ ಹಕ್ಕಿಲ್ಲವೆಂದು ಹೇಳಿದ್ದಾನೆ. ದುಡಿಮೆ ಎಂದರೆ ಬುದ್ಧಿಶ್ರಮವಲ್ಲ, ಕೈಕಾಲುಗಳಿಂದ, ಶರೀರಶ್ರಮ. ಹಿಂದೂ ಧರ್ಮದ ಆದ್ಯಂತ ಇದೇ ಭಾವ ಪ್ರವಹಿಸುತ್ತದೆ. "ದುಡಿಯದೆ ಉಣ್ಣುವವ ಪಾಪ ವನ್ನೇ ಭುಂಜಿಸುತ್ತಾನೆ, ಅವ ಕಳ್ಳನೇ ಹೌದು"—ಇದು ಭಗವದ್ಗೀತೆಯ ಶ್ಲೋಕವೊಂದರ ಅಕ್ಷರಶಃ ಅರ್ಥ. ಆದುದರಿಂದ ಜಗತ್ತಿನಾದ್ಯಂತ ದುಡಿಮೆ ಗಾರರೊಡನೆ ತಾದಾತ್ಮ್ಯಗೊಳ್ಳಬಲ್ಲೆನೆಂಬ ಬಗೆಗೆ ನನಗೆ ಹೆಮ್ಮೆಯೇ.

ಬಂಡವಾಳ-ಶ್ರಮಶಕ್ತಿಗಳು ಪರಸ್ಪರ ಪೂರಕವಾಗಬೇಕು, ಸಹಾಯಕ ಆಗಿರಬೇಕು — ಎಂಬುದೇ ನನ್ನ ಆದರ್ಶವೆಂದು ಯಾವಾಗಲೂ ಹೇಳಿದೇನೆ. ಐಕ್ಯತೆ ಸಾಮರಸ್ಯಗಳಿಂದ ಕೂಡಿರಬೇಕಾದ ಮಹಾಕುಟುಂಬ ಅದು. ಬಂಡವಾಳ, ಶ್ರಮಿಕರ ಭೌತ ಉನ್ನತಿ-ಕಲ್ಯಾಣದ ಕಡೆ ಮಾತ್ರ ಲಕ್ಷ್ಯಕೊಡದೆ ಅವರ ನೈತಿಕ ಉನ್ನತಿಯ ಕಡೆಗೂ ಗಮನಕೊಡಬೇಕು. ಬಂಡವಾಳಗಾರರು ತಮ್ಮ ಆಶ್ರಯದಲ್ಲಿ ದುಡಿಯುವ ವರ್ಗಗಳ ಕಲ್ಯಾಣದ ಧರ್ಮದರ್ಶಿಗಳೇ ಅಲ್ಲವೇ ?

ಕೆಲಸಗಾರರ ಕಲ್ಯಾಣದ ಸಲುವಾಗಿ ಅವರ ಧರ್ಮದರ್ಶಿಗಳೆಂದು ಭಾವಿಸಿರೆಂದು ಒಲಿಸಿಕೊಳ್ಳುವ ಸಲುವಾಗಿ ನಾನು ಬಂಡವಾಳಗಾರರ ಸ್ನೇಹ ಬೆಳೆಸಿದೇನೆ. ಅವರು ಮೊದಲು ಕಾರ್ಮಿಕರಿಗೆ ಊಟ ಕೊಟ್ಟು ಬಳಿಕ ತಾವು ಉಣ್ಣಲಿ. ಇಂದು ಬಂಡವಾಳಗಾರರಿಗೆ ಶ್ರಮಿಕರನ್ನು ಕಂಡರೆ ಅಂಜಿಕೆ, ಶ್ರಮಿಕರು ಬಂಡವಾಳಗಾರರನ್ನು ಕಂಡರೆ ಕೆಂಡ ಕಾರುತ್ತಾರೆ. ಈ ಸಂಬಂಧದ ಬದಲು ಪರಸ್ಪರ ವಿಶ್ವಾಸ-ಗೌರವಗಳ ಬಾಂಧವ್ಯ ತರಬಯಸುತ್ತೇನೆ.೧೩೩

ಭಾರತದಲ್ಲಿ ಕಾರ್ಮಿಕರು ಇನ್ನೂ ತೀರಾ ಅಸಂಘಟಿತರಾಗಿದ್ದಾರೆ. ರಾಷ್ಟ್ರನೀತಿ ಅಥವಾ ಜನರ ಕಲ್ಯಾಣದ ವಿಷಯಕ್ಕೆ ಅವರಿಗೆ ಸ್ವಬುದ್ಧಿ ಎಂಬುದು ಇಲ್ಲ. ಸಾಮಾಜಿಕ ಸಂಪರ್ಕ ಅಥವಾ ಪರಸ್ಪರ ಬಾಂಧವ್ಯವೂ ಇಲ್ಲ. ಪ್ರಾಂತೀಯತೆಯಿಂದ ಕೂಡಿರುತ್ತಾರೆ, ಒಂದೇ ನಗರಕ್ಕೆ ಸೇರಿದ್ದರೂ ತುಂಬ ಜಾತೀಯತೆಯೂ ಅವರಲ್ಲಿ ಇರುತ್ತದೆ. ಎಲ್ಲೆಡೆಯೂ ವಿವೇಕಪೂರ್ಣ ಮಾರ್ಗದರ್ಶನ ಅವರಿಗೆ ಇರುವುದಿಲ್ಲ. ಅನೇಕ ಸ್ವಾರ್ಥಪರರೂ, ಸ್ವಲ್ಪ ಮಟ್ಟಿಗೆ ಅಪ್ರಾಮಾಣಿಕರೂ ಆದವರ ನೇತೃತ್ವದಲ್ಲಿದೆ ಕಾರ್ಮಿಕವರ್ಗ.

ಪ್ರಾಂತದ ಕಾರ್ಮಿಕನಾಯಕರಲ್ಲಿ ಪೂರ್ಣ ಸ್ನೇಹಸಂಬಂಧ, ಸಾಮರಸ್ಯ ಇಲ್ಲ. ಉಪನಾಯಕರಲ್ಲಂತೂ ಶಿಸ್ತೆಂಬುದೇ ಇರದು. ಇವರು ಪ್ರಾಂತೀಯ ನಾಯಕರಿಗೆ ಏಕಪ್ರಕಾರದ ನಿಷ್ಠೆಯನ್ನೂ ಉಳ್ಳವರಾಗಿರುವುದಿಲ್ಲ. ಬೇರೆಬೇರೆ ಪ್ರಾಂತದ ನಾಯಕರೆಲ್ಲ ಒಂದೇ ನೀತಿಯನ್ನೂ ಅನುಸರಿಸರು. ಇಂಥ ಸಂದರ್ಭದಲ್ಲಿ ಅಖಿಲ ಭಾರತ ನೀತಿ ಎಂಬುದು ಕೇವಲ ಕಾಗದದ ಮೇಲೆ ಮಾತ್ರ ಇದ್ದೀತು.

ಅಹಮದಾಬಾದಿನ ಕಾರ್ಮಿಕ ಸಂಘ ತನ್ನದೇ ಆದ ಸಂಘಟನೆಯನ್ನು ಪರಿಪೂರ್ಣಗೊಳಿಸಿದುದಾದರೆ ಅದು ಭಾರತದ ಇತರ ಭಾಗಗಳಿಗೆಲ್ಲ ಒಂದು ಮಾದರಿಯಾದೀತು. ಅದರ ಯಶಸ್ಸು ಎಲ್ಲೆಡೆಗೂ ಹರಡೀತು. ಆದರೂ ಕ್ಷಿಪ್ರ ಭವಿಷ್ಯದಲ್ಲಿ ಯಶಸ್ಸಿನ ಭರವಸೆ ಕಾಣದೆಂದು ಒಪ್ಪಿಕೊಳ್ಳಲು ನಾನು ಸ್ವತಂತ್ರ. ಸದಾ ಸರ್ವದಾ ತಲೆಯೆತ್ತುವ ವಿಚ್ಛಿದ್ರಕಾರಕ ಶಕ್ತಿಗಳೊಡನೆ ಹೋರಾಡುವುದರಲ್ಲೇ ಕಾರ್ಮಿಕರ ಶಕ್ತಿಯೆಲ್ಲ ಪರೀಕ್ಷೆಗೆ ಒಳಗಾಗಿಹೋಗುತ್ತದೆ.

ನೀತಿ ಕುರಿತು ಒಂದು ಮಾತು. ಅದು ಬಂಡವಾಳಗಾರ ವಿರೋಧಿಯಲ್ಲ. ಬಂಡವಾಳಗಾರರಿಂದ ಉಚಿತ ಪಾಲನ್ನು ಪಡೆಯಬೇಕು, ಅದಕ್ಕೂ ಹೆಚ್ಚೇನಲ್ಲ. ಅದು ಬಂಡವಾಳಗಾರರ ಶಕ್ತಿ ಉಡುಗಿಸಿಯಲ್ಲ, ಕಾರ್ಮಿಕರನ್ನೇ ಒಳಗಿಂದ ಪರಿಷ್ಕರಿಸಿ, ಅವರ ಸ್ವಪ್ರಜ್ಞೆಯಿಂದ, ಕಾರ್ಮಿಕರಲ್ಲದ ಕಾರ್ಮಿಕನಾಯಕರ ಚಾತುರ್ಯ ಅಥವಾ ತಂತ್ರಗಳಿಂದ ಅಲ್ಲ; ತನ್ನದೇ ಆದ ನೇತೃತ್ವ ಬೆಳೆಸಿಕೊಳ್ಳುವಂತೆ ಕಾರ್ಮಿಕರಿಗೆ ಶಿಕ್ಷಣ ಕೊಟ್ಟು, ಸ್ವಾವಲಂಬಿಯಾದ, ಸ್ವಂತ ಅಸ್ತಿತ್ವದ ಸಂಘಟನೆ ನಿರ್ಮಾಣಮಾಡಿ. ಅದರ ಪ್ರತ್ಯಕ್ಷ ಉದ್ದೇಶ್ಯ ಕಿಂಚಿತ್ತೂ ರಾಜಕೀಯವಲ್ಲ. ಆಂತರಿಕ ಸುಧಾರಣೆ, ಶಕ್ತಿಯ ವಿಕಾಸಗಳೇ ಅದರ ಪ್ರತ್ಯಕ್ಷ

ಉದ್ದೇಶ್ಯಗಳು. ಈ ವಿಕಾಸದ ಪರೋಕ್ಷ ಫಲ, ಎಂದು ಎಂದಿಗಾದರೂ ಪರಿಪೂರ್ಣಗೊಳ್ಳುವುದಾದರೆ ಅದು ಸಹಜವಾಗಿಯೇ ಅಗಾಧವಾಗಿ ರಾಜಕೀಯವಾಗಿದ್ದೀತು.

ಆದುದರಿಂದ ಸ್ವಂತ ಅಸ್ತಿತ್ವವುಳ್ಳ ಘಟಕವಾದಾಗ ಪ್ರಥಮ ಶ್ರೇಣಿಯ ಪ್ರತ್ಯಕ್ಷ ರಾಜಕೀಯ ಅಧಿಕಾರಕ್ಕಾಗಿ ಕಾರ್ಮಿಕವರ್ಗವನ್ನು ಬಳಸಲೆಂದಾಗಲಿ, ಸಂಘಟಿಸಬೇಕೆಂದಾಗಲಿ ನನಗೆ ಯತ್ಕಿಂಚಿತ್ತೂ ಅಪೇಕ್ಷೆಯಿಲ್ಲ. ನನ್ನ ಅಭಿಪ್ರಾಯದಲ್ಲಿ ಕಾರ್ಮಿಕವರ್ಗ ರಾಜಕೀಯ ಚದುರಂಗದಾಟದ ಚದುರಂಗದ ಕಾಯಾಗಿ ರಾಜಕಾರಣಿಯ ಕೈಗೆ ಹೋಗಬಾರದು. ತನ್ನ ಶಕ್ತಿಯಿಂದಲೇ ಅದು ಚದುರಂಗದಾಟದಲ್ಲಿ ಪ್ರಬಲವಾಗಬೇಕು.

ಇದು ನನ್ನ ಕನಸು. ಅದು ಸಾಂತ್ವನ ಕೊಡುವುದರಿಂದ ಅದನ್ನು ನಾ ಅಪ್ಪಿಕೊಳ್ಳುತ್ತೇನೆ. ನಾನು ನಿರ್ದೇಶಿಸಿರುವ ನೀತಿ ಅಹಿಂಸೆಯ ಅಂಗೀಕಾರದಲ್ಲಿ ನನ್ನ ಅನನ್ಯ ಶ್ರದ್ಧೆಯ ಪ್ರತ್ಯಕ್ಷ ಪರಿಣಾಮ. ಅದೆಲ್ಲವೂ ಭ್ರಾಂತಿ ಇರಬಹುದು. ಆದರೆ ನನಗಾದರೋ ಅದನ್ನು ಭ್ರಮೆಯೆಂದು ಭಾವಿಸದೆ ಏಕೈಕ ಜೀವನದಾಯೀ ಶಕ್ತಿಯೆಂದು ಕಾಣುತ್ತಿರುವವರೆಗೆ ಬದುಕಿನಷ್ಟೇ ವಾಸ್ತವವಾದುದು ಅದು.[೧೩೪]

## " ಗಿರಣಿಪತಿಗಳಿಗೆ "

ಪಾಶ್ಚಾತ್ಯ ದೇಶಗಳಲ್ಲಿ ಮಾಲೀಕರು–ನೌಕರರ ನಡುವೆ ಕಟ್ಟುನಿಟ್ಟಾದ ಅಡ್ಡಗೋಡೆ ಇನ್ನೂ ಇದೆ. ನಮ್ಮಲ್ಲಿ ಅಸ್ಪೃಶ್ಯತೆ ನಾಡಿನಾದ್ಯಂತ ತಾಂಡವವಾಡುತ್ತಿರುವವರೆಗೆ ನಮ್ಮ ಆದರ್ಶ ಕುರಿತು ಹರಟುವುದು ಅಸಂಬದ್ಧವೆಂದು ನನಗೆ ಗೊತ್ತು. ಆದರೆ ಅತಿ ಉನ್ನತ ಆದರ್ಶವೆಂದು ನಾನೆಣಿಸಿರುವುದನ್ನು ನಿಮ್ಮ ಮುಂದೆ ಇಡದಿದ್ದರೆ ನನಗೆ ನಾನೇ ಸತ್ಯವಾಗಿ ನಡೆದಂತಾಗದು, ನಿಮಗೆ ಸಲ್ಲಿಸಬೇಕಾದ ಕರ್ತವ್ಯವನ್ನು ಈಡೇರಿಸಿದಂತಾಗದು.

ಗಿರಣಿಪತಿಗಳ ಹಾಗೂ ಕೆಲಸಗಾರರ ನಡುವಣ ಸಂಬಂಧ ತಂದೆ ಮಕ್ಕಳ ನಡುವಣ ಅಥವಾ ಏಕರಕ್ತಸಹೋದರರಂಥದಾಗಿರಬೇಕು. ಎಷ್ಟೋ ವೇಳೆ ಅಹಮದಾಬಾದಿನ ಗಿರಣಿಪತಿಗಳು ತಾವು " ಒಡೆಯರು " ಎಂದೂ

ತಮ್ಮ ನೌಕರರು "ಆಳುಗಳು" ಎಂದೂ ಉಲ್ಲೇಖಿಸುವುದನ್ನು ನಾ ಕೇಳಿದೇನೆ. ಧರ್ಮಪ್ರೇಮ, ಅಹಿಂಸಾಪ್ರೇಮಗಳಿಗಾಗಿ ಹೆಮ್ಮೆಪಡುವ ಅಹಮದಾಬಾದಿನಂಥ ಸ್ಥಳದಲ್ಲಿ ಅಂಥ ಸಡಿಲವಾದ ಮಾತು ಹಳೆಯ ಕಾಲದ ಮಾತಾಗಬೇಕು. ಏಕೆಂದರೆ ಆ ಧೋರಣೆ ಅಹಿಂಸೆಯ ನಿಷೇಧ. ನಮ್ಮ ಆದರ್ಶವಾದರೋ ನಮ್ಮ ಶಕ್ತಿಯೆಲ್ಲ, ಸಂಪತ್ತೆಲ್ಲ, ಬುದ್ಧಿಯೆಲ್ಲ, ತಮ್ಮ ಅಜ್ಞಾನದಿಂದಲೂ ನಮ್ಮ ತಪ್ಪು ಕಲ್ಪನೆಗಳಿಂದಲೂ ಕೂಲಿಗಾರರು ಅಥವಾ "ಆಳುಗಳು" ಎಂದೆನಿಸಿಕೊಳ್ಳುತ್ತಿರುವವರ ಕಲ್ಯಾಣಕ್ಕಾಗಿಯೇ ಮೀಸಲಾಗಬೇಕು.

ಯಾರು ನಿಮಗಾಗಿ ಬೆವರು ಹರಿಸುವರೋ, ಯಾರ ಉಚ್ಚಮಪರಿಶ್ರಮಗಳಿಂದ ನಿಮ್ಮ ಸ್ಥಾನಮಾನಸಮೃದ್ಧಿಗಳು ಲಭಿಸಿವೆಯೋ ಅಂಥವರ ಹಿತದ ಸಲುವಾಗಿಯೇ ನಿಮ್ಮೆಲ್ಲ ಸಂಪತ್ತನ್ನೂ ನಿಕ್ಷೇಪವಾಗಿ (ನ್ಯಾಸಧನವಾಗಿ) ಇಟ್ಟುಕೊಂಡಿರಬೇಕೆಂದೇ ನಾನು ನಿಮ್ಮಿಂದ ನಿರೀಕ್ಷಿಸುತ್ತೇನೆ. ನಿಮ್ಮ ಕಾರ್ಮಿಕರನ್ನು ನಿಮ್ಮ ಐಶ್ವರ್ಯದ ಸಹಭಾಗಿಗಳಾಗಿ ಮಾಡಿಕೊಳ್ಳಬೇಕೆಂದು ನನ್ನ ಆಸೆ. ಶಾಸನಬದ್ಧವಾಗಿ ನೀವು ಹೀಗೆ ಬದ್ಧರಾಗದಿದ್ದರೆ ಕಾರ್ಮಿಕರು ನಿಮ್ಮ ಮೇಲೆ ಮುತ್ತಿಗೆ ಹಾಕಬೇಕೆಂದು ನಾನು ಸೂಚಿಸಬಯಸುವುದಿಲ್ಲ. ಪರಸ್ಪರ ಪ್ರೇಮ, ತಂದೆಮಕ್ಕಳ ಭಾವವೇ ನಾನು ಈ ಸಂದರ್ಭದಲ್ಲಿ ಕಲ್ಪಿಸಿಕೊಳ್ಳಬಹುದಾದ ಪ್ರೇರಕತತ್ತ್ವ, ಶಾಸನವಲ್ಲ. ಈ ಪರಸ್ಪರ ಪ್ರೇಮದ ಬಂಧನವನ್ನು ಗೌರವಿಸುವುದನ್ನೇ ನೀವು ನಿಯಮಮಾಡಿಕೊಂಡುಬಿಟ್ಟರೆ ಎಲ್ಲ ಕಾರ್ಮಿಕ ವ್ಯಾಜ್ಯಗಳೂ ಕೊನೆಗಂಡಾವು, ಕಾರ್ಮಿಕರು ಸಂಘ ಕಟ್ಟಿ ಸಂಘಟಿತರಾಗಬಯಸುವುದೇ ಇಲ್ಲ. ತಾನು ದುಡಿವ ಗಿರಣಿ ತನ್ನದಲ್ಲ, ತನ್ನನ್ನು ಮಿತಿಮೀರಿ ದುಡಿಸಿಕೊಳ್ಳುತ್ತಿದಾರೆ ಎಂದು ತಕರಾರು ಮಾಡುವ, ಆ ಕಾರಣದಿಂದ ಒಡೆಯರ ಬಗೆಗೆ ದುರ್ಭಾವನೆಯನ್ನೇ ತುಂಬಿಕೊಂಡಿರುವ ಒಬ್ಬನೇ ಒಬ್ಬ ಗಿರಣಿಕೆಲಸಗಾರ ಇರುವವರೆಗೂ ಇದು ಈಡೇರದು. ಹಾಗಾದರೆ ತೊಡಕು ಇರುವುದೆಲ್ಲಿ ?

ನಮ್ಮ ಅನುಭವ ವಿಶಾಲವಾದಂತೆಲ್ಲ, ಕೆಲಸಗಾರರಿಗೆ ಹೆಚ್ಚು ಹೆಚ್ಚು ಕೊಟ್ಟಷ್ಟೂ ನಮಗೆ ಲಾಭವೇ—ಎಂದು ಹೆಚ್ಚು ಹೆಚ್ಚು ನಿಚ್ಚಳವಾಗಿ ನೋಡತೊಡಗಿದೇವೆ. ಗಿರಣಿ ನಿಮ್ಮದಷ್ಟೇ ಅಲ್ಲ, ತಮ್ಮದೂ ಅಷ್ಟೇ ಎಂದು ನಿಮ್ಮ ಕೆಲಸಗಾರರಿಗೆ ಅನಿಸುವ ಗಳಿಗೆಯಿಂದ ನಿಮ್ಮನ್ನು ಅವರು ಒಂದೇ ರಕ್ತದ

ಸೋದರರೆಂದು ಭಾವಿಸತೊಡಗಿಯಾರು. ಸಮಷ್ಟಿಹಿತಕ್ಕೆ ವಿರೋಧವಾಗಿ ಅವರು ವರ್ತಿಸುವ ಪ್ರಶ್ನೆಯೇ ಆಮೇಲೆ ಏಳದು, ಅವರ ಮೇಲೆ ಭಾರಿಯಾದ ಮೇಲ್ವಿಚಾರಕ ಸಿಬ್ಬಂದಿ ಇಟ್ಟುಕೊಳ್ಳುವ ಪ್ರಮೇಯವೇ ಆಗ ಇರದು.೧೨೫

## ಶ್ರಮಶಕ್ತಿಯೇ ಬಂಡವಾಳ

**ಪ್ರಶ್ನೆ**— ಹಿಂಸೆಯಿಲ್ಲದೆ ಕಾರ್ಮಿಕರು ನ್ಯಾಯ ಪಡೆಯುವುದು ಹೇಗೆ? ತಮ್ಮ ಪ್ರಯತ್ನಗಳನ್ನು ಸದೆಬಡೆಯಲು ಬಂಡವಾಳಗಾರರು ಶಕ್ತಿ ಪ್ರಯೋಗ ಮಾಡಿದರೆ ತಮ್ಮನ್ನು ತುಳಿಯುವವರನ್ನೇಕೆ ನಾಶಮಾಡಲು ಯತ್ನಿಸ ಬಾರದು?

**ಉತ್ತರ**— ಇದಂತೂ ಹಳೆಯ ನಿಯಮವಾಯಿತು, ಅಡವಿಯ ನಿಯಮ–ಏಟಿಗೆ ಏಟೆನದು; ನಾನು ಅತ್ಯಗತ್ಯವೆಂದು ಭಾವಿಸುವ ಅಹಿಂಸೆಯ ಪ್ರಯೋಗ ನಡೆಸಲೆತ್ನಿಸುತ್ತಿದೇನೆ. ಮನುಷ್ಯನಿಗೆ ಸರಿಹೊಂದದ ಅಡವಿಯ ನಿಯಮದಿಂದ ಮುಕ್ತವಾಗಲು ಹವಣಿಸುತ್ತಿದೇನೆ.

ಕಾರ್ಮಿಕರು ಸಾಕಷ್ಟು ಒಗ್ಗಟ್ಟಿನಿಂದ ಕೂಡಿ ಸ್ವಾರ್ಥತ್ಯಾಗಿಗಳಾದರೆ ತಮ್ಮ ರಕ್ಷಣೆಯನ್ನು ತಾವು ಯಾವಾಗಲೂ ಮಾಡಿಕೊಳ್ಳಬಲ್ಲರೆಂಬುದು ನನ್ನ ನಮ್ರ ಅಭಿಪ್ರಾಯ. ಬಂಡವಾಳಗಾರರು ಎಷ್ಟೇ ದಬ್ಬಾಳಿಕೆಗಾರರಾಗಿರಲೊಲ್ಲ ರೇಕೆ, ಕಾರ್ಮಿಕವರ್ಗ ಹವಣಿಸಿಕೊಳ್ಳಬಲ್ಲ, ಬಂಡವಾಳಗಾರರಿಗೆ ಎಂದೂ ಸಿಗದ ಶಕ್ತಿಮೂಲಗಳ ಅರಿವು ಕಾರ್ಮಿಕ ಚಳುವಳಿಯ ಸಂಪರ್ಕಹೊಂದಿ ದಿಗ್ದರ್ಶನ ಮಾಡುವವರಿಗೇ ಸರಿಯಾಗಿ ಆಗಿಲ್ಲ, ಇದು ನನ್ನ ನಿಶ್ಚಿತ ಮತ. ಕಾರ್ಮಿಕವರ್ಗವಿಲ್ಲದೆ ಬಂಡವಾಳವರ್ಗ ಪೂರಾ ನಿಸ್ಸಹಾಯಕವೆಂದು ತಿಳಿದು ಕಾರ್ಮಿಕರು ಅರ್ಥಮಾಡಿಕೊಂಡುದೇ ಆದರೆ ಕಾರ್ಮಿಕವರ್ಗ ತನ್ನ ಯಥೋಚಿತ ಸ್ಥಾನವನ್ನು ಕೂಡಲೇ ಪಡೆದೀತು.

ದುರದೃಷ್ಟವಶಾತ್ ನಾವು ಬಂಡವಾಳದ ಸಂಮೋಹಕ ಸಲಹೆಗೆ, ಸಂಮೋಹಕ ಪ್ರಭಾವಕ್ಕೆ ಒಳಗಾಗಿಬಿಟ್ಟಿದೇವೆ, ಅಂತಲೇ ಬಂಡವಾಳವೇ ಈ ಲೋಕದಲ್ಲಿ ಸರ್ವಸ್ವ ಎಂದು ತಿಳಿದಿದೇವೆ. ಹಾಗೂ, ಶ್ರಮಶಕ್ತಿಯೇ ನಿಜವಾದ ಬಂಡವಾಳ, ಈ ಜೀವಂತ ಬಂಡವಾಳ ಅಕ್ಷಯವಾದುದು. ಈ ನಿಯಮದ

ಪ್ರಕಾರವೇ ನಾವು ಅಹಮದಾಬಾದಿನ ಕಾರ್ಮಿಕ ಸಂಘದ ಕೆಲಸ ನಡೆಸುತ್ತಿರುವುದು. ಸರ್ಕಾರದ ವಿರುದ್ಧ ನಾವು ನಡೆಸುತ್ತಿರುವ ಹೋರಾಟವೂ ಆ ನಿಯಮದ ಆಧಾರದ ಮೇಲೆಯೇ. ಆ ನಿಯಮವೇ, ಅದು ಮನವರಿಕೆ ಆದುದರಿಂದಲೇ ಚಂಪಾರಣ್ಯದ ಹದಿನೇಳು ಲಕ್ಷ ಜನ ಆರು ತಿಂಗಳ ಅವಧಿಯೊಳಗಾಗಿ ಶತಮಾನದಿಂದ ನಡೆದು ಬಂದ ದಬ್ಬಾಳಿಕೆಯಿಂದ ಬಿಡುಗಡೆ ಹೊಂದಿದರು. ಆ ದಬ್ಬಾಳಿಕೆ ಎಂಥದೆಂಬುದನ್ನು ಹೇಳಲು ನಾ ತಡಮಾಡಬಾರದು, ಆದರೆ ಆ ಸಮಸ್ಯೆಯಲ್ಲಿ ಆಸಕ್ತಿ ಉಳ್ಳವರು ನಾನು ನಿಮ್ಮ ಮುಂದೆ ಇಟ್ಟಿರುವ ಎಲ್ಲ ಸತ್ಯಸಂಗತಿಗಳನ್ನೂ ಅಭ್ಯಸಿಸಿಕೊಳ್ಳಬಹುದು. ನಾವು ಏನು ಮಾಡಿದೇವೆಂದು ಈಗ ಹೇಳುವೆ. ಇಂಗ್ಲೀಷ್ ಭಾಷೆಯಲ್ಲಿ ಒಂದು ಪ್ರಬಲವಾದ ಪದವಿದೆ, ಫ್ರೆಂಚ್ ಭಾಷೆಯಲ್ಲೂ ಇದೆ, ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಇದೆ—ಅದು "ಇಲ್ಲ" ಎಂಬುದು. ಬಂಡವಾಳವರ್ಗ "ಹೌದು" ಎಂದು ಹೇಳಿರೆಂದು ಬಯಸಿದಾಗ ಕಾರ್ಮಿಕವರ್ಗಕ್ಕೆ "ಇಲ್ಲ" ಎನ್ನಬೇಕೆನಿಸಿದರೆ ಅದು "ಇಲ್ಲ" ಎಂದು ಗರ್ಜಿಸುತ್ತದೆ–ಇದೇ ನಾವು ಕಂಡುಕೊಂಡಿರುವ ರಹಸ್ಯ. ಕೂಡಲೇ ಕಾರ್ಮಿಕವರ್ಗಕ್ಕೆ "ಹೌದು" ಎನ್ನಬೇಕೆನಿಸಿದಾಗ "ಹೌದು" ಎನ್ನಬಹುದು, "ಇಲ್ಲ" ಎನ್ನಬೇಕೆನಿಸಿದಾಗ "ಇಲ್ಲ" ಎನ್ನಬಹುದು ಎಂಬ ಸ್ವಾತಂತ್ರ್ಯ ತನಗಿದೆಯೆಂಬ ತಿಳಿವಳಿಕೆ ಉಂಟಾಗುತ್ತದೆ. ಬಂಡವಾಳವರ್ಗದಿಂದ ಕಾರ್ಮಿಕವರ್ಗ ಸ್ವತಂತ್ರ, ಬಂಡವಾಳವರ್ಗವೋ ಶ್ರಮಿಕವರ್ಗವನ್ನು ಒಲಿಸಿಕೊಳ್ಳಲೇಬೇಕು. ಬಂಡವಾಳವರ್ಗದ ಕೈಲಿ ಕೋವಿಯಿರಬಹುದು, ವಿಷವಾಯುವೂ ಇರಬಹುದು. ತನ್ನ ನಕಾರವನ್ನು ಸರಿಯಾಗಿ ಬಳಸಿಕೊಂಡು ತನ್ನ ಗೌರವವನ್ನು ಪಟ್ಟಾಗಿ ಹಿಡಿದು ಕಾರ್ಮಿಕವರ್ಗ ನಿಂತುದಾದರೆ ಬಂಡವಾಳವರ್ಗ ಆಗಲೂ ಪೂರಾ ಅಸಹಾಯಕವೇ ಆಗಿದ್ದೀತು. ಕಾರ್ಮಿಕ ವರ್ಗ ಪ್ರತೀಕಾರ ಮಾಡಬೇಕಿಲ್ಲ, ಗುಂಡು ವಿಷವಾಯುಗಳನ್ನು ಎದುರಿಸಿಯೂ ಅಳುಕದೆ ನಕಾರ ಹೇಳಿದುದಾದರೆ ಸಾಕು. ಬಹಳ ವೇಳೆ ಕಾರ್ಮಿಕವರ್ಗ ಸೋತುಹೋಗುವುದೇಕೆಂದರೆ ನಾನು ಈಗ ಹೇಳಿದಂತೆ ಬಂಡವಾಳವರ್ಗವನ್ನು ನಿರ್ವೀರ್ಯಗೊಳಿಸುವ ಬದಲು ಬಂಡವಾಳವನ್ನು ವಶಪಡಿಸಿಕೊಂಡು, ಅತಿ ತುಚ್ಛ ಅರ್ಥದಲ್ಲಿ ತಾನೂ ಬಂಡವಾಳಗಾರನಾಗಬಯಸುತ್ತದೆ. ನಾನೂ ಕಾರ್ಮಿಕನಾಗಿಯೇ ಈ ಮಾತನ್ನು ಹೇಳುತ್ತಿದೇನೆ. ಆದಕಾರಣ ಪಟ್ಟಭದ್ರ

ರಾಗಿ, ಗಟ್ಟಿಯಾಗಿ ಸಂಘಟಿತರಾಗಿರುವ ಬಂಡವಾಳಗಾರರೂ ಕಾರ್ಮಿಕರಲ್ಲಿ ಬಂಡವಾಳಗಾರರಾಗಲು ಅಭ್ಯರ್ಥಿಗಳಿದಾರೆಂದು ತಿಳಿದು, ಅವರಲ್ಲಿ ಕೆಲವರನ್ನು ಉಪಯೋಗಿಸಿಕೊಂಡು ಕಾರ್ಮಿಕವರ್ಗವನ್ನು ತುಳಿಯುತ್ತಾರೆ. ಈ ಸಂಮೋಹನ ಮಂತ್ರಕ್ಕೆ ನಾವು ನಿಜವಾಗಿಯೂ ಅಧೀನವಾಗಿರದಿದ್ದರೆ ನಮ್ಮಲ್ಲಿ ಪ್ರತಿಯೊಬ್ಬರೂ, ಹೆಂಗಸರೂ ಗಂಡಸರೂ, ಲವಲೇಶವೂ ಕಷ್ಟವಿಲ್ಲದೆ ಈ ಮೂಲ ಭೂತ ಸತ್ಯವನ್ನು ಕಂಡುಕೊಳ್ಳುತ್ತಿದ್ದೆವು. ಜೀವನದ ವಿವಿಧ ಅಂಗಗಳಲ್ಲಿ ಇದನ್ನು ಅನೇಕ ಬಾರಿ ಪ್ರಯೋಗಮಾಡಿ ನನಗೆ ನಾನೇ ಅದನ್ನು ಸಿದ್ಧಮಾಡಿ ಕೊಂಡಿದೇನೆ. ಅಂತಲೇ ಅಧಿಕಾರವಾಣಿಯಿಂದ ಹೇಳುತ್ತಿದೇನೆ. ಆದುದರಿಂದ ಈ ಯೋಜನೆಯನ್ನು ನಿಮ್ಮೆದುರು ಇಡುವಾಗ ಮಾನವರ ಅಳವಿಗೆ ಮೀರಿದ್ದು ದೆಂದಲ್ಲ, ಸ್ತ್ರೀಯಾಗಲಿ ಪುರುಷನಾಗಲಿ ಪ್ರತಿಯೊಬ್ಬ ಕಾರ್ಮಿಕನೂ ಅನುಸರಿಸ ಬಹುದಾದುದು ಇದು. ಈ ಅಹಿಂಸಾತ್ಮಕ ಯೋಜನೆಯ ಪ್ರಕಾರ ಕಾರ್ಮಿಕರು ಮಾಡಬೇಕಾದುದು ಗೋಳಿಬಾರಿನ ಸಂದರ್ಭದಲ್ಲಿ ಸ್ವಿಸ್ ಸೈನಿಕ ಅಥವಾ ನಖಶಿಖಾಂತ ಶಸ್ತ್ರಸನ್ನದ್ಧನಾದ ಸಾಮಾನ್ಯ ಸೈನಿಕನಿಗಿಂತ ಹೆಚ್ಚೇನೂ ಮಾಡಬೇಕಾಗಿಲ್ಲ. ಆ ಸೈನಿಕ ತನ್ನ ಶತ್ರುವನ್ನು ಕೊಂದು ನಾಶಪಡಿಸಲು ನಿಸ್ಸಂಶಯವಾಗಿ ಪ್ರಯತ್ನಿಸಿದರೂ ತನ್ನ ಜೀವವನ್ನೂ ತನ್ನ ಕೈಯಲ್ಲೇ ಇಟ್ಟು ಕೊಂಡಿರುತ್ತಾನೆ. ಸೈನಿಕನಲ್ಲಿರುವ ಪಶುವೃತ್ತಿಯನ್ನು ಕಾರ್ಮಿಕರು ಅನುಸರಿಸ ಬಯಸದೆ ಅವನ ಧೈರ್ಯವನ್ನು ಮಾತ್ರ ಅನುಕರಿಸಿ ಎನ್ನುತ್ತೇನೆ ನಾನು. ಇನ್ನೊಬ್ಬನನ್ನು ಸಾಯಿಸುವ ಸಾಮರ್ಥ್ಯವನ್ನಲ್ಲ, ಶಸ್ತ್ರ ಹಿಡಿಯದೆ, ಆತ್ಮರಕ್ಷಣೆಗೆ ಯಾವ ಆಯುಧವನ್ನೂ ಇಟ್ಟುಕೊಳ್ಳದೆ ಸಾವನ್ನು ಅಪ್ಪಿಕೊಳ್ಳುವವ ನಖ ಶಿಖಾಂತ ಶಸ್ತ್ರಸಜ್ಜಿತನಾದವನಿಗಿಂತ ಬಹು ಉನ್ನತಮಟ್ಟದ ಧೈರ್ಯ ಸಾಹಸ ಗಳನ್ನು ತೋರಿಸುತ್ತಾನೆ.[೧೩೬]

ಗಿರಣಿಕೆಲಸಗಾರನ ಬದುಕು ತುಂಬ ಏರುಪೇರುಗಳಿಂದ ಕೂಡಿದಂಥದು.* ಮಿತವ್ಯಯ–ಉಳಿತಾಯಗಳು ನಿಜಕ್ಕೂ ಪರಿಹಾರೋಪಾಯಗಳೇ, ಅವನ್ನು ದುರ್ಲಕ್ಷಿಸುವುದು ಅಕೃತ್ಯ. ಆದರೂ ಅವರ ಉಳಿತಾಯಗಳು ಬಹುದೂರ ಬರಲಾರವು. ಗಿರಣಿಕೂಲಿಗಾರರಲ್ಲಿ ಬಹುಮಂದಿ ಸದಾ ಕೇವಲ ಜೀವನ ನಿರ್ವಾಹಕ್ಕೇ ಸಾಲದಂತೆ ಹೋರಾಡುತ್ತಿರುತ್ತಾರೆ. ಸಂಪಿನ ಅವಧಿಯಲ್ಲಿ ಅಥವಾ ನಿರುದ್ಯೋಗ ಸಂಭವಿಸಿದಾಗಲಂತೂ ದುಡಿವ ಮನುಷ್ಯ ಮನೆಯಲ್ಲಿ

ತೆಪ್ಪಗೆ ಕೂತರೆ ಹೇಗೆ ನಡೆದೀತು? ಈ ಬಲಾತ್ಕಾರದ ಆಲಸ್ಯಕ್ಕಿಂತ ಒಬ್ಬನ ನೀತಿಬಲ–ಆತ್ಮಗೌರವಗಳಿಗೆ ಘಾತುಕವಾದುದು ಮತ್ತೊಂದಿಲ್ಲ. ಬಿಕ್ಕಟ್ಟು ಒದಗಿದಾಗ ಅವರನ್ನು ಕೈಬಿಡದಂಥ ಉಪಜೀವನದ ಉಪಕಸುಬೊಂದು ಅವರ ಬಿಲ್ಲಿನ ಎರಡನೆ ಹುರಿಹಗ್ಗವಾಗಿ ಇರದ ಹೊರತು ಕಾರ್ಮಿಕವರ್ಗಕ್ಕೆ ಭದ್ರತೆ ಅಥವಾ ಆತ್ಮವಿಶ್ವಾಸದ ಅರಿವುಂಟಾಗದು.

ಬಂಡವಾಳಗಾರನಿಗೆ ಬಂಗಾರ (ಲೋಹ) ಹೇಗೋ ಹಾಗೆಯೇ ಕಾರ್ಮಿಕ ವರ್ಗಕ್ಕೆ ಹಲವಾರು ಕಸಬುಗಳ ವ್ಯಾವಹಾರಿಕ ಜ್ಞಾನ. ಕಾರ್ಮಿಕನಿಗೆ ಅವನ ಕೈಚಳಕವೇ ಅವನ ಬಂಡವಾಳ. ಶ್ರಮಶಕ್ತಿಯ ಸಹಕಾರವಿಲ್ಲದೆ ಬಂಡವಾಳ ಗಾರ ಹೇಗೆ ತನ್ನ ಬಂಡವಾಳದ ಫಲ ಪಡೆಯಲಾರನೋ ಹಾಗೆಯೇ ಕೆಲಸಗಾರ ಬಂಡವಾಳದ ಸಹಕಾರವಿಲ್ಲದೆ ಸಫಲನಾಗಲಾರ. ಬಂಡವಾಳವರ್ಗ–ಶ್ರಮಿಕ ವರ್ಗಗಳೆರಡಕ್ಕೂ ಸಮಾನವಾಗಿ ವಿಕಸಿತವಾದ ಬುದ್ಧಿಶಕ್ತಿಯ ವರವಿದ್ದಲ್ಲಿ, ಮತ್ತು ಪರಸ್ಪರ ಒಬ್ಬರಿಂದ ಇನ್ನೊಬ್ಬರು ನ್ಯಾಯ ಪಡೆದೇವೆಂಬ ಆತ್ಮವಿಶ್ವಾಸ ವಿದ್ದಲ್ಲಿ ಅವರಿಬ್ಬರೂ ಒಂದೇ ಉದ್ಯಮದ ಸಹಭಾಗಿಗಳೆಂದು ತಿಳಿದು ಒಬ್ಬರ ನ್ನೊಬ್ಬರು ಗೌರವಿಸಿಯಾರು. ಒಬ್ಬರು ಇನ್ನೊಬ್ಬರನ್ನು ಸ್ವಭಾವಸಿದ್ಧ, ಎಂದೂ ಹೊಂದಿಕೆಗೊಳ್ಳದ ವಿರೋಧಿಗಳೆಂದು ಎಣಿಸಬೇಕಾದುದಿಲ್ಲ. ಆದರೆ ಬಂಡವಾಳ ವರ್ಗವಾದರೋ ಸುಸಂಘಟಿತವಾಗಿದೆ, ಒಳ್ಳೆ ಪಟ್ಟಭದ್ರವಾದಂತೆ ತೋರುತ್ತದೆ, ಕಾರ್ಮಿಕವರ್ಗ ಹಾಗಿಲ್ಲ, ಇದೇ ತೊಡಕು. ಆತ್ಮರಹಿತ ಯಾಂತ್ರಿಕ ದುಡಿಮೆ ಕೆಲಸಗಾರನ ಬುದ್ಧಿಯನ್ನು ಕುಂಠಿತಗೊಳಿಸಿಬಿಟ್ಟಿದೆ, ಅದರಿಂದಾಗಿ ಅವನ ಮಾನಸಿಕ ವಿಕಾಸಕ್ಕೆ ಅವಕಾಶವೇ ಇಲ್ಲ. ತನ್ನ ಶಕ್ತಿಯ, ತನ್ನ ಸ್ಥಾನಮಾನದ ಗೌರವಗಾಂಭೀರ್ಯಗಳನ್ನು ಅರಿಯಲೇ ಅವಕಾಶವಿಲ್ಲವಾಗಿಬಿಟ್ಟಿದೆ. ತನಗೆ ಬೇಕಾದ ಕೂಲಿಯನ್ನು ತಾನು ಕೇಳುವ ಬದಲು ಬಂಡವಾಳಗಾರರೇ ಅದನ್ನು ನಿರ್ಧರಿಸುವವರೆಂದು ನಂಬುವಂತೆ ಅವನಿಗೆ ಕಲಿಸಿದಾರೆ. ಸರಿಯಾದ ರೀತಿಯಲ್ಲಿ ಆತ ಸಂಘಟಿತನಾಗಲಿ, ತನ್ನ ಬುದ್ಧಿಯನ್ನು ಪ್ರಖರಗೊಳಿಸಿ ಕೊಳ್ಳಲಿ, ಹಲವಾರು ಕಸಬುಗಳನ್ನು ಕಲಿತುಕೊಳ್ಳಲಿ, ಆಗ ತಲೆಯೆತ್ತಿ ಹೋಗುವುದು ಸಾಧ್ಯವಾದೀತು, ಹೊಟ್ಟೆಪಾಡಿಗೆ ಇಲ್ಲದೆ ಕಷ್ಟಪಡುವ ಭಯವೇ ಎಂದೂ ತೋರದು.[೧೩೭]

## ಅಹಿಂಸೆಯೇ ಏಕೈಕ ಭರವಸೆ

ಅಹಿಂಸೆಯಲ್ಲಿ ಅಗತ್ಯವಾದ ತರಪೇತು ಇಲ್ಲದೆ ಹೋದರೆ ಕಾರ್ಮಿಕರಲ್ಲಿ ಅಂತಃಕಲಹ ಸಂಭವಿಸೀತು. ತಮ್ಮಲ್ಲಿರುವ ಶಕ್ತಿಯನ್ನು ಕಂಡುಕೊಳ್ಳಲು ಬೇಕಾದ ಬಲ ಬೆಳೆಸಿಕೊಳ್ಳಲು ಅವರಲ್ಲಿ ಸಿದ್ಧತೆ ಬಾರದೆಹೋದೀತು. ಸಂಘಟನೆ, ತಂತ್ರಕೌಶಲ, ಹಾಗೂ ಉಳಿದುದೆಲ್ಲವೂ ಅಹಿಂಸೆಯ ಮೂಲ ತತ್ತ್ವವನ್ನು ಅಂಗೀಕರಿಸಿದಮೇಲೇ ಬಂದಾವು ವರ್ಗಸಹಕಾರವೂ ಅನಂತರ ತಾನಾಗಿಯೇ ಬಂದೀತು. ಸಂಖ್ಯಾಬಲ ಅವರಿಗಿದ್ದರೂ ಅವರು ಪರಾಶ್ರಯಕ್ಕೆ ಬಾಯಿಬಿಡುತ್ತಾರೆ, ಮಾಲೀಕರ ಕೃಪೆಗೇ ಅಧೀನವಾಗಿದಾರೆ. ಏಕೆಂದರೆ ಅವರಿಗೆ ತಮ್ಮ ಶಕ್ತಿ ಏನೆಂಬುದೇ ಗೊತ್ತಿಲ್ಲ. ಹಾಗಿಲ್ಲದಿದ್ದರೆ ತಮ್ಮ ಶಕ್ತಿಸರ್ವಸ್ವವನ್ನೂ ಒಟ್ಟುಗೂಡಿಸಿ, ಈಗ ಮಾಲೀಕರು ಮಾಡುತ್ತಿರುವಂತೆ ತಮ್ಮ ಷರತ್ತುಗಳನ್ನೇ ಒತ್ತಾಯಪಡಿಸಲು ಏನು ಆತಂಕ ಇರುತ್ತಿತ್ತು? ಲೋಹ ಎಷ್ಟರಮಟ್ಟಿಗೆ ಬಂಡವಾಳವೋ ಶ್ರಮಶಕ್ತಿಯೂ ಅಷ್ಟೇ ಬಂಡವಾಳ ಎಂಬುದನ್ನೇ ಅವರು ಅರಿಯಬೇಕು. ಅಹಿಂಸೆಯನ್ನು ಅಂಗೀಕರಿಸಿದರೇ ಆ ಪ್ರಜ್ಞೆ ಬರುವುದು.

ಆ ಪ್ರಜ್ಞೆ ಬಂದು ತಮ್ಮ ಸ್ಥಾನಕ್ಕೆ ಅವರು ಬಂದುಬಿಟ್ಟಮೇಲೆ ಅಹಿಂಸೆ ಅನಾವಶ್ಯಕವೆಂದಲ್ಲ. ಆಗ ಅವರು ಅಹಿಂಸೆಯನ್ನು ಕೈಬಿಟ್ಟುದಾದರೆ ಅವರೂ ಬಂಡವಾಳಗಾರರಷ್ಟೇ ಕೆಟ್ಟುಹೋದಾರು, ಅವರೂ ಶೋಷಕರೇ ಆಗಿಬಿಟ್ಟಾರು. ತಮ್ಮ ಶಕ್ತಿಯ ಅರಿವು, ಜತೆಗೆ ಅಹಿಂಸೆ ಸೇರಿದರೆ ಬಂಡವಾಳದೊಡನೆ ಅವರು ಸಹಕರಿಸಿ ಅದನ್ನು ಯೋಗ್ಯ ಉಪಯೋಗಕ್ಕೆ ಹಚ್ಚಿಯಾರು. ಆಗ ಗಿರಣಿ, ಗಿರಣಿಯ ಯಂತ್ರ—ಶೋಷಕ ಮಾಲಿಕರಿಗೆ ಸೇರಿದ್ದು, ತಮ್ಮನ್ನು ಅರೆಯಲೆಂದೇ ಹುಟ್ಟಿರುವುದು ಎಂದು ತಿಳಿಯದೆ, ತಮ್ಮ ಉತ್ಪಾದನೆಯ ಸಾಧನಗಳೆಂದು ತಿಳಿದಾರು. ತಮ್ಮ ಆಸ್ತಿಪಾಸ್ತಿಯನ್ನು ಸಂರಕ್ಷಿಸುವಂತೆಯೇ ಅದನ್ನೂ ಸಂರಕ್ಷಿಸಿಯಾರು. ಕೆಲಸಕ್ಕೆ ಕದಿಯರು, ಕಡಿಮೆ ಕೆಲಸಮಾಡರು, ಆದಷ್ಟೂ ದುಡಿದಾರು. ದಿಟಕ್ಕೂ ಬಂಡವಾಳವರ್ಗ-ಶ್ರಮಿಕವರ್ಗ ಪರಸ್ಪರ ಒಬ್ಬರೊಬ್ಬರ ಧರ್ಮದರ್ಶಿಗಳು, ಇಬ್ಬರೂ ಸೇರಿ ಬಳಕೆಗಾರರ ಧರ್ಮದರ್ಶಿಗಳು. ಧರ್ಮದರ್ಶಿತ್ವ ಸಿದ್ಧಾಂತ ಏಕಪಕ್ಷೀಯವಲ್ಲ, ಅದರಲ್ಲಿ ಧರ್ಮದರ್ಶಿಯ ಶ್ರೇಷ್ಠತೆ ಎಳ್ಳಷ್ಟೂ ಅಡಕವಾಗಿಲ್ಲ. ನಾನು ತೋರಿಸಿರುವಂತೆ ಅದು ಉಭಯಪಕ್ಷೀಯ

ವ್ಯವಹಾರ. ಒಬ್ಬ ಇನ್ನೊಬ್ಬನ ಹಿತ ಕಾಪಾಡುವುದರಲ್ಲೇ ತನ್ನ ಹಿತವೂ ಅಡಕವಾಗಿದೆ ಎಂದು ತಿಳಿಯುತ್ತಾನೆ. ಭಗವದ್ಗೀತೆ ಹೇಳುತ್ತದೆ:

**" ದೇವಾನ್ ಭಾವಯತಾಽನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ "**

(ನೀವು ದೇವತೆಗಳ ಪೋಷಣೆಯನ್ನು ಯಜ್ಞದ ಮೂಲಕ ಮಾಡಿ. ಅವರು ನಿಮ್ಮನ್ನು ಪೋಷಿಸಲಿ. ಹೀಗೆ ಪರಸ್ಪರ ಪೋಷಣೆಯಿಂದ ನಿಮಗೆ ಪರಮ ಕಲ್ಯಾಣವಾಗಲಿ) ವಿಶ್ವದಲ್ಲಿ "ದೇವತೆಗಳು" ಎಂಬ ವಿಶಿಷ್ಟ ಜಾತಿ ಯಾವುದೂ ಇಲ್ಲ. ಉತ್ಪಾದನೆಯ ಶಕ್ತಿ ಉಳ್ಳ, ಸಮಾಜಕ್ಕಾಗಿ ಆ ಶಕ್ತಿಯನ್ನು ವಿನಿಯೋಗಿಸಿ ದುಡಿಯುವವರೆಲ್ಲರೂ ದೇವತೆಗಳು—ಬಂಡವಾಳಗಾರರಷ್ಟೇ ಕಾರ್ಮಿಕರೂ.೧೩೮

* * * *

## ಸಂಪುಗಳು (ಮುಷ್ಕರಗಳು)

ಸಂಪುಗಳು ನಿತ್ಯಸಂಗತಿಗಳೇ ಆಗಿಬಿಟ್ಟಿವೆ. ಅವು ಇಂದು ಇರುವ ಅಶಾಂತಿಯ ಸಂಕೇತ. ಎಷ್ಟೋ ಬಗೆಯ ಅಸ್ಪಷ್ಟ ವಿಚಾರ ಗಾಳಿಯಲ್ಲಿ ತೇಲುತ್ತಿವೆ. ಅಸ್ಪಷ್ಟ ಪ್ರತ್ಯಾಶೆಯೊಂದು ಎಲ್ಲರಿಗೂ ಸ್ಫೂರ್ತಿ ಕೊಡುತ್ತದೆ, ಆ ಅಸ್ಪಷ್ಟ ಪ್ರತ್ಯಾಶೆ ಸಾಕಾರರೂಪ ತಳೆಯದೆ ಹೋದರೆ ಘನ ನಿರಾಶೆ ಉಂಟಾಗುತ್ತದೆ. ಭಾರತದ ಕಾರ್ಮಿಕಪ್ರಪಂಚ ಸಲಹೆಗಾರರು ಹಾಗೂ ಮಾರ್ಗದರ್ಶಕರೆಂದುಕೊಳ್ಳುವವರ ಕೃಪೆಗೆ ಅಧೀನವಾಗಿದೆ. ಅವರು ಸದಾ ಪ್ರಾಮಾಣಿಕರಲ್ಲ, ಪ್ರಾಮಾಣಿಕರಲ್ಲದೆ ಇರುವಾಗಲೂ ವಿವೇಕಿಗಳೂ ಅಲ್ಲ. ಕಾರ್ಮಿಕರಿಗೋ ತಮ್ಮ ಸ್ಥಿತಿಗತಿಯ ಬಗೆಗೆ ಅತೃಪ್ತಿ. ಆ ಅತೃಪ್ತಿಗೆ ಎಲ್ಲ ಕಾರಣವೂ ಉಂಟು. ಮಾಲಿಕರನ್ನು ಶ್ರೀಮಂತರನ್ನಾಗಿ ಮಾಡಲು ತಾವೇ ಮುಖ್ಯಕಾರಣವೆಂದು ತಿಳಿಯುವಂತೆ ಅವರಿಗೆ ಕಲಿಸಲಾಗಿದೆ, ಅದು ನ್ಯಾಯವೇ. ಆದುದರಿಂದ ಅವರು ಕೆಲಸ ಬಿಡುವಂತೆ ಮಾಡಲು ಹೆಚ್ಚಿನ ಪ್ರಯತ್ನವೇ ಬೇಕಿಲ್ಲ. ಭಾರತದ ಕಾರ್ಮಿಕರ ಮೇಲೆ ರಾಜಕೀಯ ಪರಿಸ್ಥಿತಿಯೂ ತನ್ನ ಪ್ರಭಾವ ಬೀರತೊಡಗಿದೆ. ರಾಜಕೀಯ ಉದ್ದೇಶ್ಯಗಳಿಗಾಗಿ ಸಂಪು ಹೂಡಿಸ ಬಹುದೆಂಬ ಕಾರ್ಮಿಕ ನಾಯಕರಿಗೇನೂ ಕಡಿಮೆಯಿಲ್ಲ.

ನನ್ನ ಅಭಿಪ್ರಾಯದಲ್ಲಿ ಕಾರ್ಮಿಕ ಮುಷ್ಕರಗಳನ್ನು ಅಂಥ ಉದ್ದೇಶ್ಯಕ್ಕೆ ಬಳಸುವುದು ಬಹಳ ತೀವ್ರ ದೋಷ. ಅಂಥ ಸಂಪುಗಳು ರಾಜಕೀಯ ಉದ್ದೇಶ್ಯವನ್ನು ಸಾಧಿಸಬಹುದು ಎಂಬುದನ್ನು ನಾನು ನಿರಾಕರಿಸುವುದಿಲ್ಲ. ಅಹಿಂಸಾತ್ಮಕ ಅಸಹಕಾರದ ಪರಿಧಿಯಲ್ಲಿ ಅದು ಅಡಕವಾಗುವುದಿಲ್ಲ. ಕಾರ್ಮಿಕರು ದೇಶದ ರಾಜಕೀಯ ಪರಿಸ್ಥಿತಿಯನ್ನು ಅರಿತು, ಸಮಷ್ಟಿ ಹಿತಕ್ಕಾಗಿ ದುಡಿಯಲು ಸಿದ್ಧರಾಗುವವರೆಗೆ ಕಾರ್ಮಿಕರನ್ನು ರಾಜಕೀಯಕ್ಕಾಗಿ ಬಳಸುವುದು ಅತ್ಯಂತ ಅಪಾಯಕರ ಎಂಬುದನ್ನು ಗ್ರಹಿಸಲು ಹೆಚ್ಚು ಬುದ್ಧಿಶಕ್ತಿಯನ್ನೇನೂ ವ್ಯಯಿಸಬೇಕಾಗಿಲ್ಲ. ಇದನ್ನು ಇದ್ದಕ್ಕಿದ್ದಂತೆ ಅವರಿಂದ ನಿರೀಕ್ಷಿಸುವಂತಿಲ್ಲ, ಅವರು ತಮ್ಮ ಸ್ಥಿತಿಗತಿಗಳನ್ನೇ ಸುಧಾರಿಸಿಕೊಂಡು ತಮ್ಮ ದೇಹ-ಆತ್ಮಗಳನ್ನು ಚೊಕ್ಕವಾಗಿ ಭರಿಸಿಕೊಂಡು ಹೋಗುವವರೆಗೆ ಈ ಮಟ್ಟವನ್ನು ಅವರಿಂದ ನಿರೀಕ್ಷಿಸಬಾರದು. ಆದುದರಿಂದ ಸದ್ಯದ ಸ್ಥಿತಿಯಲ್ಲಿ ಕಾರ್ಮಿಕರು ನೀಡಬಹುದಾದ ಅತಿಹೆಚ್ಚಿನ ಕಾಣಿಕೆಯೆಂದರೆ ತಮ್ಮ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳುವುದು, ವಿಷಯ ಚೆನ್ನಾಗಿ ತಿಳಿದುಕೊಳ್ಳುವುದು, ತಮ್ಮ ಹಕ್ಕುಗಳಿಗಾಗಿ ಆಗ್ರಹ ತೊಡುವುದು, ತಾವು ಪ್ರಧಾನಪಾತ್ರ ವಹಿಸಿ ಉತ್ಪತ್ತಿಮಾಡುವ ವಸ್ತು ಯೋಗ್ಯವಾಗಿ ಉಪಯೋಗವಾಗಬೇಕೆಂದು ಮಾಲೀಕರನ್ನೂ ಆಗ್ರಹಪಡಿಸುವುದು. ಆದುದರಿಂದ ಕಾರ್ಮಿಕರೂ ಒಡೆತನದಲ್ಲಿ ಪಾಲುಗಾರರಾಗುವ ಮಟ್ಟಕ್ಕೆ ಏರುವುದೇ ಅವರ ನಿಜವಾದ ವಿಕಾಸ. ಆದುದರಿಂದ ಸಂಪುಗಳು ಕೇವಲ ಅವರ ಸ್ಥಿತಿಗತಿಯ ಪ್ರತ್ಯಕ್ಷ ಸುಧಾರಣೆಗಾಗಿಯೇ ನಡೆಯಬೇಕು; ದೇಶಪ್ರೇಮ ಸಾಕಷ್ಟು ಬಂದಮೇಲೆ ತಾವು ತಯಾರಿಸುವ ವಸ್ತುಗಳ ಬೆಲೆಗಳ ನಿಯಮನಕ್ಕಾಗಿಯೂ ನಡೆಯಬಹುದು.

ಯಶಸ್ವೀ ಸಂಪಿನ ಕರಾರುಗಳು ಸರಳ. ಅವು ಪೂರೈಕೆಯಾದಲ್ಲಿ ಯಾವ ಮುಷ್ಕರವೂ ಎಂದೂ ವಿಫಲವಾಗಬೇಕಿಲ್ಲ.

೧. ಸಂಪಿನ ಕಾರಣ ನ್ಯಾಯವಾದುದಿರಬೇಕು.

೨. ಸಂಪು ಹೂಡುವವರಲ್ಲಿ ಹೆಚ್ಚುಕಡಿಮೆ ಏಕಾಭಿಪ್ರಾಯವಿರಬೇಕು.

೩. ಸಂಪು ಹೂಡದವರ ವಿಷಯದಲ್ಲಿ ಹಿಂಸೆ ಎಸಗತಕ್ಕದ್ದಲ್ಲ.

೪. ಸಂಪಿನ ಅವಧಿಯಲ್ಲಿ ಆ ಕೆಲಸಗಾರರು ಯಾವುದಾದರೂ ಪ್ರಯೋಜನಕರ

ವಾದ, ಉತ್ಪಾದಕವಾದ ತಾತ್ಕಾಲಿಕ ಉದ್ಯೋಗವನ್ನು ಆಶ್ರಯಿಸಿ ತಮ್ಮ ನಿರ್ವಾಹ ತಾವೇ ನಡೆಸಿಕೊಳ್ಳಬೇಕು.

೫. ಸಂಪು ಹೂಡುವವರ ಬದಲಾಗಿ ಕೆಲಸಮಾಡಲು ಬೇರೆ ಕೆಲಸಗಾರರು ಇರುವಾಗ ಸಂಪು ಪರಿಹಾರವಲ್ಲ. ಅಂಥ ಸ್ಥಿತಿಯಲ್ಲಿ ಅನ್ಯಾಯವಾದ ನಡೆವಳಿಕೆ, ಸಾಲದೆ ಬರುವ ವೇತನ ಇತ್ಯಾದಿ ಕೊರತೆಗಳಿದ್ದರೆ ರಾಜೀನಾಮೆಯೊಂದೇ ಮಾರ್ಗ.

೬. ಈ ಮೇಲೆ ತಿಳಿಸಿದ ಯಾವುದೇ ಷರತ್ತಿಲ್ಲದೆಯೂ ಯಶಸ್ವೀ ಸಂಪುಗಳು ನಡೆದಿವೆ. ಮಾಲೀಕರು ದುರ್ಬಲರೂ, ಅಪರಾಧಿಮನೋಭಾವದಿಂದ ಕೂಡಿದ್ದವರೂ ಆಗಿದ್ದರೆಂದು ಮಾತ್ರ ಆ ನಿದರ್ಶನಗಳು ಸಿದ್ಧಪಡಿಸುತ್ತವೆ. ಕೆಟ್ಟ ಮಾದರಿಗಳನ್ನು ಅನುಸರಿಸಿ ಎಷ್ಟೋ ವೇಳೆ ನಾವು ಭಯಂಕರ ತಪ್ಪುಗಳನ್ನು ಎಸಗುತ್ತೇವೆ. ನಮಗೆ ಪೂರಾ ತಿಳಿವಳಿಕೆಯಿಲ್ಲದ ನಿದರ್ಶನಗಳನ್ನು ಅನುಕರಿಸದೆ ಯಶಸ್ಸಿಗೆ ಆವಶ್ಯಕವಾದ ನಿಯಮಗಳನ್ನು ಅನುಸರಿಸುವುದೇ ಅತ್ಯಂತ ಕ್ಷೇಮಕರ ಮಾರ್ಗ.೧೯೩೯

ಅಸ್ಸಾಂ–ಬಂಗಾಳ ರೈಲ್ವೆ ಹಾಗೂ ಸ್ಟೀಮರ್ ಕೆಲಸಗಾರರ ಸಂಪು ಸಾಮಾನ್ಯವಾದುದಕ್ಕಿಂತ ಭಿನ್ನ. ಬೇರೆ ಕಾರ್ಮಿಕರ ಸಂಘಕ್ಕೆ ಸಹಾನುಭೂತಿ ಪರವಾಗಿ ನಡೆದ ಈ ಮುಷ್ಕರ ನನ್ನ ತಿಳಿವಳಿಕೆಯ ಮಟ್ಟಿಗೆ ಮೊದಲಿನದು. ಆದುದರಿಂದ ಇವು ಸಹಾನುಭೂತಿಪರವಾದುವು, ಮಾನವೀಯವಾದುವು ಹಾಗೂ ರಾಜಕೀಯವಾದುವು. ರೈಲ್ವೆಯ ಲೈನಿನ ಮೇಲೆ, ಅದರಲ್ಲೂ ವಿಶೇಷವಾಗಿ ಗೌಹತಿ, ಚಿತ್ತಗಾಂಗ್ ಹಾಗೂ ಬಾರಿಸಾಲ್‌ಗಳಲ್ಲಿ ಕೆಲಸಗಾರರನ್ನು ಕಾಣುವ ಸುಯೋಗ ನನಗೆ ಒದಗಿತ್ತು. ಅವರೊಡನೆ ತೆರೆದ ಮನಸ್ಸಿನಿಂದ ಮಾತನಾಡಿದಮೇಲೆ ಅವರ ಕೃತಿಯ ಪರಿಣಾಮದ ಪೂರ್ಣ ಅರಿವು ಅವರಿಗೆ ಆಗಿರಲಿಲ್ಲವೆಂಬುದು ನನ್ನ ನಿರ್ಣಯವಾಯಿತು. ಸಂಪು ಹೂಡಿಬಿಟ್ಟಿರುವುದರಿಂದ ಅದರ ಫಲ ಭೋಗಿಸಲು ಅವರು ತಯಾರಾಗಿಬಿಟ್ಟಿದ್ದಾರೆ, ಅಷ್ಟೆ. ಹೊರಗಡೆಯ ಮನುಷ್ಯ ಯಾರೇ ಆಗಲಿ, ಪರಿಸ್ಥಿತಿ ತನ್ನ ಕೈಲಿದ್ದರೆ ಅದನ್ನು ಹೇಗೆ ನಿರ್ವಹಿಸುತ್ತಿದ್ದೆ ಎಂದು ಹೇಳುವುದು ಅಪಾಯಕರ ಹಾಗೂ ಔದಾರ್ಯ ರಹಿತವಾದುದು. ಅಭಿಪ್ರಾಯ ಹೇಳುವ ಸಾಹಸ ಮಾಡಬಹುದಾದರೆ,

ಆ ಕಾರ್ಮಿಕರು ದಯಾಪರವಾದ ಸಂಪಿಗೆ ತಯಾರಿರಲಿಲ್ಲ ಎಂದೇನು. ಯಶಸ್ವೀ ಸಹಾನುಭೂತಿಪರ ಮುಷ್ಕರಕ್ಕೆ ಅಗತ್ಯವಿದ್ದಷ್ಟುಮಟ್ಟಿನ ರಾಷ್ಟ್ರೀಯ ಪ್ರಜ್ಞೆಯ ಮಟ್ಟವನ್ನು ಇನ್ನೂ ಪಡೆದಿಲ್ಲ. ಅದರ ತಪ್ಪೆಲ್ಲ ನಮ್ಮದು. ರಾಷ್ಟ್ರದ ಸೇವೆಯಲ್ಲಿ ಆಸಕ್ತಿ ವಹಿಸಿರುವ ನಾವು ಇತ್ತೀಚಿನವರೆಗೂ ಈ ವರ್ಗಗಳ ಅಗತ್ಯ ಆಕಾಂಕ್ಷೆಗಳನ್ನು ಅರಿಯುವ ಗೋಜಿಗೇ ಹೋಗಿರಲಿಲ್ಲ, ರಾಜಕೀಯ ಸ್ಥಿತಿಗತಿಗಳ ವಿಷಯವಾಗಿಯೂ ಅವರಿಗೆ ತಿಳಿವಳಿಕೆಯನ್ನೂ ಕೊಡಲಿಲ್ಲ. ಪ್ರೌಢಶಾಲೆ, ಕಾಲೇಜುಗಳನ್ನು ಹೊಕ್ಕು ಹೊರಬಂದವರಷ್ಟೇ ರಾಷ್ಟ್ರೀಯ ಕೆಲಸಕ್ಕೆ ತಕ್ಕವರು ಎಂದು ತಿಳಿದುಕೊಂಡಿದ್ದೆವು. ಆದುದರಿಂದ ದುಡಿಮೆಗಾರ ಹಾಗೂ ಕಸಬುದಾರ ವರ್ಗಗಳು ತಮ್ಮದಲ್ಲದ ಹಿತಕ್ಕಾಗಿ ದುಡಿವ, ತ್ಯಾಗಮಾಡುವ ಭಾವನೆಯನ್ನು ಇದ್ದಕ್ಕಿದ್ದಂತೆ ಪಡೆಯುವರೆಂದು ನಿರೀಕ್ಷಿಸುವುದು ಅನುಚಿತ. ಅವರನ್ನು ನಾವು ರಾಜಕೀಯ ಅಥವಾ ಇತರ ಉದ್ದೇಶ್ಯಗಳಿಗಾಗಿ ಉಪಯೋಗಿಸಿಕೊಳ್ಳದೆ ಇರಬಹುದು. ಅವರಿಗೆ ಸ್ವಾವಲಂಬನ ಕಲಿಸುವುದು, ಅವರ ಕರ್ತವ್ಯ ಹಾಗೂ ಹಕ್ಕುಗಳ ಅರಿವು ಉಂಟು ಮಾಡಿಕೊಡುವುದು, ತಮ್ಮ ನ್ಯಾಯವಾದ ಕುಂದುಕೊರತೆಗಳನ್ನು ತಾವೇ ಸರಿಪಡಿಸಿಕೊಳ್ಳುವಂಥ ಸ್ಥಿತಿಗೆ ಅವರನ್ನು ತರುವುದು— ಇದೇ ನಾವು ಅವರಿಗೆ ಸಲ್ಲಿಸಬಹುದಾದ ಅತ್ಯುತ್ತಮ ಸೇವೆ. ಆಗಲೇ ಅವರು ರಾಜಕೀಯ, ರಾಷ್ಟ್ರೀಯ ಅಥವಾ ದಯಾಪರವಾದ ಸೇವೆಗೆ ಸಿದ್ಧರು, ಅದುವರೆಗೆ ಅಲ್ಲ.

ಆದುದರಿಂದ ಕಾಲಕ್ಕೆ ಮುನ್ನ ಸಹಾನುಭೂತಿಪರ ಸಂಪುಗಳಲ್ಲಿ ಭಾಗ ವಹಿಸುವುದು ನಮ್ಮ ಪಕ್ಷಕ್ಕೇ ಅಪಾರ ಹಾನಿ ಉಂಟುಮಾಡೀತು. ನಮ್ಮ ಅಹಿಂಸಾತ್ಮಕ ಕಾರ್ಯಕ್ರಮದಲ್ಲಿ ಸರ್ಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸಿ ಲಾಭ ಪಡೆವ ವಿಚಾರವನ್ನು ಕೈಬಿಡಲೇಬೇಕು. ನಮ್ಮ ಒಂದು ಕ್ರಿಯೆ ಶುದ್ಧವಾಗಿದ್ದು ಸರಕಾರದ್ದು ಅಶುದ್ಧವಾಗಿದ್ದರೆ ನಮ್ಮ ಶುದ್ಧತೆಯಿಂದಾಗಿ ಸರ್ಕಾರ ತಾನೂ ಶುದ್ಧವಾಗದೆ ಹೋದರೆ, ಆ ಕಾರಣದಿಂದಲೆ ಅದು ಇಕ್ಕಟ್ಟಿಗೆ ಸಿಕ್ಕಿಕೊಳ್ಳುತ್ತದೆ. ಹೀಗೆ ಎರಡೂ ಪಕ್ಷಗಳ ಶುದ್ಧೀಕರಣದ ಪ್ರಯತ್ನ ಇಬ್ಬರಿಗೂ ಲಾಭಕರ, ಅದು ಬಿಟ್ಟು ಪರಸ್ಪರ ವಿನಾಶದ ಪ್ರಯತ್ನದಿಂದ ವಿನಾಶಕಾರಿಯೂ ಅಶುದ್ಧವಾಗಿಯೇ ಉಳಿಯುತ್ತಾನೆ, ಅವನು ಯಾರನ್ನು ವಿನಾಶಗೊಳಿಸಬೇಕೆಂದು ಬಯಸುವನೋ ಅವನ ದರ್ಜೆಗೇ ತಾನೂ ಇಳಿದುಬಿಡುತ್ತಾನೆ.

ಆದುದರಿಂದ ನಮ್ಮ ಸಹಾನುಭೂತಿಪರವಾದ ಸಂಪುಗಳೂ ಆತ್ಮಶುದ್ಧಿಗಾಗಿ ನಡೆವ ಸಂಪುಗಳಾಗಿರಬೇಕು, ಅಂದರೆ ಅದೇ ಅಸಹಕಾರ. ಒಂದು ಕುಂದನ್ನು ಸರಿಪಡಿಸಿಕೊಳ್ಳಲೆಂದು ಸಂಪು ಹೂಡುವಾಗ ಆ ಕುಂದಿನಲ್ಲಿ ಪಾಲುಗೊಳ್ಳಲು ನಾವು ನಿರಾಕರಿಸುತ್ತೇವೆ, ಹೀಗಾಗಿ ಕುಂದುಂಟುಮಾಡುವವನನ್ನು ಅವನ ಪಾಡಿಗೆ ಅವನನ್ನೇ ಬಿಡುತ್ತೇವೆ, ಅಂದರೆ ಆ ಕುಂದನ್ನು ಮುಂದುವರಿಸುವುದರ ದೋಷವನ್ನು ಆತ ಕಂಡುಕೊಳ್ಳಲು ನಾವು ಬಿಡುತ್ತೇವೆ. ಅಂಥ ಸಂಪಿನ ಹಿಂದೆ ಕೆಲಸಕ್ಕೆ ಹಿಂತಿರುಗದಂಥ ಸ್ಥಿರಸಂಕಲ್ಪ ಇದ್ದರೇನೇ ಅದರ ಯಶಸ್ಸು ಸಾಧ್ಯ.

ಭಾರಿಭಾರಿಯಾದ ಯಶಸ್ವೀ ಮುಷ್ಕರಗಳನ್ನು ನಡೆಸಿರುವವನಾದುದರಿಂದ ಈಗಾಗಲೇ ಇಲ್ಲಿ ಉಲ್ಲೇಖಿಸಿರುವ ಸೂತ್ರಗಳನ್ನು ಸಂಪಿನ ನಾಯಕರ ಮಾರ್ಗದರ್ಶನಕ್ಕಾಗಿ ಪುನರುಚ್ಚರಿಸುತ್ತೇನೆ :

೧. ನಿಜವಾದ ಕುಂದುಕೊರತೆಯಿಲ್ಲದೆ ಸಂಪು ಹೂಡತಕ್ಕದ್ದಲ್ಲ.

೨. ತಮ್ಮದೇ ಆದ ಉಳಿತಾಯದಿಂದಲಾಗಲಿ ಅಥವಾ ಹಿಂಜುವುದು, ನೂಲುವುದು ಅಥವಾ ನೇಯುವುದೇ ಮುಂತಾದ ತಾತ್ಕಾಲಿಕವಾದ ಕೆಲಸಗಳಲ್ಲಿ ತೊಡಗಿ ತಮ್ಮ ನಿರ್ವಾಹವನ್ನು ತಾವೇ ನಡೆಸಿಕೊಳ್ಳಲು ಸಿದ್ಧವಿರದೆ ಯಾವ ಸಂಪೂ ನಡೆಯತಕ್ಕದ್ದಲ್ಲ. ಸಂಪುಗಾರರು ಸಾರ್ವಜನಿಕ ಚಂದಾ ಅಥವಾ ಜನರ ಔದಾರ್ಯದ ಮೇಲೆ ಅವಲಂಬಿಸತಕ್ಕದ್ದಲ್ಲ.

೩. ಬದಲಿಸಲಾಗದ ಕನಿಷ್ಠ ಬೇಡಿಕೆಯನ್ನು ಗೊತ್ತುಪಡಿಸಿ ಸಂಪು ಹೂಡುವ ಮುನ್ನ ಸಂಪುಗಾರರು ಅದನ್ನು ಘೋಷಿಸಬೇಕು.

ನ್ಯಾಯವಾದ ಕುಂದುಕೊರತೆ ಇದ್ದೂ, ಅನಿರ್ದಿಷ್ಟಕಾಲ ತಡೆಯುವ ಶಕ್ತಿ ಸಂಪುಗಾರರಿಗೆ ಇದ್ದರೂ, ಅವರ ಬದಲು ಬಂದು ಕೆಲಸಮಾಡುವ ಜನ ಇದ್ದಲ್ಲಿ ಸಂಪು ವಿಫಲವಾಗಬಹುದು. ಆದುದರಿಂದ ತನ್ನ ಬದಲು ಸುಲಭವಾಗಿ ಬೇರೆಯವರು ಬಂದಾರು ಎಂದು ತಿಳಿವ ವಿವೇಕಶಾಲಿ ಕೂಲಿ ಅಥವಾ ಸೌಕರ್ಯಗಳ ಹೆಚ್ಚಳಕ್ಕಾಗಿ ಸಂಪು ಹೂಡ. ಆದರೆ ದಯಾಪರ ಅಥವಾ ರಾಷ್ಟ್ರಪ್ರೇಮಿ, ಬೇಡಿಕೆಗಿಂತ ಪೂರೈಕೆ ಹೆಚ್ಚು ಇದ್ದರೂ ಸಹ, ತನ್ನ ನೆರೆಯವನ ಕಷ್ಟದೊಂದಿಗೆ ಸಹಾನುಭೂತಿ ತೋರಿಸಲೋಸುಗ ಆ ಇಚ್ಛೆ ಉಂಟಾದಾಗ

ಸಂಪು ಹೂಡಿಯಾನು. ನಾನು ವಿವರಿಸಿರುವ ಬಗೆಯ ಸಭ್ಯವಾದ ಸಂಪಿನಲ್ಲಿ ಬೆದರಿಕೆ, ಭಯೋತ್ಪಾದನೆ ಅಥವಾ ಅಂಥದೇ ಇತರ ಹಿಂಸಾಚಾರಗಳಿಗೆ ಎಡೆಯೇ ಇಲ್ಲವೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಆದಕಾರಣ ಇತ್ತೀಚೆಗೆ ಚಿತ್ತಗಾಂಗ್‌ನ ಬಳಿ ಸಂಭವಿಸಿದ ರೈಲು ಉರುಳಿಸಿದುದು ಸಂಪುಗಾರರ ಕುಚೇಷ್ಟೆಯ ಫಲವೆಂದು ತಿಳಿದರೆ ನನಗೆ ಅತೀವ ದುಃಖವಾದೀತು. ನಾನು ಸೂಚಿಸಿರುವ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿದ ಪಕ್ಷದಲ್ಲಿ ಈ ಸಂಪುಗಾರರ ಮಿತ್ರರು ಕಾಂಗ್ರೆಸಿನ ಅಥವಾ ಇತರ ಯಾವುದೇ ಸಾರ್ವಜನಿಕ ನಿಧಿಯಿಂದ ಸಹಾಯ ಅಪೇಕ್ಷಿಸುವಂತೆ ಎಂದೂ ಸಲಹೆ ಕೊಡಬಾರದಿತ್ತು. ಸಂಪುಗಾರರ ಸಹಾನುಭೂತಿಯ ಬೆಲೆ ಅವರು ಪಡೆದ, ಸ್ವೀಕರಿಸಿದ ಹಣಕಾಸಿನ ಸಹಾಯದ ಮಟ್ಟಿಗೆ ಕುಗ್ಗಿತು. ಸಹಾನುಭೂತಿಪರ ಮುಷ್ಕರದ ಮಹಿಮೆ ಅದರಿಂದ ಆಗುವ ಅನಾನುಕೂಲ, ನಷ್ಟವನ್ನು ಸಹಾನುಭೂತಿಪರರು ಸಹಿಸುವುದರಲ್ಲೇ ಇದೆ.

ಬೆದರಿಕೆ, ಆಸೆಲಾಲಸೆಗಳಿಗೂ ಜಗ್ಗದೆ ಪೌರುಷದಿಂದ ನಿಂತಿರುವ ಸಂಪುಗಾರರು ಹಾಗೂ ಅವರಿಗಾಗಿ—ಅವರ ಸಂಖ್ಯೆ ಶೇಕಡಾ ೫೦ಕ್ಕೂ ಹೆಚ್ಚು—ಏನು ಮಾಡಬೇಕೆಂಬುದನ್ನು ಕುರಿತು ನಾನು ಈಗಾಗಲೇ ಬಂಗಾಳ ಪ್ರಾಂತೀಯ ಕಾಂಗ್ರೆಸ್ ಸಮಿತಿಗೆ ನನ್ನ ಅಭಿಪ್ರಾಯ ಕೊಟ್ಟಿದೇನೆ. ಅದಕ್ಕೇ ನಾನು ಅಂಟಿಕೊಳ್ಳಬಯಸುವೆ. ಚಾಂದ್‌ಪುರದಲ್ಲಿ ಅತ್ಯಾಚಾರಕ್ಕೆ ಬಲಿಯಾದ ಕೂಲಿಗಾರರಿಗೆ ಸಹಾನುಭೂತಿ ತೋರಿಸುವ ಏಕೈಕ ಉದ್ದೇಶ್ಯದಿಂದಲೇ, ತಮ್ಮ ಸೋದರರನ್ನು ಬೆದರಿಸದೆ ಸಂಪು ಹೂಡಿದರೆ ಅವರಿಗೆ ಹಾಗೆ ಮಾಡಲು ಸರ್ವ ನೈತಿಕ ಅಧಿಕಾರವೂ ಉಂಟು, ಅವರು ಅನಿರೀಕ್ಷಿತಮಟ್ಟದ ರಾಷ್ಟ್ರಪ್ರೇಮವನ್ನೂ ಸೋದರಭಾವವನ್ನೂ ತೋರಿಸಿದಂತೆಯೇ. ಸರಕಾರ ಪೂರ್ಣವಾಗಿಯೂ, ಸ್ಪಷ್ಟವಾಗಿಯೂ ಕ್ಷಮೆ ಬೇಡಿದ ಹೊರತು, ಸಂಬಂಧಪಟ್ಟವರಿಗೆ ಕೂಲಿಗಾರರನ್ನು ವಾಪಸು ಕಳುಹಿಸಲು ಹಣವನ್ನು ವಾಪಸು ಮಾಡಿದ ಹೊರತು ಕೆಲಸಗಾರರು ಕೆಲಸಕ್ಕೆ ಹಿಂತಿರುವುದಿಲ್ಲವೆಂದು ಆಶಿಸುತ್ತೇನೆ.೧೪೦

* * * *

(೧೯೧೭ರಲ್ಲಿ ನಡೆದ ಅಹಮದಾಬಾದಿನ ಗಿರಣಿ ಸಂಪಿನ ಸಂಬಂಧದಲ್ಲಿ ನಡೆದ ತಮ್ಮ ಉಪವಾಸದ ಬಗೆಗೆ ಕೇಳಿದ ಪ್ರಶ್ನೆಯೊಂದಕ್ಕೆ ಉತ್ತರವಾಗಿ ಗಾಂಧೀಜೀ ಮುಂದೆ ಕಂಡಂತೆ ಬರೆದರು.)

ಗಿರಣಿ ಸಂಪಿಗೆ ಸಂಬಂಧಿಸಿದಂತೆ ೧೯೧೮ರಲ್ಲಿ ನಾನು ಕೈಗೊಂಡ ಉಪವಾಸ ನನ್ನ "ಪ್ರೇಮಿಗಳು" ಆದ ಗಿರಣಿ ಕೆಲಸಗಾರರ ವಿರುದ್ಧ ನಡೆದುದೇ ಹೊರತಾಗಿ "ಅತ್ಯಾಚಾರಿಗಳ"—ಗಿರಣಿ ಮಾಲೀಕರ ವಿರುದ್ಧವಾದುದಲ್ಲ. ನನ್ನ ಉಪವಾಸದಿಂದ ನನ್ನ ಆತ್ಮೀಯ ಮಿತ್ರರಾದ ಗಿರಣಿ ಮಾಲೀಕರು ಅದರಿಂದ ಪ್ರಭಾವಿತರಾಗಿಯೇ ತೀರುವರು—ಆದುದರಿಂದ ಅದು ದೋಷರಹಿತ ವಲ್ಲ ಎಂದು ಆಗ ನಾನು ಪ್ರಕಟಪಡಿಸಿದೆ. ನನ್ನ ಸಮಕ್ಷಮದಲ್ಲಿ ಇಪ್ಪತ್ತೊಂದು ದಿನಗಳ ಕಾಲ ನನ್ನ ಸಂಗಡಿಗರಾದ ಗಿರಣಿ ಕೆಲಸಗಾರರು ತಾವು ಉಚ್ಚರಿಸಿದ್ದ ವ್ರತವನ್ನು ಭಂಗಮಾಡುವುದನ್ನು ಪರಿವೆಯಿಲ್ಲದೆ ತಾಳುವುದು ನನಗೆ ಸಾಧ್ಯ ವಿರಲಿಲ್ಲ. ಉಪವಾಸದ ಪರಿಣಾಮ ವಿದ್ಯುತ್ತಿನಂತಾಯಿತು. ಅತ್ತಿತ್ತ ತುಯ್ದಾಡುತ್ತಿದ್ದ ಕಾರ್ಮಿಕರು ಕೂಡಲೇ ಸ್ಥಿರಸಂಕಲ್ಪರಾದರು.೧೪೧

ಬ್ರಿಟಿಷ್ ಶಾಂತಿವಾದಿಗಳ ಮುಖಪತ್ರವಾದ "ಇನ್ನು ಯುದ್ಧ ಬೇಡ" ಎಂಬ ಪತ್ರಿಕೆಯಿಂದ ಆಯ್ದ ಭಾಗವೊಂದನ್ನು ಗೆಳೆಯರೊಬ್ಬರು ನನಗೆ ಕಳಿಸಿ ದಾರೆ. ಶಾಂತಿವಾದೀ ಸಂಪಿಗೆ ಒರೆಗಲ್ಲಾಗಿ ಶ್ರೀ ಎ. ಫ್ರೆನ್ನರ್ ಬ್ರಾಕ್ವೇ ಉಲ್ಲೇಖಿಸಿರುವ ಸಂಗತಿಗಳನ್ನು ಅದರಿಂದ ಎತ್ತಿ ಇಲ್ಲಿ ಕೊಡುತ್ತಿದೇನೆ :

೧. ಮಾನವ ಜೀವನವನ್ನು ನಾಶಮಾಡುವ ಸಾಮಾಜಿಕ ಅನಿಷ್ಟಗಳ ವಿರುದ್ಧ ಹೂಡುವ ಸಂಪೂ ಸಹ ಯುದ್ಧದ ವಿರುದ್ಧ ನಡೆಸುವ ಸಂಪಿನಷ್ಟೇ ಶಾಂತಿವಾದೀ ಕಾರ್ಯ. (ಉಪವಾಸ ಕೊಲ್ಲುವ ಅಲ್ಪವೇತನಗಳೂ ಕೋವಿಗಳು ಕೊಲ್ಲುವಷ್ಟೇ ಮನುಷ್ಯನನ್ನೂ ಕೊಲ್ಲುತ್ತವೆ).

೨. ಆ ದೋಷಗಳನ್ನು ನಿವಾರಿಸಲು "ಸಂವಿಧಾನಬದ್ಧ" ಮಾರ್ಗಗಳನ್ನು ಉಪಯೋಗಿಸಬಹುದೆಂದು ಹೇಳಿದರೆ ಯುದ್ಧಕ್ಕೂ ಹಾಗೆಯೇ ಮಾಡ ಬಹುದಲ್ಲ? ನಮ್ಮ "ಸಂವಿಧಾನಬದ್ಧ" ಮಾರ್ಗ ಅಪರ್ಯಾಪ್ತ. ಎರಡು ವರ್ಷಗಳ ಹಿಂದೆ ಮತದಾರರ ಕಲ್ಪನೆಯಲ್ಲಿ ವೇತನದ ಖೋತಾವೂ ಇರಲಿಲ್ಲ, ಯುದ್ಧವೂ ಇರಲಿಲ್ಲ.

೩. ವೇತನದ ಖೋತಾದ ವಿರುದ್ಧ ಹೂಡುವ ಸಂಪು (ಅದರಲ್ಲೂ ಸಾರ್ವತ್ರಿಕ ಸಂಪು) ಸರ್ಕಾರ ಅಥವಾ ರಾಷ್ಟ್ರವನ್ನು ಬಲಾತ್ಕರಿಸುವ ಪ್ರಯತ್ನವೆನ್ನುವು ದಾದರೆ ಯುದ್ಧದ ವಿರುದ್ಧ ಹೂಡುವ ಸಾರ್ವತ್ರಿಕ ಸಂಪಿಗೂ ಅದೇ

ಮಾತನ್ನೇ ಹೇಳಬಹುದು. ದೇಶದ ಬಹುಭಾಗ ಬೆಂಬಲ ನೀಡಿದ ಹೊರತು ಎರಡರಲ್ಲಿ ಯಾವುದೂ ನಿಜಕ್ಕೂ ಸಫಲವಾಗುವಂತೆಯೇ ಇಲ್ಲ.

೪. ಸಂಪನ್ನು ಆರ್ಥಿಕ ದಿಗ್ಬಂಧನದ ಕಾರ್ಯಕ್ರಮಕ್ಕೆ ಹೋಲಿಸುವುದು ಸರಿಯಲ್ಲ. ಹಸಿವಿನ ಭಯ ಇರುವುದು ಮೊದಲಾಗಿ ಸಂಪುಗಾರರಿಗೇ; ಅವರೇ ಮೊದಲು ಕಷ್ಟಪಡುವವರು. ನಿಜವಾಗಿಯೂ ಇತ್ತೀಚಿನ ಸಾರ್ವತ್ರಿಕ ಸಂಪಿನಲ್ಲಿ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಕಾರ್ಮಿಕ ಮಹಾಸಂಘ) ಜೀವ ಹಾಗೂ ಸ್ವಾಸ್ಥ್ಯರಕ್ಷಣೆಯ ಕೆಲಸದಲ್ಲಿ ಸಹಕರಿಸಲು ಸಿದ್ಧವಿತ್ತು. ಸರ್ಕಾರವೇ ಸಹಕಾರವನ್ನು ನಿರಾಕರಿಸಿತು.

೫. ಒಂದು ಸಂಪು ಶಾಂತಿವಾದಿಯೋ ಅಲ್ಲವೋ ಎಂಬುದನ್ನು ನಿರ್ಣಯಿಸುವುದು ಅದು ಯಾವ ಸ್ಫೂರ್ತಿಯಿಂದ ಪ್ರಾರಂಭವಾಗುತ್ತದೆ ಎಂಬುದೇ. ಯುದ್ಧಕ್ಕೆ ವಿರುದ್ಧವಾಗುವುದಕ್ಕಿಂತ ಹೆಚ್ಚಾಗಿ ಸರ್ಕಾರದ ಸದಸ್ಯರ ದ್ವೇಷದಿಂದ ಹುಟ್ಟುವ ಮುಷ್ಕರ ಅಂತರ್ಯುದ್ಧವಾಗಿ ಬೇಕಾದರೂ ಪರಿಣಮಿಸಬಹುದು, ಅಂಥದು ಶಾಂತಿವಾದಿಯಾಗದು, ಮಾಲೀಕರ ಅಥವಾ ಸರ್ಕಾರದ ಸದಸ್ಯರ ದ್ವೇಷದಿಂದ ಅಥವಾ ಸಮಾಜವಿರೋಧೀ ಭಾವನೆಯಿಂದ ಪ್ರೇರಿತವಾದ ವೇತನ ಖೋತಾದ ವಿರುದ್ಧವಾದ ಸಂಪೂ ಸಹ ಶಾಂತಿವಾದಿಯಾಗದು. ಆದರೆ ಆ ದೋಷಗಳಿಗೇ ವಿರುದ್ಧವಾದ ಭಾವನೆಯಿಂದ ಪ್ರೇರಿತವಾದಾಗ ಎರಡೂ ಶಾಂತಿವಾದೀ ಕೃತ್ಯಗಳೇ ಆದಾವು.

೬. ಎಷ್ಟೋ ವೇಳೆ ಆಡುವ ಮಾತುಗಳು ಶಾಂತಿವಾದೀ ಭಾವದಿಂದ ಕೂಡಿರದಿದ್ದರೂ, ಸಂಪುಗಾರರ ಕೃತಿಗಳಲ್ಲಿಯೂ ಆ ಭಾವ ಇನ್ನೂ ಅಪರೂಪವಾದರೂ, ಮಹಾಮುಷ್ಕರದ ಸಂದರ್ಭದಲ್ಲಿ ಆತ್ಮಬಲಿದಾನದ ನೈತಿಕ ಪ್ರತಿಭಟನೆಯದೇ ಪ್ರಧಾನ ಉದ್ದೇಶ್ಯವಾಗಿತ್ತು, ಸಮಾಜವಿರೋಧೀ ಶಕ್ತಿಯದಾಗಲೀ ವ್ಯಕ್ತಿದ್ವೇಷದ್ದಾಗಲೀ ಆಗಿರಲಿಲ್ಲ. ಅದೇ ಅದಕ್ಕೆ ಅಧ್ಯಾತ್ಮಬಲ ಕೊಟ್ಟದ್ದು; ಭಾಗವಹಿಸಿದ ಜನರ ಆಶ್ಚರ್ಯಕಾರಕ ಆತ್ಮಸಂಯಮದ ರಹಸ್ಯ ಇದರಲ್ಲೇ ಅಡಕವಾಗಿದೆ.

ಎಲ್ಲೋ ಆಗ ಈಗ ಕಾಣುವ ಸೈನಿಕಯುದ್ಧದ ತಾತ್ಕಾಲಿಕ ಕ್ರೂರ ಕೃತ್ಯಗಳನ್ನು ಮಾತ್ರ ನೋಡಿ ನಮ್ಮ ಸಮಾಜವ್ಯವಸ್ಥೆಯ ನಿರಂತರ ಕ್ರೂರ ಕರ್ಮಗಳಿಗೆ ಕುರುಡಾಗಿರುವ ಶಾಂತಿವಾದ ನಿರರ್ಥಕ. ಬರಿಯ ಯುದ್ಧದ

ಅಂತ್ಯವನ್ನಷ್ಟೇ ಅಲ್ಲದೆ ಅಶಾಂತಿಕಾರಕವಾದ ನಮ್ಮ ಸಭ್ಯತೆಯ ಅಂತ್ಯವನ್ನೂ ಅರಸುವ ವಿಶಾಲ ಮಾನವೀಯ ಆಂದೋಲನದಲ್ಲಿ ನಮ್ಮ ಶಾಂತಿವಾದ ವ್ಯಕ್ತವಾಗದಿದ್ದರೆ ಮಾನವಕುಲದ ಪ್ರಗತಿಯಾತ್ರೆಯಲ್ಲಿ ಅದಕ್ಕೆ ಬೆಲೆಯೇ ಇರದು. ಆಗ ಬಾಳ ಚೈತನ್ಯ ಮುಂದೆ ಮುಂದೆ ಪ್ರವಹಿಸೀತು, ಶಾಂತಿವಾದದಿಂದ ಪ್ರಭಾವಿತವಾಗದೆಯೇ.

ಈ ಅಂಶವನ್ನು ಮನಗಾಣುವಷ್ಟರ ಮಟ್ಟಿಗೆ 'ಯುದ್ಧ ಬೇಡ' ಎಂಬ ಆಂದೋಲನ ಕೃತಕೃತ್ಯವಾದೀತು."

ಈ ಪ್ರಶಂಸಾರ್ಹ ನಿಯಮಗಳಿಗೆ ಒಂದೇ ಒಂದು ಒರೆಗಲ್ಲನ್ನು ನಾನು ಸೇರಿಸಿಯೇನು. ಶಾಂತಿವಾದೀ ಸಂಪು ಪರಿಹಾರವಾಗಬೇಕಾದ ಕುಂದುಕೊರತೆಗೆ ಈಡಾಗಿರುವವರಿಗೆ ಮಾತ್ರ ಪರಿಮಿತವಾಗಿರಬೇಕು. ಉದಾಹರಣೆಗೆ, ತಮ್ಮ ಸ್ಥಿತಿಗತಿಯಿಂದ ತೃಪ್ತರಾಗಿರುವ ಟಿಂಬಕ್ಟೂವಿನ ಬೆಂಕಿಕಡ್ಡಿ ತಯಾರಿಕೆ ಕಾರ್ಮಿಕರು ಉಪವಾಸದ ಮಟ್ಟದ ಕೂಲಿ ಪಡೆಯುತ್ತಿರುವ ಅಲ್ಲಿನ ಗಿರಣಿ ಕೂಲಿಗಾರರ ಪರ ಸಹಾನುಭೂತಿ ತೋರಿಸಲು ಸಂಪು ಹೂಡಿದರೆ ಅದು ಹಿಂಸಾ ಬಗೆಯದಾದೀತು. ಟಿಂಬಕ್ಟೂವಿನ ಗಿರಣಿಯ ಒಡೆಯರಿಗೆ ತಾವು ಕೊಡುವ ಸುಂಕವನ್ನು ತಡೆಹಿಡಿದು ಬೇಕಿದ್ದರೆ ಅತ್ಯಂತ ಪರಿಣಾಮಕಾರಿಯಾಗಿ ಗಿರಣಿ ಕೆಲಸಗಾರರಿಗೆ ನೆರವಾಗಬಹುದು, ನೆರವಾಗಬೇಕು. ಆಗ ಇವರೇನೂ ಹಿಂಸೆಯ ಆರೋಪಕ್ಕೆ ಗುರಿಯಾಗರು. ಪ್ರತ್ಯಕ್ಷ ಕುಂದುಕೊರತೆ ಅನುಭವಿಸದಿದ್ದವರೂ ಕರ್ತವ್ಯಬದ್ಧರಾಗಿ ಸಂಪು ಹೂಡಬಹುದಾದ ಸಂದರ್ಭಗಳನ್ನು ಕಲ್ಪಿಸಿಕೊಳ್ಳಬಹುದು. ಹೀಗೆ ಮೇಲೆ ಹೇಳಿದ ನಿದರ್ಶನದಲ್ಲಿ ಬೆಂಕಿಕಡ್ಡಿ ಕಾರ್ಖಾನೆಯ ಒಡೆಯರು ಟಿಂಬಕ್ಟೂವಿನ ಗಿರಣಿಪತಿಗಳೊಡನೆ ಕೂಡಿಕೊಂಡು ಬಿಟ್ಟರೆನ್ನಿ. ಆಗ ಕಡ್ಡಿಪೆಟ್ಟಿಗೆ ಕಾರ್ಖಾನೆಯ ಕೆಲಸಗಾರರು ಗಿರಣಿ ಕೆಲಸಗಾರ ಬಾಂಧವರೊಡನೆ ಒಂದಾಗುವುದು ಅವರ ಸ್ಪಷ್ಟ ಕರ್ತವ್ಯ. ಇದನ್ನು ನಾನು ಕೇವಲ ನಿದರ್ಶನಕ್ಕಾಗಿ ಮಾತ್ರ ಹೇಳುತ್ತಿದೇನೆ. ಅಂತಿಮವಾಗಿ ಪ್ರತಿಯೊಂದು ಸಂದರ್ಭವನ್ನೂ ಅದರದರ ಅರ್ಹತೆಯ ಮೇಲೇ ತೀರ್ಮಾನಿಸಬೇಕಾದೀತು. ಹಿಂಸೆಯೊಂದು ನಿಗೂಢ ಶಕ್ತಿ. ಅದು ಇದೆಯೆಂದು ನಿಮಗೆ ಭಾಸವಾದರೂ ಆದರ ಇರವನ್ನು ಪತ್ತೆ ಹಚ್ಚುವುದು ಯಾವಾಗಲೂ ಅಷ್ಟು ಸುಲಭವಲ್ಲ.೧೪೨

## ಅಧಿಕೃತ – ಅನಧಿಕೃತ ಸಂಪುಗಳು

**ಪ್ರಶ್ನೆ**—ಮಾರ್ಚಿ ೩೦ರ ನಿಮ್ಮ ಲೇಖನದಲ್ಲಿ "ಕಾರ್ಮಿಕರ ಮುಷ್ಕರಗಳನ್ನು ಅವಸರಪಡಿಸಿ" ಹೋರಾಟದ ಪ್ರವಾಹವನ್ನು ಸತ್ಯಾಗ್ರಹಿಗಳು ಅಡ್ಡಿಪಡಿಸುವುದಿಲ್ಲವೆಂಬ ಆಶಯವನ್ನು ನೀವು ವ್ಯಕ್ತಪಡಿಸಿದೀರಿ ಅದೂ ಈ "ಅವಸರಪಡಿಸು" ಎಂಬ ಒಂದು ಮಾರ್ಮಿಕ ಮಾತಿನಲ್ಲಿ. ನಾನು ಮೊದಲು ಓದಿದಾಗ ಅದನ್ನು ವಿಶೇಷವಾಗಿ ಗಮನಿಸಲಿಲ್ಲ. ಅನಂತರ ಬಹುವಾಗಿ ವಿವರಿಸಬೇಕಾಯಿತು. ಜಾಗರೂಕ ಓದುಗನಾಗಿರದಿದ್ದರೆ, ಅಥವಾ ನಿಮ್ಮ ವಿಚಾರ ಹಾಗೂ ಬರೆಹದ ಶೈಲಿಯನ್ನು ತಿಳಿಯುವಷ್ಟು ತರಪೇತು ಇಲ್ಲದವನಾದರೆ ದಾರಿ ತಪ್ಪುವುದು ಸುಲಭ. "ಅವಸರಪಡಿಸು" ಎಂಬ ಪದದ ಅರ್ಥದ ಬಲವನ್ನು ತಿಳಿಯದೆ ಹೋದರೆ ಕಾರ್ಮಿಕರ ಎಲ್ಲ ಸಂಪುಗಳ ಮೇಲೂ ಕೆಂಡ ಕಾರಿದ್ದೀರೇನೋ ಎಂದು ಅರ್ಥಮಾಡಿಕೊಂಡುಬಿಡಬಹುದು.

ಯುದ್ಧದ ಬೋನಸ್ಸಿಗಾಗಿ ಇತ್ತೀಚಿಗೆ ನಡೆದ ಅಹಮದಾಬಾದಿನ ಹೋರಾಟದಿಂದಾಗಿ ಕಾರ್ಮಿಕರ ಮುಷ್ಕರಗಳೆಲ್ಲಕ್ಕೂ ನೀವು ವಿರೋಧಿಯೆಂದು ಯಾರೂ ಭಾವಿಸತಕ್ಕದ್ದಲ್ಲ. ಅಹಮದಾಬಾದಿನ ಮುಷ್ಕರ ತಡೆಯಲ್ಪಟ್ಟಿತು, ಆದರೆ ನೀವು ಅದನ್ನು ಅನುಮೋದಿಸಿದ್ದಿರಿ. ಕಾರ್ಮಿಕರೇನೋ ತಮ್ಮ ಬೇಡಿಕೆಗಳನ್ನು ಪಡೆದರು. ಅಹಮದಾಬಾದಿನಲ್ಲಿ ಕೆಲಸ ಕ್ರಮಪ್ರಕಾರ ನಡೆಯಿತು. ಕಾರ್ಮಿಕರ ಬೇಡಿಕೆಗಳನ್ನು ಸಮಂಜಸವಾಗಿ ಮಂಡಿಸಿದ್ದರು, ಪ್ರತಿಪಾದಿಸಿದ್ದರು, ಪಂಚಾಯಿತಿಯೂ ಮುಗಿದಿತ್ತು, ಪೂರಾ ಮುನ್ಸೂಚನೆ ನೀಡಲಾಗಿತ್ತು. ಸಂಪಿನ ಬಗ್ಗೆ ಒಂದು ಲಕ್ಷಕ್ಕೂ ಹೆಚ್ಚಿನ ಮತಗಳ ಗಣನೆ ನಡೆದಿತ್ತು. ಹೀಗೆ ಕ್ರಮಪ್ರಕಾರ ಕೆಲಸಗಳನ್ನೆಲ್ಲ ಮುಗಿಸಿದ ಬಳಿಕವೂ ಸಂಪನ್ನು ತಡೆಗಟ್ಟಲಾಗದಿದ್ದರೆ ಅಂಥ ಸಂಪನ್ನು ನೀವು ಒಪ್ಪುವಿರೆನ್ನಬಹುದು. ಹಿಂಸೆಯ ವಿರುದ್ಧ ಮಾತ್ರ ನಿಮಗೆ ಭರವಸೆ ಬೇಕು.

**ಉತ್ತರ**—ನಿಮ್ಮ ಮಾತು ಸರಿ. ವ್ಯವಸ್ಥಿತ ಸಂಪುಗಳ ವಿಷಯದಲ್ಲಿ ನಾನೊಬ್ಬ ತಜ್ಞನೆಂದು ನನ್ನ ಎಣಿಕೆ. ನನ್ನ ಮೊದಲ ಯಶಸ್ವೀ ಪ್ರಯೋಗ ದಕ್ಷಿಣ ಆಫ್ರಿಕದಲ್ಲಿ ತೀರಾ ವಿರುದ್ಧ ಸನ್ನಿವೇಶಗಳ ಮಧ್ಯೆ ನಡೆಯಿತು. ಅಹಮದಾಬಾದಿನಲ್ಲಿ ಆ ಮಂತ್ರವನ್ನು ಸುಧಾರಿಸಿದೆ. ಪರಿಪೂರ್ಣತೆಯನ್ನು

ಮುಟ್ಟಿದೇನೆ ಎಂದೇನೂ ಹೇಳಿಕೊಳ್ಳುವುದಿಲ್ಲ. ಸಂಘಗಳನ್ನೂ ಅಪ್ರತಿಹತಗೊಳಿಸಬಹುದು, ಬಲ್ಲೆ. ಕೇವಲ ಅನಧಿಕೃತ ಸಂಘಗಳನ್ನು ಮಾತ್ರ ನಿರಾಕರಿಸಿದೇನೆ, ಅಷ್ಟೆ. ಕಾಂಗ್ರೆಸ್ಸು ಕಾರ್ಮಿಕವರ್ಗದ ಹಕ್ಕೋಟ ಪಡೆದಿಲ್ಲ. ಕೆಲ ಕಾಂಗ್ರೆಸಿಗರು ಪಡೆದಿದಾರೆ. ಸಂಘಿನ ಎಲ್ಲ ಮುಖಂಡರಿಗೂ ಅವರವರದೇ ಕ್ರಮಗಳಿವೆ. ಅವರೆಲ್ಲರೂ ಅಹಿಂಸಕರೇ. ಕೆಲವರು ಸ್ವಾರ್ಥದೃಷ್ಟಿಯುಳ್ಳವರು. ಇನ್ನು ಕೆಲವರು ಅಪ್ರಾಮಾಣಿಕರು. ಆಪುದರಿಂದ ಸಕ್ರಿಯ ಸಹಕಾರವನ್ನಲ್ಲದಿದ್ದರೂ ಜಡಸಹಕಾರವನ್ನಾದರೂ ಕೊಡಿ ಎನ್ನುತ್ತೇನೆ. ಹೋರಾಟಕ್ಕಾಗಿ ಸಂಘಗಳು ಬೇಕಿಲ್ಲ. ಸಾಮೂಹಿಕ ಶಾಸನಭಂಗ ಎಂದಾದರೂ ಬಂದರೆ ಅದು ಯಾವ ರೂಪ ತಳೆದೀತೋ ಹೇಳಲಾರೆ. ಅದರೊಡನೆ ನನಗೆ ಕಿಂಚಿತ್ ಸಂಬಂಧವಿದ್ದರೂ ಅದು ಏನೇನು ಮಾಡದು ಎಂಬುದನ್ನು ಹೇಳಬಲ್ಲೆ. ಕಾಂಗ್ರೆಸಿಗೆ ಇಡೀ ಭಾರತದ ಕಾರ್ಮಿಕವರ್ಗದ ಮೇಲೆ ಅಹಿಂಸಾತ್ಮಕ ನಿಯಂತ್ರಣ ಇದ್ದರೆ ಕಾಂಗ್ರೆಸ್ ಇಂದಿಗಿಂತ ಹೆಚ್ಚು ಶಕ್ತಿಶಾಲಿಯಾಗಿರುತ್ತಿತ್ತು. ಕಾರ್ಮಿಕರ ವಿಷಯದಲ್ಲಿ ಕಾಂಗ್ರೆಸಿಗೆ ಒಂದೇ ನೀತಿ ಇದ್ದು, ಸಾಕಷ್ಟು ಕಾರ್ಯಕರ್ತರು ಅದನ್ನು ಅನ್ವಯಿಸಲು ಸಿಕ್ಕಿದರೆ ಆ ನಿಯಂತ್ರಣ ಅದಕ್ಕೆ ಬಂದೀತು.೧೪೩

*        *        *        *

"ಆರ್. ಐ. ಎನ್. ರೇಟಿಂಗ್‌ಗಳು (ನೌಕಾದಳದ ಸಿಪಾಯಿಗಳು) ತಮ್ಮ ಕೆಲಸ ಅಪಮಾನಕಾರಕವಾಗಿತ್ತೆಂದರೆ ರಾಜೀನಾಮೆ ಕೊಡಬೇಕಿತ್ತೆಂದು ಗಾಂಧೀಜೀ ಕರೆ ಕೊಟ್ಟುದು ಆಕೆ ತನಗೆ ಅರ್ಥವಾಗಲೊಲ್ಲದೆಂದರು. ಹಾಗೆ ಮಾಡಿದರೆ ತಮ್ಮ ಏಕೈಕ ಜೀವನೋಪಾಯವನ್ನೇ ಬಿಟ್ಟುಕೊಟ್ಟಂತೆ. ಅಲ್ಲದೆ ಅವರು ತತ್ತ್ವಗಳಿಗಾಗಿ ಹೋರಾಡುತ್ತಿರುವರು. ಈಗ ಅವರು ರಾಜೀನಾಮೆ ಕೊಟ್ಟುಬಿಟ್ಟರೆ ಈ ನಿರುದ್ಯೋಗದ ದಿನಗಳಲ್ಲಿ ಅವರ ಸ್ಥಳಗಳನ್ನು ತುಂಬಲು ನೂರಾರು ಜನ ಕಾದಿದಾರೆ. ಅವರಿಗಾದರೂ ಇದೇ ಪಕ್ಷಪಾತ, ಅಪಮಾನ ತಾನೇ. ಆರ್.ಐ.ಎನ್. ರೇಟಿಂಗರಂತೂ ಏನೂ ಸಾಧಿಸಿದಂತಾಗುತ್ತಿರಲಿಲ್ಲ. ಅದೇನೂ ದೇಶಕ್ಕೂ ಸಹಾಯಕವಲ್ಲ."

ಅರುಣಾ ಬಹೆನ್‌ರ ಪತ್ರಿಕಾಸಂದರ್ಶನದಿಂದ ಮೇಲೆ ಉದ್ಧರಿಸಿರುವ ಪ್ರತಿಯೊಂದು ಹೇಳಿಕೆಯೂ ಸಾಮಾನ್ಯ ಅಭಿಪ್ರಾಯಕ್ಕೆ ವಿರುದ್ಧವಾದುದೇ. ಅಥವಾ ಆಕೆಯದೆಂದು ಹೇಳುವ ಅಭಿಪ್ರಾಯವನ್ನು ಆಕೆ ಹೊಂದಿದಾಳೆಯೇ

ಇಲ್ಲವೇ ಎಂಬುದೂ ಇಲ್ಲಿ ಅಪ್ರಕೃತ. ಸದ್ಯಕ್ಕೆ ಅವನ್ನು ಅವುಗಳ ಸ್ವಂತ ಅರ್ಹತೆಯ ಮೇಲೇ ಪರಿಶೀಲಿಸಿ, ಅವು ಕಾಂಗ್ರೆಸಿನ ನಿರ್ಣಯಗಳಿಗೆ ತೀರಾ ಅಸಂಗತವಾದುವೆಂದು ತೋರಿಸಿದರೆ ಸಾಕು.

ದಿವಂಗತ ಲಾಲಾ ಲಜಪತರಾಯರ ನೇತೃತ್ವದಲ್ಲಿ ಕಲ್ಕತ್ತೆಯ ವಿಶೇಷ ಅಧಿವೇಶನದಲ್ಲಿ ೧೯೨೦ರಲ್ಲಿ ಅಂಗೀಕೃತವಾದ ನಿರ್ಣಯ ಪ್ರತಿಪಾದಿಸುವಂಥ ಅಹಿಂಸಾತ್ಮಕ ಕಾರ್ಯಾಚರಣೆಯ ಮೊದಲ ತತ್ತ್ವ ಪ್ರತಿಯೊಂದು ಅಪಮಾನ ಕಾರಕ ವಿಷಯದೊಂದಿಗೂ ಅಸಹಕಾರ ಮಾಡುವಂಥದು. ಆರ್.ಐ.ಎನ್. (ನೌಕಾದಳ)ನನ್ನು ಸ್ಥಾಪಿಸಿದ್ದು ಆಳಲ್ಪಡುವವರ ಹಿತಕ್ಕಾಗಿ ಅಲ್ಲ. ಜನ ಕಣ್ಣು ತೆರೆದುಕೊಂಡೇ ಅದಕ್ಕೆ ಸೇರಿದರು. ಅಲ್ಲಿ ಪಕ್ಷಪಾತ ಕಣ್ಣಿಗೆ ಕುಕ್ಕುತ್ತದೆ. ಅಲ್ಲಿ ನೌಕರಿಗೆ ಸೇರಿದರೆ ಅದನ್ನು ತಪ್ಪಿಸಿಕೊಳ್ಳುವಂತೆಯೇ ಇಲ್ಲ. ಭಾರತ ವನ್ನು ಗುಲಾಮಗಿರಿಯಲ್ಲಿ ಇಡುವ ನಿಚ್ಚಳ ಉದ್ದೇಶ್ಯದಿಂದಲೇ ಆ ದಳವನ್ನು ಸಂಘಟಿಸಿರುವುದು. ಅಲ್ಲಿನ ಸ್ಥಿತಿಗತಿಗಳನ್ನು ಸುಧಾರಿಸಲು ಯತ್ನಿಸಬಹುದು, ಯತ್ನಿಸಬೇಕು. ಅದು ಒಂದು ಮಿತಿಯವರೆಗೆ ಮಾತ್ರ ಸಾಧ್ಯ. ಬಂಡಾಯ ದಿಂದ ಅದನ್ನು ಸಾಧಿಸುವುದು ಸಾಧ್ಯವಿಲ್ಲ ಬಂಡಾಯ ತೋರಿಕೆಗೆ ಯಶಸ್ವಿ ಯಾಗಬಹುದು. ಆದರೆ ಆ ಯಶಸ್ಸು ಬಂಡಾಯಗಾರರು, ಹಾಗೂ ಅವರ ಆಪ್ತರನ್ನು ಮಾತ್ರ ಬಿಟ್ಟೀತು, ಇಡೀ ಭಾರತವನ್ನು ಬಿಡದು. ಅದರ ಪಾಠ ಕೆಟ್ಟದೊಂದು ಕುಲಧನವಾದೀತು. ಸ್ವರಾಜ್ಯದಲ್ಲೂ ಇಂದು ಇರುವಷ್ಟಾದರೂ ಶಿಸ್ತು ಇರಲೇಬೇಕು. ಬಂಡಾಯಗಾರರ ಅಧೀನವಾದ ಭಾರತ ಅಂತಃಕಲಹ ದಿಂದ ದಣಿದುಹೋಗುವ ಪರಸ್ಪರ ಯಾದವೀ ಗುಂಪುಗಳಾಗಿ ಒಡೆದು ಹೋದೀತು.

ನೌಕಾದಳದ ಸಿಪಾಯಿಗಳು ತಮ್ಮ ಅಪಮಾನವಿರೋಧೀ ಆಂದೋಲನದ ಫಲವಾಗಿ ತಮ್ಮ ಕೆಲಸ ಬಿಟ್ಟರೆ ಅವರ ಸ್ಥಳಗಳಲ್ಲಿ ನೂರಾರು ಮಂದಿ ಸೇರಿಬಿಡುವುದು ನಿಜವಾದರೆ ಕಾಂಗ್ರೆಸ್ ಭಾರತ ಸ್ವರಾಜ್ಯ ಸಂಗ್ರಾಮದ ಅರ್ಥ ತಿಳಿಯುವುದರಲ್ಲಿ ಹೆಚ್ಚಿನ ಪ್ರಗತಿಯನ್ನೇನೂ ಸಾಧಿಸಿಲ್ಲವೆಂದೇ ಅರ್ಥ. ಅಪಮಾನಿತರಾದ ಸ್ವದೇಶಬಾಂಧವರ ಸ್ಥಳಗಳನ್ನು ಅಪಮಾನಗಳನ್ನು ನುಂಗಿಯೂ ನೂರಾರು ಜನ ಆಕ್ರಮಿಸುವಷ್ಟು ನೀಚಮಟ್ಟದಲ್ಲಿರುವುದಾದರೆ ನಾವು ನಮ್ಮ ಜನಕೋಟಿಗೆ ಸ್ವರಾಜ್ಯ ಪಡೆದೇವೆಯೇ? ಕಾಂಗ್ರೆಸಿಗರಿಗೆ

ಈ ಕಲ್ಪನೆಯೂ ಸಲ್ಲ–ಹೊಲ್ಲ—ಅದೂ ಸ್ವರಾಜ್ಯ ದೃಷ್ಟಿಗೋಚರವಾಗುತ್ತಿದೆ ಎಂಬ ಈ ಕಾಲದಲ್ಲಿ.

ನೌಕಾದಳಕ್ಕೆ ಭರ್ತಿಯಾಗುವುದೊಂದೇ ತಮ್ಮ ಏಕಮಾತ್ರ ಜೀವನೋಪಾಯ ಎಂದು ತಿಳಿಯುವವರು ತಮ್ಮ ಬಗ್ಗೆಯೇ ಬಲು ಕೆಟ್ಟ ಅಭಿಪ್ರಾಯ ಉಳ್ಳವರಾಗಿರಬೇಕು ಸೈನಿಕನ ಬದುಕು ಕಷ್ಟದ ಬದುಕು. ಒಟ್ಟುಗೂಡಿ ದುಡಿಯುವ ಶಿಸ್ತು ಕಲಿಸಿರುತ್ತಾರೆ ಅವನಿಗೆ. ಗುದ್ದಲಿ ಪಿಕಾಶಿ ಹಿಡಿದು ದುಡಿಯುವುದನ್ನೂ ಕಲಿಸಿರುತ್ತಾರೆ ಅವನಿಗೆ. ಅಂಥವ ಸಿಪಾಯಿ ಕೆಲಸ ಬಿಟ್ಟು ಬೇರೆ ಜೀವನೋಪಾಯ ತನಗಿಲ್ಲವೆಂದು ತಿಳಿಯಲು ಹೇಸಿಯಾನು. ಸಿಪಾಯಿಗಳು ಬೆವರು ಹರಿಸಿ ಹೊಟ್ಟೆ ತುಂಬಿಕೊಳ್ಳಲಾರರೆಂದು ನಾವು ಭಾವಿಸಿದರೆ ಸಿಪಾಯಿಗಳ ಬಗೆಗೆ ನಮ್ಮದು ಬಡಕಲ್ಪನೆ. ದುಡಿಮೆಗಾರನಿಗೆ ಎಂದೂ ದಿನಗೂಲಿ ಸಿಕ್ಕೇ ಸಿಕ್ಕೀತು. ಸಿಪಾಯಿತನ ಬಿಟ್ಟ ಯೋಧನಿಗೆ ಅವನು ಮೊದಲು ಪಡೆದಿದ್ದ ಮೆರಗು, ಸವಲತ್ತುಗಳು ಮಾತ್ರ ಇಲ್ಲವಾದಾವು, ಅಷ್ಟೆ. ಆ ಕೊಲ್ಲುವ ಕಸುಬನ್ನು ನಗ್ನಗೊಳಿಸಿ, ಅದಕ್ಕೆ ಬಹುದಿನಗಳಿಂದ ಅಂಟಿರುವ ದಪ್ಪ ಕಳಂಕವನ್ನು ಇನ್ನೂ ಹೋಗಲಾಡಿಸದೆ ಇದ್ದರೆ ನಾವು ಈ ಅಮೂಲ್ಯ ಇಪ್ಪತ್ತೈದು ವರ್ಷಗಳನ್ನು ವ್ಯರ್ಥಮಾಡಿದೇವೆಂದೇ ಅರ್ಥ.

ರಾಜೀನಾಮೆ ಕೊಟ್ಟಿದ್ದರೆ ಸಿಪಾಯಿಗಳಿಗೆ ಏನೂ ಲಾಭವಾಗುತ್ತಿರಲಿಲ್ಲ ಎಂದು ಅರುಣಾ ಅಸಫ್ ಅಲ್ಲೀ ಹೇಳಿದುದಾಗಿ ವರದಿಯಾಗಿದೆ. ಅವರು ಪೌರುಷದಿಂದ ತಮ್ಮ ಕೆಲಸ ಬಿಟ್ಟುಕೊಟ್ಟಿದ್ದರೆ ಅವರು ಗೌರವ, ಘನತೆ ಗಳಿಸುತ್ತಿದ್ದರು, ಮುಂಬಯಿಯ ನಾಗರಿಕರಿಗೂ ಘನತೆ–ಗೌರವ ಕಾಯ್ದುಕೊಳ್ಳುವುದನ್ನು ಕಲಿಸಿರುತ್ತಿದ್ದರು, ಅರ್ಥಹೀನ ಜೀವನಾಶ ಮುಂಬಯಿಗೆ ಉಳಿಯುತ್ತಿತ್ತು. ಆಸ್ತಿಪಾಸ್ತಿ, ಅತ್ಯಮೂಲ್ಯ ಆಹಾರವಸ್ತು ಉಳಿಯುತ್ತಿದ್ದುವು. ನಿಜಕ್ಕೂ ಇದೆಲ್ಲ ಗಮನಕ್ಕೆ ಬರಬೇಕಾದಂತಹ ಸಾಧನೆಯೇ.

ವರದಿಯಾಗಿರುವ ಸಂದರ್ಶನದ ಕೊನೆಯ ಹೇಳಿಕೆ ಒಂದು ವಿಚಾರದ ಗೊಂದಲ. ದೇಶದ ಗೌರವ, ಸ್ವಾತಂತ್ರ್ಯಗಳನ್ನು ಉಳಿಸಲು ಕಾಂಗ್ರೆಸಿಗರು ಶಾಸನಸಭೆಗಳಿಗೆ ಹೋಗುವುದೂ ನೌಕಾದಳದ ಸಿಪಾಯಿಗಳು ತಮ್ಮ ದೇಶ ಬಾಂಧವರು ಹಾಗೂ ಅವರ ಸ್ವಾತಂತ್ರ್ಯದ ವಿರುದ್ಧವೇ ಬಳಸಲ್ಪಡುವ ಸಂಭವವಿದ್ದೂ ಜೀವನೋಪಾಯಕ್ಕೆ ನೌಕಾದಳಕ್ಕೆ ಸೇರುವುದೂ ಒಂದೇ ಅಲ್ಲ.

ಶಾಸನಸಭೆಗಳಿಗೆ ಹೋಗುವ ಕಾಂಗ್ರೆಸಿಗರು ಮತದಾರರಿಂದ ಆಯ್ಕೆಯಾದ ಪ್ರತಿನಿಧಿಗಳು. ಮತದಾರರನ್ನು ತಪ್ಪಾಗಿ ಪ್ರತಿನಿಧಿಸುವವರು ಅಲ್ಲಿಗೆ ಹೋಗದಂತೆ ಮಾಡುವ ಸಲುವಾಗಿ ಅವರು ಹೋಗುತ್ತಾರೆ. ಶಾಸನಸಭೆಗಳಿಗೆ ಹೋಗುವುದೇ ಪೂರಾ ಕೆಟ್ಟದಿರಬಹುದು. ಆದರೆ ಈಗ ಮಾಡಲಾಗಿರುವಂಥ ಹೋಲಿಕೆ ಸಾಧ್ಯವೇ ಇಲ್ಲ.೧೪೪

* * * *

ಕಾರ್ಮಿಕರು ಸಂಪು ಹೂಡಿದಾಗ ಬಂಡವಾಳಗಾರರು ಹೇಗೆ ನಡೆದುಕೊಳ್ಳಬೇಕು ? ಈ ಪ್ರಶ್ನೆ ಇಂದು ಎಲ್ಲ ಕಡೆ ಗಾಳಿಯಲ್ಲಿದೆ, ಬಹಳ ಮಹತ್ವಪೂರಿತ. ಒಂದು ವಿಧಾನ ತುಳಿದುಹಾಕುವುದು—ಅದನ್ನು ಸರಿಯಾಗಿಯೋ ತಪ್ಪಾಗಿಯೋ "ಅಮೆರಿಕನ್" ವಿಧಾನವೆನ್ನುತ್ತಾರೆ. ಸಂಘಟಿತ ಗೂಂಡಾಗಿರಿಯಿಂದ ಸಂಪನ್ನು ಸದೆಬಡಿಯುವುದೇ ಆ ಕ್ರಮ. ಇದು ತಪ್ಪು, ವಿನಾಶಕಾರಿ ಎಂದು ಎಲ್ಲರೂ ಪರಿಗಣಿಸಿಯಾರು. ಇನ್ನೊಂದು ದಾರಿ ಸರಿಯಾದುದು, ಗೌರವಾನ್ವಿತವಾದುದು, ಪ್ರತಿಯೊಂದು ಸಂಪನ್ನೂ ಅದರ ಅರ್ಹತೆಯ ಮೇಲೆ ನಿರ್ಧರಿಸುವುದು, ಕಾರ್ಮಿಕರಿಗೆ ಸಲ್ಲಬೇಕಾದುದನ್ನು ಸಲ್ಲಿಸಿಬಿಡುವುದು. ಸಲ್ಲಿಸಬೇಕಾದುದು ಎಂದರೆ ಬಂಡವಾಳವರ್ಗವೇ ಸಲ್ಲಬೇಕಾದುದೆಂದು ಹೇಳುವುದಲ್ಲ, ಕಾರ್ಮಿಕವರ್ಗ ಎಷ್ಟು ಸಲ್ಲಬೇಕೆನ್ನುತ್ತದೆಯೋ ಅಷ್ಟು, ಮತ್ತು ಪ್ರಬುದ್ಧ ಜನಮತ ಯಾವುದನ್ನು ಮೆಚ್ಚುತ್ತದೋ ಅದು.

ಕಾಲ ಸಂದಂತೆಲ್ಲ ಕಾರ್ಮಿಕ ಜಗತ್ತು ದಿನವೂ ಹೆಚ್ಚುತ್ತಿರುವ ಬೇಡಿಕೆಗಳ ಬಗೆಗೆ ಹೆಚ್ಚು ಹೆಚ್ಚು ಆಗ್ರಹ ತೊಡುತ್ತಿದೆ. ಈ ಬೇಡಿಕೆಗಳನ್ನು ಬಲಾತ್ಕರಿಸುವ ಅಸಹನೆಯಲ್ಲಿ ಹಿಂಸೆಗೆ ಎಳಸಲೂ ಹಿಂಜರಿಯುತ್ತಿಲ್ಲ. ಬೇಡಿಕೆಗಳನ್ನು ಬಲಾತ್ಕರಿಸುವ ಹೊಸ ಹೊಸ ವಿಧಾನಗಳನ್ನು ಅನುಸರಿಸಲಾಗುತ್ತಿದೆ. ಒಡೆಯರ ಆಸ್ತಿಪಾಸ್ತಿಗಳಿಗೆ ಧಕ್ಕೆ ತಗುಲಿಸಲು, ಯಂತ್ರಗಳನ್ನು ಕಿತ್ತುಹಾಕಲು, ಸಂಪಿಗೆ ಸೇರದಿರುವ ಮುದುಕರು ಮಹಿಳೆಯರಿಗೆ ಕಿರುಕುಳ ಕೊಡಲು, ಬಲಾತ್ಕಾರವಾಗಿ ಕರಿಕುರಿಗಳನ್ನು ಕೆಲಸಕ್ಕೆ ಹೋಗದಂತೆ ತಡೆಗಟ್ಟಲು ಕೆಲಸಗಾರರು ಹೇಸುತ್ತಿಲ್ಲ. ಈ ಪರಿಸ್ಥಿತಿಯಲ್ಲಿ ಒಡೆಯರು ಹೇಗೆ ನಡೆದುಕೊಳ್ಳಬೇಕು ?

ತಾವು ಸೃಷ್ಟಿಸಿದೇವೆಂದು ತಿಳಿದಿರುವ ಕಾರ್ಖಾನೆ ಕೈಗಾರಿಕೆಗಳ ನಿಜವಾದ ಒಡೆಯರು ಕಾರ್ಮಿಕರೆಂದು ತಾವೇ ಸ್ವೇಚ್ಛಾಪೂರ್ವಕವಾಗಿ

ಒಡೆಯರು ತಿಳಿಯಬೇಕೆಂದು ಮಾಲೀಕರಿಗೆ ನನ್ನ ಹಿತೋಕ್ತಿ. ಕಾರ್ಮಿಕರಲ್ಲಿ ಅಡಗಿರುವ ಬುದ್ಧಿಶಕ್ತಿಯನ್ನು ಹೊರತರುವಂಥ ಒಳ್ಳೆ ಶಿಕ್ಷಣವನ್ನು ಅವರಿಗೆ ಕೊಡುವುದು ತಮ್ಮ ಕರ್ತವ್ಯವೆಂದು ಒಡೆಯರು ಭಾವಿಸಬೇಕು. ಈ ಶಿಕ್ಷಣ ದಿಂದ ಕೆಲಸಗಾರರಲ್ಲಿ ಹುಟ್ಟುವ ಶಕ್ತಿಸಂಯೋಗವನ್ನು ಸ್ವಾಗತಿಸಿ ಸಂವರ್ಧಿಸ ಬೇಕು.

ಈ ಉದಾತ್ತ ಕೆಲಸವನ್ನು ಒಡೆಯರು ಒಂದು ದಿನದಲ್ಲಿ ಆಗುಮಾಡಲು ಸಾಧ್ಯವಿಲ್ಲ. ಏತನ್ಮಧ್ಯೆ ತಮ್ಮ ತಮ್ಮ ಉದ್ಯಮಗಳಲ್ಲಿ ಸಂಪುಗಾರರು ಎಸಗುವ ವಿನಾಶವನ್ನು ಹೇಗೆ ಎದುರಿಸಬೇಕು ? ತಮ್ಮದು ಎಷ್ಟೋ ಅಷ್ಟೇ ಸಂಪುಗಾರ ರದೂ ಆಗಿರುವ ತಮ್ಮ ಕಾರ್ಖಾನೆಗಳ ಪೂರಾ ನಿಯಂತ್ರಣವನ್ನು ಕೂಡಲೇ ಸಂಪುಗಾರರಿಗೆ ವಹಿಸಿಕೊಡುತ್ತೇವೆಂದು ಸೂಚಿಸಬೇಕು. ತಾವೂ ಆ ಸ್ಥಳವನ್ನು ತೆರವು ಮಾಡಿಬಿಡಬೇಕು, ಸಿಟ್ಟಿನಿಂದ ಅಲ್ಲ, ಅದೇ ಸರಿ ಎಂಬ ಮನೋಭಾವ ದಿಂದ. ಜತೆಗೆ ತಮ್ಮ ಸದ್ಭಾವನೆ ತೋರಿಸಲೋಸುಗ ತಮ್ಮ ಎಂಜಿನಿಯರರ, ಕುಶಲ ಕೆಲಸಗಾರರ ನೆರವನ್ನೂ ಕಾರ್ಮಿಕರಿಗೆ ಕೊಡುವುದಾಗಿ ಹೇಳಬೇಕು. ಇದರಿಂದ ಒಡೆಯರು ಕಡೆಗೆ ತಮಗೇನೂ ನಷ್ಟವಿಲ್ಲವೆಂಬುದನ್ನು ಕಂಡಾರು. ನಿಜವಾಗಿ ಈ ಒಳ್ಳೆ ಕೆಲಸ ವಿರೋಧವನ್ನು ನಿರಾಯುಧಗೊಳಿಸೀತು, ಅವರ ಕೆಲಸ ಗಾರರು ಒಡೆಯರನ್ನು ಹಾಡಿ ಹರಸಿಯಾರು. ತಮ್ಮ ಬಂಡವಾಳದ ದುರುಪ ಯೋಗ ಮಾಡಿದಂತೆಯೂ ಆದೀತು. ಅಂಥ ಕೆಲಸವನ್ನು ಉಪಕಾರದ ಕೆಲಸ ಎಂದು ನಾನು ಭಾವಿಸುವುದಿಲ್ಲ. ಅದು ಬಂಡವಾಳಗಾರರ ಬಳಿ ಇರುವ ಸಾಧನ ಸಂಪತ್ತುಗಳ ಸದುಪಯೋಗ, ಗೌರವಾನ್ವಿತ ಪಾಲುಗಾರರಾಗಿ ಪರಿವರ್ತಿ ಸಲ್ಪಟ್ಟ ಕಾರ್ಮಿಕರೊಡನೆ ಪ್ರಾಮಾಣಿಕ ವ್ಯವಹಾರ.೧೪೫

**ಪ್ರಶ್ನೆ** — ಕಾಂಗ್ರೆಸ್ ತನ್ನ ಸಮ್ಮತಿ ಕೊಡಬಾರದಂಥ ಹಠಾತ್ ಮುಷ್ಕರಗಳ ವಿಷಯದಲ್ಲಿ ಕಾಂಗ್ರೆಸಿಗರು ಏನು ಮಾಡಬೇಕು ? ಅವುಗಳನ್ನು ನಿಲ್ಲಿಸುವುದು ಹೇಗೆ ?

**ಉತ್ತರ**—ಮೊದಲನೆಯದಾಗಿ, ಕಾಂಗ್ರೆಸ್ ಸಂಘಟನೆ ಪರಿಪೂರ್ಣ ವಾಗಿದ್ದರೆ ಅಂಥ ಹಠಾತ್ ಮುಷ್ಕರಗಳೇ ಆಗವು. ಇತರ ಯಾವುದೇ ಮುಷ್ಕರ ಕೂಡ ಅಸಮರ್ಥನೀಯವಾದೀತು, ಏಕೆಂದರೆ ಪ್ರತಿಯೊಂದು ಸಮರ್ಥನೀಯ ಮುಷ್ಕರದ ಹೊರೆಯನ್ನೂ ಜನತೆಯ ಸಂಸ್ಥೆ ತನ್ನ

ಸಂಘಟನೆಯ ಪರಿಧಿಯಲ್ಲಿ ಸೇರಿಸಿಕೊಂಡು ತಾನೇ ನಿರ್ವಹಿಸಬೇಕಾದೀತು. ಆದರೆ ದುರ್ದೈವವಶಾತ್ ಕಾಂಗ್ರೆಸ್ ಶಕ್ತಿಶಾಲಿಯಾಗಿದ್ದರೂ ಅಂಥ ಸಾರ್ವಭೌಮ ಸ್ಥಾನಕ್ಕೆ ಏರಿಲ್ಲ. ಆದುದರಿಂದ ಪ್ರತಿಯೊಂದು ಹಠಾತ್ ಮುಷ್ಕರವನ್ನೂ ಅದರದರ ಅರ್ಹತೆಯ ಮೇಲೆ ನಿರ್ಣಯಿಸಬೇಕಾದೀತು, ಅದಕ್ಕೆ ಕಾರಣರಾದವರನ್ನು ವಿಮರ್ಶಿಸಬೇಕಾದುದಿಲ್ಲ. ಅರ್ಹತೆಯ ಆಧಾರದ ಮೇಲೆ ಅಸಮರ್ಥನೀಯವಾದ ಸಂಪನ್ನು ಕಾಂಗ್ರೆಸ್ಸೂ ಸಾರ್ವಜನಿಕರೂ ಸ್ಪಷ್ಟವಾಗಿ ಖಂಡಿಸಬೇಕು. ಅದರ ಸಹಜ ಪರಿಣಾಮವಾಗಿ ಸಂಪು ಹೂಡಿದ ಕೆಲಸಗಾರರು ವಾಪಸು ಕೆಲಸಕ್ಕೆ ಹೋದಾರು. ಸಂಪು ಸಮರ್ಥನೀಯವಾಗಿದ್ದರೆ ಯಾರ ವಿರುದ್ಧ ಅದನ್ನು ಹೂಡಲಾಗಿದೆಯೋ ಆ ಸಂಸ್ಥೆಯೇನಾದರೂ ಕರಿಕುರಿಗಳನ್ನು ಬಳಸಿ ಅಥವಾ ಶಂಕಾಸ್ಪದ ವಿಧಾನಗಳಿಂದ ಸಂಪುಗಾರರನ್ನು ಮಣಿಸಲು ಬಲಾತ್ಕರಿಸಿದರೆ ಅದನ್ನೂ ಹಾಗೆಯೇ ಖಂಡಿಸಬೇಕು.೧೪೬

**ಪ್ರಶ್ನೆ**—ಗೂಂಡಾಗಿರಿ ಹಾಗೂ ಹಿಂಸಾಚಾರ ನಡೆಯದಂತೆ ಸಂಪು ನಡೆಸುವುದು ಹೇಗೆ?

**ಉತ್ತರ**—ಸಂಪು ಸ್ವಯಂಸ್ಫೂರ್ತಿಯಿಂದಾದುದಾಗಿರಬೇಕೇ ಹೊರತು ಕೃತಕವಾಗಿ ಹುಟ್ಟಿಸಿದುದು ಆಗಬಾರದು. ಯಾವ ಬಲಾತ್ಕಾರವೂ ಇಲ್ಲದೆ ಅದನ್ನು ಸಂಘಟಿಸಿದರೆ ಆಗ ಗೂಂಡಾಗಿರಿ, ಲೂಟಿ ಇತ್ಯಾದಿಗಳಿಗೆ ಅವಕಾಶವೇ ಇರದು. ಸಂಪುಗಾರರಲ್ಲಿ ಪರಿಪೂರ್ಣ ಸಹಕಾರ ಅಂಥ ಸಂಪಿನ ಲಕ್ಷಣವಾಗಿದ್ದೀತು. ಅದು ಶಾಂತಿಯುತವಾಗಿರಬೇಕು, ಶಕ್ತಿಪ್ರಯೋಗವಿರತಕ್ಕದ್ದಲ್ಲ. ತಮ್ಮ ಅನ್ನ ಗಳಿಸಲು ಸಂಪುಗಾರರು ಒಂಟಿಯಾಗಿಯೋ ಒಟ್ಟಾಗಿಯೋ ಏನಾದರೂ ಕೆಲಸ ಕೈಗೊಳ್ಳತಕ್ಕದ್ದು. ಅಂಥ ಕೆಲಸದ ಸ್ವರೂಪವನ್ನು ಮೊದಲೇ ಯೋಚಿಸಿರಬೇಕು. ಇಂಥ ಶಾಂತವಾದ, ಪರಿಣಾಮಕಾರಿಯಾದ, ದೃಢವಾದ ಸಂಪಿನಲ್ಲಿ ಗೂಂಡಾಗಿರಿಗೆ, ಲೂಟಿಗೆ ಅವಕಾಶವಿರದು. ಅಂಥ ಸಂಪುಗಳನ್ನು ನಾನು ಕಂಡಿದೇನೆ. ನಾನೇನೂ ಕಾಲ್ಪನಿಕ ಚಿತ್ರವನ್ನು ಚಿತ್ರಿಸುತ್ತಿಲ್ಲ.೧೪೭

**ಇಂದು ಹಬ್ಬುತ್ತಿರುವ ಈ ಸಂಪಿನ ಜ್ವರದ ಮೂಲಕಾರಣ, ಇತರ ಎಡೆಗಳಂತೆಯೇ ಇಲ್ಲೂ ಜೀವನ ತನ್ನ ಆಧಾರ ತಪ್ಪಿ—ಧರ್ಮದ ಆಧಾರ ತಪ್ಪಿ,**

ಬುಡಮೇಲಾಗಿಬಿಟ್ಟಿರುವುದೇ ಆಗಿದೆ. ಆ ಆಧಾರದ ಸ್ಥಳವನ್ನು ಬರಿಯ 'ಧನಬಂಧನ' (Cash nexus) ಆಕ್ರಮಿಸಿದೆ. ಅದಂತೂ ಬಹಳ ತೆಳು ವಾದ ಸಂಬಂಧ. ಧಾರ್ಮಿಕ ಆಧಾರವಿದ್ದರೂ ಸಂಪುಗಾರರಿದ್ದಾರು, ಏಕೆಂದರೆ ಎಲ್ಲರಿಗೂ ಧರ್ಮವೇ ಜೀವನಾಧಾರವಾದೀತೆಂದು ಕಲ್ಪಿಸಿಕೊಳ್ಳುವಂತಿಲ್ಲ. ಒಂದೆಡೆ ಶೋಷಣೆ ನಡೆಸುವ ಪ್ರಯತ್ನ ನಡೆದೀತು, ಇನ್ನೊಂದೆಡೆ ಸಂಪುಗಾರರೂ ಇದ್ದಾರು. ಆದರೆ ಈ ಸಂಪುಗಾರರು ಪೂರಾ ಅಹಿಂಸಾ ಮಾದರಿಯವರಾಗಿ ಇದ್ದಾರು. ಅವರು ಎಂದೂ ಯಾರಿಗೂ ಹಾನಿ ಮಾಡರು. ಅಂಥದೇ ಒಂದು ಮುಷ್ಕರವೇ ಜನರಲ್ ಸ್ಮಟ್ಸ್‌ರನ್ನೂ ಮಣಿಸಿದ್ದು.

"ನೀವು ಒಬ್ಬ ಇಂಗ್ಲೀಷಿನವನನ್ನು ಗಾಯಗೊಳಿಸಿದ್ದರೂ ನಾನು ನಿಮಗೆ ಗುಂಡಿಡುತ್ತಿದ್ದೆ, ನಿಮ್ಮ ಜನರನ್ನು ಗಡೀಪಾರು ಮಾಡುತ್ತಿದ್ದೆ. ಈಗಲೇ ನಿಮ್ಮನ್ನು ಜೇಲಿನಲ್ಲಿಟ್ಟಿದೇನೆ. ನಿಮ್ಮನ್ನೂ ನಿಮ್ಮ ಜನರನ್ನೂ ಪ್ರತಿಯೊಂದು ಬಗೆಯಲ್ಲೂ ಮಣಿಸಲು ಯತ್ನಿಸಿದೇನೆ. ಆದರೆ ನೀವು ಪ್ರತೀಕಾರವೇ ಮಾಡದೆ ಇರುವಾಗ ನಾನು ಎಷ್ಟು ಕಾಲ ಹಾಗೆ ಮಾಡಲಿ?" ಎಂದರು ಜನರಲ್ ಸ್ಮಟ್ಸ್. ಆದುದರಿಂದ ಅವರು 'ಕೂಲಿ'ಗಳ ಪರವಾಗಿ (ಆಗ ದಕ್ಷಿಣ ಆಫ್ರಿಕದಲ್ಲಿ ಭಾರತೀಯರನ್ನು ಹಾಗೆಯೇ ಕರೆಯುತ್ತಿದ್ದುದು) ಕೇವಲ 'ಕೂಲಿ' ಒಬ್ಬನೊಡನೆ ಒಪ್ಪಂದ ಮಾಡಿಕೊಳ್ಳಬೇಕಾಗಿ ಬಂತು.[೧೪೮]

## ಅಧ್ಯಾಯ – ೧೧

# ಸಮಾಜವಾದ ಮತ್ತು ಸಾಮ್ಯವಾದ

## ಸೋಷಲಿಜಂ – ಕಮ್ಯುನಿಜಂ

### ಸಮಾಜವಾದ ಎಂದರೆ ಏನು ?

ಸಮಾಜವಾದ ಒಂದು ಸೊಗಸಾದ ಶಬ್ದ. ನಾನು ತಿಳಿದಮಟ್ಟಿಗೆ ಸಮಾಜವಾದದಲ್ಲಿ ಸಮಾಜದ ಎಲ್ಲ ಸದಸ್ಯರೂ ಸಮಾನರು — ಯಾರೂ ಕೀಳಲ್ಲ, ಯಾರೂ ಮೇಲಲ್ಲ. ಮನುಷ್ಯಶರೀರದಲ್ಲಿ ತಲೆ ಮೇಲುಗಡೆ ಇರುವುದರಿಂದ ಅದು ಹೆಚ್ಚಲ್ಲ, ಪಾದದ ಅಟ್ಟೆಗಳು ಕೆಳಗಿರುವುದರಿಂದ, ಅವು ನೆಲವನ್ನು ಮುಟ್ಟುವುದರಿಂದ, ಅವು ಕೀಳಲ್ಲ. ಮನುಷ್ಯನ ಶರೀರದ ಅವಯವಗಳು ಸಮಾನವಿರುವಂತೆಯೇ ಸಮಾಜದ ಅಂಗಭೂತ ಸದಸ್ಯರೂ ಸಹ. ಇದು ಸಮಾಜವಾದ.

ಅದರಂತೆ ರಾಜ–ರೈತ, ಬಲ್ಲಿದ–ಬಡವ, ಒಡೆಯ–ದುಡಿಮೆಗಾರ ಎಲ್ಲರೂ ಒಂದೇ ಮಟ್ಟದಲ್ಲಿರುವರು. ಧರ್ಮದ ದೃಷ್ಟಿಯಲ್ಲಿ ಸಮಾಜವಾದದಲ್ಲಿ ದ್ವೈತ ಭಾವನೆ ಇರದು. ಎಲ್ಲವೂ ಏಕವೇ. ಜಗತ್ತಿನ ಆದ್ಯಂತದ ಸಮಾಜವನ್ನು ನೋಡಿದರೆ ದ್ವೈತವಲ್ಲದೆ, ಅನೇಕತೆಯಲ್ಲದೆ ಬೇರಾವುದೂ ಇಲ್ಲವೇ ಇಲ್ಲ. ಏಕತೆಯ ಅಭಾವ ಎದ್ದು ಕಾಣುತ್ತಿದೆ. ಈ ಮನುಷ್ಯ ಮೇಲು, ಅವ ಕೀಳು, ಅವ ಹಿಂದೂ, ಈತ ಮುಸ್ಲಿಂ, ಮತ್ತೊಬ್ಬ ಈಸಾಯಿ, ನಾಲ್ಕನೆಯವ ಪಾರ್ಸಿ. ಐದನೆಯವ ಸಿಖ್, ಆರನೆಯವ ಯಹೂದಿ. ಇವರಲ್ಲಿಯೂ ಮತ್ತೆ ಉಪ ಪಂಗಡಗಳು. ನನ್ನ ಕಲ್ಪನೆಯ ಏಕತೆಯಲ್ಲಿ ಅನೇಕ ಮಾದರಿ ಇದ್ದರೂ, ಅವುಗಳ ನಡುವೆಯೂ ಪರಿಪೂರ್ಣ ಏಕತೆ ಇರುತ್ತದೆ.

ಈ ಸ್ಥಿತಿಯನ್ನು ಮುಟ್ಟಲು, ಘಟನೆಗಳತ್ತ ವೇದಾಂತಿಯಂತೆ ನೋಡುತ್ತ ನಿಂತು, ಎಲ್ಲರೂ ಸಮಾಜವಾದಕ್ಕೆ ಪರಿವರ್ತಿತರಾಗುವವರೆಗೆ ನಾವೂ ಒಂದು ಹೆಜ್ಜೆಯನ್ನೂ ಇಡಬೇಕಾಗಿಲ್ಲವೆಂದು ಹೇಳಬೇಕಾಗಿಲ್ಲ. ನಮ್ಮ ಬಾಳುವೆಯನ್ನು ಬದಲಿಸಿಕೊಳ್ಳದೆ ಪ್ರವಚನಗಳನ್ನು ಕೊಡುತ್ತ, ಪಕ್ಷಗಳನ್ನು

ಕಟ್ಟಿ, ಬೇಟೆ ಕೈಗೆ ಸಿಕ್ಕಾಗ ಬಾಚಿಕೊಂಡುಬಿಡಬಹುದು. ಇದು ಸಮಾಜ ವಾದವಲ್ಲ. ಕೈಗೆ ಸಿಕ್ಕಾಗ ಬಾಚಿಕೊಳ್ಳುವ ಬೇಟೆಯೆಂದು ಅದನ್ನು ನಾವು ತಿಳಿದಂತೆಲ್ಲ ಅದು ನಮ್ಮಿಂದ ದೂರ ದೂರ ಹೋದೀತು.

ಸಮಾಜವಾದ ಪ್ರಥಮ ಪರಿವರ್ತಿತನಿಂದಲೇ ಪ್ರಾರಂಭವಾಗುತ್ತದೆ. ಮೊದಲು ಅಂಥವನೊಬ್ಬ ಇದ್ದರೆ, ಆ ಒಂದಕ್ಕೆ ಮುಂದೆ ಸೊನ್ನೆಗಳನ್ನು ಸೇರಿಸುತ್ತ ಹೋಗಬಹುದು. ಮೊದಲಿನ ಸೊನ್ನೆಗೆ ಹತ್ತಾಗುತ್ತದೆ, ಬಳಿಕ ಸೇರಿಸಿದ ಒಂದೊಂದು ಸೊನ್ನೆಯೂ ಸಂಖ್ಯೆಯನ್ನು ಹತ್ತು ಪಟ್ಟು ಹೆಚ್ಚಿಸುತ್ತ ಹೋಗುತ್ತದೆ. ಆದರೆ ಪ್ರಾರಂಭಿಕನೇ ಸೊನ್ನೆಯಾಗಿಬಿಟ್ಟರೆ, ಅಂದರೆ ಯಾರೂ ಪ್ರಾರಂಭಿಸದೆಯೇ ಹೋದರೆ ಸೊನ್ನೆಗೆ ಸೊನ್ನೆ ಸೇರಿಸಿದುದೆಲ್ಲ ಕೊನೆಗೆ ಸೊನ್ನೆಯಾಗಿಯೇ ಉಳಿಯುತ್ತದೆ. ಅಂಥ ಸೊನ್ನೆಗಳನ್ನು ಬರೆಯಲು ಬಳಸುವ ಕಾಲ, ಕಾಗದ ಎಲ್ಲ ವ್ಯರ್ಥವೇ.

ಈ ಸಮಾಜವಾದ ಹರಳಿನಂತೆ–ಸ್ಫಟಿಕದಂತೆ ಶುದ್ಧ. ಆದುದರಿಂದ ಅದನ್ನು ಸಾಧಿಸಲೂ ಸ್ಫಟಿಕಸಮಾನ ಸಾಧನವೇ ಬೇಕು. ಅಶುದ್ಧ ಸಾಧನ ಗಳಿಂದ ಅಶುದ್ಧ ಸಿದ್ಧಿ ಲಭಿಸುತ್ತವೆ. ಅಂತಲೇ ರಾಜನ ತಲೆ ಕತ್ತರಿಸಿ ಒಡೆಯ ರಾಜನನ್ನೂ ರಂಕನನ್ನೂ ಸಮಗೊಳಿಸಲು ಸಾಧ್ಯವಿಲ್ಲ. ಕತ್ತರಿಸುವ ಕ್ರಮದಿಂದ ದುಡಿಮೆಗಾರರನ್ನೂ ಸಮಗೊಳಿಸುವುದು ಶಕ್ಯವಿಲ್ಲ. ಮಿಥ್ಯಾಚರಣೆ ಯಿಂದ ಸತ್ಯವನ್ನು ಯಾರೂ ಪಡೆಯರು. ಸತ್ಯಾಚರಣೆಯಿಂದಲೇ ಸತ್ಯಪ್ರಾಪ್ತಿ. ಅಹಿಂಸೆ–ಸತ್ಯಗಳು ಅವಳಿಯಲ್ಲವೇ? ಅದಕ್ಕುತ್ತರ: ಗಟ್ಟಿಯಾದ ನಕಾರ. ಅಹಿಂಸೆ ಸತ್ಯದಲ್ಲಿ ಅಡಕವಾಗಿದೆ, ಸತ್ಯ ಅಹಿಂಸೆಯಲ್ಲಿ. ಅಂತಲೇ ಅವು ಒಂದೇ ನಾಣ್ಯದ ಎರಡು ಮೈ ಇದ್ದಂತೆ ಎನ್ನುವುದು. ಒಂದನ್ನು ಇನ್ನೊಂದ ರಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ. ನಾಣ್ಯವನ್ನು ಎತ್ತ ತಿರುಗಿಸಿಯಾದರೂ ಓದಿ. ಅಕ್ಷರಗಳ ಕಾಗುಣಿತ ಬೇರೆ ಬೇರೆ, ಬೆಲೆ ಒಂದೇ. ಪರಿಪೂರ್ಣ ಪರಿಶುದ್ಧಿಯಿಲ್ಲದೆ ಈ ಪಾವನ ಅವಸ್ಥೆ ಪ್ರಾಪ್ತವಾಗದು. ಮನದ, ಮೈಯ ಮೈಲಿಗೆ ಉಂಟಾಯಿತೋ ಅಸತ್ಯ, ಹಿಂಸೆ ನಿಮ್ಮಲ್ಲಿ ಮನೆಮಾಡಿಕೊಂಡೀತು.

ಭಾರತದಲ್ಲಿ ಮತ್ತು ಜಗತ್ತಿನಲ್ಲಿ ಸತ್ಯವಂತರೂ, ಅಹಿಂಸಕರೂ, ಶುದ್ಧ ಹೃದಯರೂ ಆದ ಸಮಾಜವಾದಿಗಳು ಮಾತ್ರವೇ ಸಮಾಜವಾದೀ ಸಮಾಜ ವನ್ನು ಸ್ಥಾಪಿಸಬಲ್ಲರು. ಶುದ್ಧಸಮಾಜವಾದಿಯಾದ ರಾಷ್ಟ್ರ ನನ್ನ ತಿಳಿವಳಿಕೆಯ

ಮಟ್ಟಿಗೆ ಜಗತ್ತಿನಲ್ಲಿ ಯಾವುದೂ ಇಲ್ಲ. ಮೇಲೆ ವಿವರಿಸಿದ ಸಾಧನವಿಲ್ಲದೆ ಅಂಥ ಸಮಾಜದ ಅಸ್ತಿತ್ವ ಅಶಕ್ಯ.೧೪೯

* * * *

ಸಮಾಜವಾದದಲ್ಲಿ ಸತ್ಯ-ಅಹಿಂಸೆಗಳು ಮೈವೆತ್ತುಬರಬೇಕು. ಹಾಗಾಗ ಬೇಕಾದರೆ ಅಂಥ ಶ್ರದ್ಧಾಳುವಿಗೆ ಭಗವಂತನಲ್ಲಿ ಜೀವಂತ ಶ್ರದ್ಧೆ ಇರಬೇಕು. ಸತ್ಯ ಅಹಿಂಸೆಗಳಿಗೆ ಕೇವಲ ಯಾಂತ್ರಿಕ ಬಂಧನ ಸಂಕಟ ಸನ್ನಿವೇಶದಲ್ಲಿ ಮುರಿದು ಬಿದ್ದೀತು. ಅಂತಲೇ ಸತ್ಯವೇ ದೇವರೆಂದು ನಾ ಹೇಳುವುದು. ಈ ದೇವರು ಜೀವಂತ ಚೇತನ. ನಮ್ಮ ಬಾಳು ಆ ಚೇತನದ ಅಂಶವೇ. ಅದು ನಮ್ಮ ದೇಹವಾಸಿ, ಆದರೆ ದೇಹವೇ ಅದಲ್ಲ. ಆ ಅಕ್ಷಯ ಶಕ್ತಿಯ ಇರವನ್ನು ನಿರಾಕರಿಸುವವ ಚೇತನರಹಿತನಾಗಿ ಉಳಿಯುತ್ತಾನೆ. ಆತ ಚುಕ್ಕಾಣಿಯಿಲ್ಲದ ದೋಣಿಯಂತೆ, ಅತ್ತ ಇತ್ತ ಎಸೆಯಲ್ಪಟ್ಟು, ಸ್ವಲ್ಪವೂ ಮುಂದೆ ಸಾಗದೆ ನಾಶವಾಗುತ್ತಾನೆ.

ಈ ಮಹಾಶಕ್ತಿಯನ್ನೂ, ಅದರ ಪ್ರಚ್ಛನ್ನ ಸಾಧ್ಯತೆಗಳನ್ನೂ ಅರಿಯುವುದು ನಿಜಕ್ಕೂ ಕಷ್ಟಕರ ಪರಿಶೋಧನೆಯೇ.

ಆ ಪರಿಶೋಧನೆಯ ಕೆಲಸ ನಡೆಸುತ್ತಲಿದ್ದಾಗ ಸತ್ಯಾಗ್ರಹದ ಆವಿಷ್ಕಾರ ಆಯಿತು. ಸತ್ಯಾಗ್ರಹದ ಸರ್ವ ನಿಯಮಗಳನ್ನೂ ರಚಿಸಿದೇವೆಂದಾಗಲಿ, ಶೋಧಿಸಲ್ಪಟ್ಟಿವೆಯೆಂದಾಗಲಿ ಯಾರೂ ಹೇಳಿಕೊಂಡಿಲ್ಲ. ಪ್ರತಿಯೊಂದು ಯೋಗ್ಯ ಉದ್ದೇಶ್ಯವನ್ನೂ ಸತ್ಯಾಗ್ರಹದಿಂದ ಸಾಧಿಸಬಹುದು. ಈ ಮಾತನ್ನು ನಿರ್ಭಯವಾಗಿಯೂ, ದೃಢವಾಗಿಯೂ ನಾನು ಖಂಡಿತ ಹೇಳುತ್ತೇನೆ. ಅದು ಅತ್ಯುನ್ನತ, ಸೋಲರಿಯದ, ಮಹಾಶಕ್ತಿ. ಬೇರಾವುದೇ ಮಾರ್ಗದಿಂದಲೂ ಸಮಾಜವಾದವನ್ನು ಸಾಧಿಸುವುದು ಸಾಧ್ಯವಿಲ್ಲ. ರಾಜಕೀಯ, ಆರ್ಥಿಕ ಹಾಗೂ ನೈತಿಕ ದೋಷಗಳೆಲ್ಲವೂ ಸತ್ಯಾಗ್ರಹದಿಂದ ನಿವಾರಣೆ ಆಗಬಲ್ಲವು.೧೫೦

* * * *

**ಲೂಯಿ ಫಿಶರ್**—ನಿಮ್ಮ ಸಮಾಜವಾದದ ಅರ್ಥವೇನು ?

**ಗಾಂಧೀಜೀ**—ನನ್ನ ಸಮಾಜವಾದದ ಅರ್ಥ: ‘ ಈ ಕಟ್ಟಕಡೆಯವನಿಗೂ ’ (Unto This Last) ಎಂದು. ಕುರುಡರು ಕಿವುಡರು ಮೂಕರ

ಚಿತಾಭಸ್ಮದ ಮೇಲೆ ನಾನೆದ್ದು ಮೆರೆಯಬೇಕೆಂದು ನನ್ನ ಇಚ್ಛೆಯಲ್ಲ. ಅವರ (ಭಾರತದ ಸಮಾಜವಾದೀ ಗೆಳೆಯರ) ಸಮಾಜವಾದದಲ್ಲಿ ಬಹುಶಃ ಇಂಥವರಿಗೆ ಸ್ಥಳವೇ ಇರದೇನೋ? ಭೌತ ಪ್ರಗತಿಯೇ ಅವರ ಏಕೈಕ ಲಕ್ಷ್ಯ. ಉದಾಹರಣೆಗೆ, ಪ್ರತಿಯೊಬ್ಬ ನಾಗರಿಕನಿಗೂ ಒಂದೊಂದು ಕಾರು ಸಿಗುವಂತೆ ಏರ್ಪಡಿಸುವುದು ಅಮೆರಿಕದ ಗುರಿ. ನನಗಿಲ್ಲ ಅದು. ನನ್ನ ವ್ಯಕ್ತಿತ್ವದ ಪರಿಪೂರ್ಣ ವಿಕಾಸಕ್ಕೆ ಪೂರ್ಣಸ್ವಾತಂತ್ರ್ಯ ನನಗೆ ಬೇಕು. ಅಂತರಿಕ್ಷಕ್ಕೆ ಏಣಿ ಕಟ್ಟಲೂ ನನಗೆ ಸ್ವಾತಂತ್ರ್ಯವಿರಬೇಕು. ಹಾಗೆಂದಮಾತ್ರಕ್ಕೇ ನಾನು ಅಂಥದೇನಾದರೂ ಮಾಡಿಯೇನೆಂದೇನೂ ಅರ್ಥವಲ್ಲ. ಆ ಬೇರೆ ಬಗೆಯ ಸಮಾಜವಾದದಲ್ಲಿ ವ್ಯಕ್ತಿಸ್ವಾತಂತ್ರ್ಯವಿರದು. ನಿಮ್ಮದಾಗಿ ಏನೂ ಇರದು, ನಿಮ್ಮ ಶರೀರವೂ ಸಹ.

**ಫಿಶರ್**—ಹೌದು, ಬೇರೆ ಬೇರೆ ಬಗೆಗಳಿವೆ. ಸುಧಾರಿತ ಸ್ವರೂಪದ ನನ್ನ ಸಮಾಜವಾದದಲ್ಲಿ ಪ್ರಭುತ್ವವೇ ಪ್ರತಿಯೊಂದಕ್ಕೂ ಒಡೆಯನಾಗಿರದು. ರಷ್ಯದಲ್ಲಿ ಹಾಗಿದೆ. ಅಲ್ಲಿ ನಿಮ್ಮ ಶರೀರಕ್ಕೂ ನೀವು ಒಡೆಯರಲ್ಲ. ಯಾವಾಗ ಬೇಕಾದರೂ ನಿಮ್ಮನ್ನು ಬಂಧಿಸಬಹುದು, ನೀವು ಯಾವ ದುಷ್ಕೃತ್ಯವೆಸಗದಿದ್ದರೂ. ಎಲ್ಲಿಗೆ ಬೇಕಾದರೂ ನಿಮ್ಮನ್ನು ಅವರು ಕಳಿಸಬಹುದು.

**ಗಾಂಧೀಜೀ** — ನಿಮ್ಮ ಸಮಾಜವಾದದಲ್ಲಿ ಪ್ರಭುತ್ವ ಮಕ್ಕಳನ್ನು ತನ್ನ ವಶಕ್ಕೆ ಪಡೆದುಕೊಳ್ಳುವುದಿಲ್ಲವೇ, ಅವರಿಗೆ ತಮ್ಮ ಇಷ್ಟದಂತೆ ಶಿಕ್ಷಣ ಕೊಡುವುದಿಲ್ಲವೇ?

**ಫಿಶರ್**—ಎಲ್ಲ ರಾಜ್ಯಗಳೂ ಹಾಗೆಯೇ ಮಾಡುತ್ತವೆ. ಅಮೆರಿಕವೂ ಹಾಗೆಯೇ ಮಾಡುತ್ತಿದೆ.

**ಗಾಂಧೀಜೀ** — ಅಂದರೆ ಅಮೆರಿಕವೂ ರಷ್ಯದಿಂದೇನೂ ಬಹಳ ಭಿನ್ನವಲ್ಲ.

**ಫಿಶರ್**—ನಿಮ್ಮ ಆಕ್ಷೇಪಣೆ ನಿಜವಾಗಿ ಸರ್ವಾಧಿಕಾರಕ್ಕೆ.

**ಗಾಂಧೀಜೀ**—ಆದರೆ ಸಮಾಜವಾದ ಸರ್ವಾಧಿಕಾರವೇ. ಅಥವಾ ಆರಾಮು ಕುರ್ಚಿಯ ವೇದಾಂತ. ನಾನು ಕಮ್ಯುನಿಸ್ಟ್ ಎಂದೂ ನನ್ನನ್ನು ಕರೆದುಕೊಳ್ಳುತ್ತೇನೆ.

**ಫಿಶರ್**—ಓ, ಬೇಡಿ. ನೀವು ಕಮ್ಯುನಿಸ್ಟ್ ಎಂದು ಕರೆದುಕೊಳ್ಳುವುದು ಭಯಂಕರ. ನಿಮಗೆ, ಜಯಪ್ರಕಾಶ್‌ಗೆ, ಸಮಾಜವಾದಿಗಳಿಗೆ ಬೇಕಾದುದೇ ನನಗೆ ಬೇಕಾದುದೂ—ಸ್ವತಂತ್ರ ಜಗತ್ತು. ಆದರೆ ಕಮ್ಯುನಿಸ್ಟರಿಗೆ ಅದು ಬೇಡ. ದೇಹವನ್ನೂ ಬುದ್ಧಿಯನ್ನೂ ದಾಸನನ್ನಾಗಿಸಿಕೊಳ್ಳುವ ವ್ಯವಸ್ಥೆಯೇ ಅವರಿಗೆ ಬೇಕಾದುದು.

**ಗಾಂಧೀಜೀ** — ಮಾರ್ಕ್ಸ್‌ನ ವಿಷಯದಲ್ಲಿಯೂ ನೀವು ಅದನ್ನೇ ಹೇಳುವಿರಾ ?

**ಫಿಶರ್** — ಕಮ್ಯುನಿಸ್ಟರು ಮಾರ್ಕ್ಸ್‌ನ ಉಪದೇಶವನ್ನು ತಮ್ಮ ಸೌಕರ್ಯಕ್ಕೆ ತಕ್ಕಂತೆ ಕುಲಗೆಡಿಸಿಕೊಂಡಿದಾರೆ.

**ಗಾಂಧೀಜೀ**—ಹಾಗಾದರೆ ಲೆನಿನ್ನೋ ?

**ಫಿಶರ್**—ಲೆನಿನ್ ಪ್ರಾರಂಭಿಸಿದ. ಸ್ಟಾಲಿನ್ ಆಮೇಲೆ ಪೂರ್ತಿಮಾಡಿಬಿಟ್ಟ. ಕಮ್ಯುನಿಸ್ಟರು ನಿಮ್ಮ ಬಳಿ ಬರುವುದು ಕಾಂಗ್ರೆಸಿನೊಳಕ್ಕೆ ಸೇರಲು, ಸೇರಿ ತಮ್ಮ ಉದ್ದೇಶ್ಯಕ್ಕೆ ಅದನ್ನು ಬಳಸಿಕೊಳ್ಳಲು.

**ಗಾಂಧೀಜೀ** — ಸೋಷಲಿಸ್ಟರೂ (ಸಮಾಜವಾದಿಗಳೂ) ಹಾಗೆಯೇ ಮಾಡುತ್ತಾರಲ್ಲವೇ ? ನನ್ನ ಸಾಮ್ಯವಾದ (ಕಮ್ಯುನಿಜಂ) ಸಮಾಜವಾದ (ಸೋಷಲಿಜಂ)ದಿಂದೇನೂ ಅಷ್ಟು ಭಿನ್ನವಾದುದಲ್ಲ. ಅದು ಎರಡರ ಸಮರಸ ಸಮನ್ವಯ. ನಾನು ತಿಳಿದಿರುವಂತೆ ಸಾಮ್ಯವಾದ ಸಮಾಜವಾದದ ಸಹಜ ಪರಿಣಾಮ.

**ಫಿಶರ್** — ನೀವು ಹೇಳುವುದು ಸರಿ. ಎರಡನ್ನೂ ಒಂದರಿಂದ ಇನ್ನೊಂದನ್ನು ಗುರುತು ಹಚ್ಚುವುದೇ ಕಷ್ಟವಾಗಿದ್ದ ಕಾಲವೊಂದಿತ್ತು. ಆದರೆ ಇಂದು ಸೋಷಲಿಸ್ಟರು ಕಮ್ಯುನಿಸ್ಟರಿಂದ ಬಹುಭಿನ್ನ.

**ಗಾಂಧೀಜೀ**—ಸ್ಟಾಲಿನ್ ಮಾದರಿಯ ಸಾಮ್ಯವಾದ ಬೇಡವೆಂದಲ್ಲವೇ ನೀವು ಹೇಳುವುದು ?

**ಫಿಶರ್**—ಭಾರತದ ಕಮ್ಯುನಿಸ್ಟರಿಗೆ ಭಾರತದಲ್ಲಿ ಸ್ಟಾಲಿನ್ ಮಾದರಿಯ ಸಾಮ್ಯವಾದವೇ ಬೇಕು. ಅದಕ್ಕೆ ನಿಮ್ಮ ಹೆಸರನ್ನೂ ಉಪಯೋಗಿಸಿಕೊಳ್ಳ ಬಯಸುತ್ತಾರೆ ಅವರು.

**ಗಾಂಧೀಜೀ**—ಅವರು ಸಫಲರಾಗುವುದಿಲ್ಲ. (೫೧

ಈಗ ಭಾರತದಲ್ಲಿ ಆ ತತ್ತ್ವವನ್ನು ಉಚ್ಚರಿಸುತ್ತಿರುವರೆಂದು ನಾ ಬಲ್ಲವರಿಗಿಂತ ಎಷ್ಟೋ ಮುಂಚೆಯೇ ನಾನು ಸಮಾಜವಾದಿ ಎಂದು ಹೇಳಿಕೊಂಡಿದೇನೆ. ಆದರೆ ನನ್ನ ಸಮಾಜವಾದ ನನಗೆ ಸಹಜವಾಗಿ ಬಂತು, ಯಾವ ಪುಸ್ತಕಗಳಿಂದಲೂ ಬರಲಿಲ್ಲ. ಅದು ಅಹಿಂಸೆಯಲ್ಲಿ ನನ್ನ ಅವಿಚ್ಛಿನ್ನ ನಂಬಿಕೆಯಿಂದ ಬಂತು. ಸಾಮಾಜಿಕ ಅನ್ಯಾಯ ಎಲ್ಲೇ ಸಂಭವಿಸಲಿ ಅದರ ವಿರುದ್ಧ ಏಳದೆ ಯಾವನೂ ಸಕ್ರಿಯವಾಗಿ ಅಹಿಂಸಕನಾಗಿರಲಾರ. ಸಮಾಜವಾದೀ ವಿಚಾರಧಾರೆಯನ್ನು ಅನ್ವಯಗೊಳಿಸಲು ಪಾಶ್ಚಿಮಾತ್ಯ ಸಮಾಜವಾದಿಗಳು ದುರ್ದೈವವಶಾತ್ ಹಿಂಸೆಯ ಆವಶ್ಯಕತೆಯನ್ನು ನಂಬಿದಾರೆ.

ಕಟ್ಟಕಡೆಯವನಿಗೂ, ನಿಮ್ನತಮನಿಗೂ ಸಾಮಾಜಿಕ ನ್ಯಾಯಪ್ರಾಪ್ತಿ ಬಲಪ್ರಯೋಗದಿಂದ ಆಗದೆಂದು ಸದಾ ನನ್ನ ನಂಬಿಕೆ. ನಿಮ್ನತಮರು ಅನುಭವಿಸುತ್ತಿರುವ ಸಂಕಟಗಳ ನಿವಾರಣೆ ಅಹಿಂಸಾ ವಿಧಾನಗಳಲ್ಲಿ ಅವರನ್ನು ತಯಾರುಮಾಡುವವರಿಂದ ಸಾಧ್ಯವೆಂದೂ ನಾ ನಂಬಿದೇನೆ. ಅಹಿಂಸಾತ್ಮಕ ಅಸಹಕಾರವೇ ಆ ಮಾರ್ಗ. ಎಷ್ಟೋ ವೇಳೆ ಅಸಹಕಾರವೂ ಸಹಕಾರದಷ್ಟೇ ಧರ್ಮವಾಗಿಬಿಡುತ್ತದೆ. ತನ್ನ ಆತ್ಮಘಾತದಲ್ಲಿ, ದಾಸ್ಯದಲ್ಲಿ ಯಾವನೊಬ್ಬನೂ ಸಹಕರಿಸಲು ಬದ್ಧನಲ್ಲ. ಹಿಂದೆ ಎಂದೂ ಸಾಧಿಸಲಾಗದುದನ್ನು ಅಹಿಂಸಾತ್ಮಕ ಅಸಹಕಾರ ಸಾಧಿಸೀತೆಂಬುದು ನನಗೆ ಖಚಿತ—ಅದೂ ಕಡೆಗೆ ದೋಷಿಗಳನ್ನು ಪರಿವರ್ತಿಸಿ.೧೫೨

## ಪರಿವರ್ತನೆ ೬. ಶಾಸ್ತ್ರೀಯ ಸಮಾಜವಾದ

ಬಂಡವಾಳಗಾರರು ಬಂಡವಾಳವನ್ನು ದುರುಪಯೋಗಪಡಿಸಿದುದನ್ನು ಕಂಡುಹಿಡಿದುದರಿಂದೇನೂ ಸಮಾಜವಾದ ಹುಟ್ಟಲಿಲ್ಲ. ನಾನು ವಾದಿಸಿರುವಂತೆ, ಸಮಾಜವಾದ, ಅಷ್ಟೇ ಏಕೆ ಸಾಮ್ಯವಾದವೂ ಈಶೋಪನಿಷತ್ತಿನ ಮೊದಲ ಮಂತ್ರದಲ್ಲೇ ವ್ಯಕ್ತವಾಗಿದೆ. ನಿಜವೆಂದರೆ, ಶಿಕ್ಷಿತ ಸುಧಾರಕರೂ ಪರಿವರ್ತನೆಯ ಮಾರ್ಗದಲ್ಲಿ ನಂಬಿಕೆ ಕಳೆದುಕೊಂಡುಬಿಟ್ಟರು. ಅಂತಲೇ ಶಾಸ್ತ್ರೀಯ ಸಮಾಜವಾದದ ತಂತ್ರ ಆಗ ಹುಟ್ಟಿತು. ಶಾಸ್ತ್ರೀಯ ಸಮಾಜವಾದಿಗಳ ಎದುರು ಇರುವ ಸಮಸ್ಯೆಯನ್ನೇ ನಾನೂ ಬಿಡಿಸತೊಡಗಿರುವುದು.

ನನ್ನ ದಾರಿ ಯಾವಾಗಲೂ ಅಮಿಶ್ರಿತ, ಅಪ್ಪಟ ಅಹಿಂಸೆಯದೇ, ಅದೊಂದೇ ನನ್ನ ಮಾರ್ಗ, ಇದು ಮಾತ್ರ ನಿಜ.

**ಪ್ರಶ್ನೆ**—ಶ್ರಮಿಕರಿಗೆ, ರೈನಿತಗೆ, ಗಿರಣಿ ಕೆಲಸಗಾರನಿಗೆ ನೀವು ಹಿತ ಬಯಸುವಿರಾದರೆ ವರ್ಗಸಂಘರ್ಷವನ್ನು ನೀವು ತಪ್ಪಿಸಿಕೊಂಡೀರಾ ?

**ಉತ್ತರ**—ಜನ ಅಹಿಂಸೆಯ ಮಾರ್ಗ ಅನುಸರಿಸಿದುದಾದರೆ ಅತಿ ನಿಶ್ಚಯವಾಗಿ ತಪ್ಪಿಸಬಲ್ಲೆ. ಅಹಿಂಸೆಯನ್ನು ಕೇವಲ ನೀತಿಯಾಗಿ ಅನುಸರಿಸಿದರೂ ಕಳೆದ ಹನ್ನೆರಡು ತಿಂಗಳ ಅನುಭವ ಅಹಿಂಸೆಯ ಸಾಧ್ಯತೆಯನ್ನು ಪುಷ್ಕಳವಾಗಿ ಸಿದ್ಧಮಾಡಿದೆ. ಜನ ಅದನ್ನು ಆಚರಣೆಯ ತತ್ತ್ವವನ್ನಾಗಿ ಅಂಗೀಕರಿಸಿಬಿಟ್ಟರೆ ವರ್ಗಸಂಘರ್ಷ ಅಸಂಭವವೇ ಆಗಿಬಿಟ್ಟೀತು. ಆ ದಿಶೆಯಲ್ಲಿ ಪ್ರಯೋಗ ಅಹಮದಾಬಾದಿನಲ್ಲಿ ನಡೆಯುತ್ತಿದೆ. ಅಲ್ಲಿ ಅದು ತೃಪ್ತಿಕರ ಫಲಿತಾಂಶ ಕೊಟ್ಟಿದೆ, ಅದು ನಿರ್ಣಾಯಕವೆಂದು ಸಿದ್ಧವಾಗುವ ಎಲ್ಲ ಸಂಭವವೂ ಇದೆ. ಅಹಿಂಸಾಮಾರ್ಗದಲ್ಲಿ ನಾವು ಬಂಡವಾಳಗಾರನನ್ನು ನಾಶಮಾಡಬಯಸುವುದಿಲ್ಲ, ಬಂಡವಾಳಶಾಹಿಯನ್ನು ನಾಶಪಡಿಸುತ್ತೇವೆ. ತನ್ನ ಬಂಡವಾಳದ ಹುಟ್ಟು, ಉಳಿವು, ಹೆಚ್ಚಳಕ್ಕಾಗಿಯೂ ಆತ ಯಾರನ್ನು ಅವಲಂಬಿಸಿದಾನೆಯೋ ಅವರ ಧರ್ಮದರ್ಶಿ ತಾನೆಂದು ಭಾವಿಸಬೇಕೆಂದು ನಾವು ಬಂಡವಾಳಗಾರನಿಗೆ ಆವಾಹಿಸುತ್ತೇವೆ. ಇದರಲ್ಲಿ ಕೆಲಸಗಾರನೂ ಆತನ ಪರಿವರ್ತನೆಗಾಗಿ ಕಾಯಬೇಕಾಗಿಲ್ಲ. ಬಂಡವಾಳವೊಂದು ಶಕ್ತಿಯಾದರೆ ಶ್ರಮವೂ ಅಷ್ಟೇ. ಎರಡೂ ಶಕ್ತಿಗಳನ್ನೂ ವಿನಾಶಕಾರಕವಾಗಿ ಬಳಸಬಹುದು. ಎರಡೂ ಪರಸ್ಪರ ಅವಲಂಬಿಗಳು. ದುಡಿಮೆಗಾರ ತನ್ನ ಶಕ್ತಿಯನ್ನು ಅರಿತ ಕೂಡಲೇ ಬಂಡವಾಳಗಾರನ ಗುಲಾಮನಾಗಿರುವ ಬದಲು ಅವನೊಡನೆ ಪಾಲುಗಾರನಾಗುವ ಸ್ಥಿತಿಗೆ ಬರುತ್ತಾನೆ. ತಾನೊಬ್ಬನೇ ಅದರ ಒಡೆಯನಾಗಬೇಕೆಂದು ಬಯಸಿದರೆ ಅವನು ಬಂಗಾರದ ತತ್ತಿಯಿಡುವ ಕೋಳಿಯನ್ನು ಬಹುಶಃ ಕೊಂದುಬಿಡುತ್ತಾನೆ. ಬುದ್ಧಿಯ, ಅವಕಾಶದ ಅಸಮಾನತೆ ಕಾಲದ ಕೊನೆತನಕ ಉಳಿದಾವು. ಹೊಳೆಯ ದಂಡೆಯಲ್ಲಿ ವಾಸಿಸುವವನಿಗೆ ಮರುಭೂಮಿಯಲ್ಲಿರುವವನಿಗಿಂತ ಹೆಚ್ಚು ಬೆಳೆ ಬೆಳೆಯಲೂ ಎಂದೂ ಹೆಚ್ಚು ಅವಕಾಶವೇ. ಆದರೆ ಅಸಮಾನತೆಗಳು ನಮ್ಮ ಕಣ್ಣು ಕುಕ್ಕಿದರೂ ಆವಶ್ಯಕ

ಸಮಾನತೆಯ ದೃಷ್ಟಿಯನ್ನು ನಾವು ಕಳೆದುಕೊಳ್ಳತಕ್ಕದ್ದಲ್ಲ. ಪಕ್ಷಿಗಳಿಗೂ ಪ್ರಾಣಿಗಳಿಗೂ ಇರುವಂತೆಯೇ ಪ್ರತಿಯೊಬ್ಬ ಮನುಷ್ಯನಿಗೂ ಜೀವನದ ಆವಶ್ಯಕತೆಗಳನ್ನು ಹೊಂದಲು ಸಮಾನ ಹಕ್ಕುಂಟು. ಪ್ರತಿಯೊಂದು ಹಕ್ಕಿಗೂ ಪ್ರತಿಯಾದ ಕರ್ತವ್ಯ ಉಂಟು, ಅವರ ಮೇಲೆ ದಾಳಿ ನಡೆದಾಗ ಪ್ರತಿಯಾಗಿ ಹೋರಾಡುವ ಪರಿಹಾರವೂ ಉಂಟು. ಆದುವರಿಂದ ಮೂಲ ಭೂತ ಪ್ರಾಥಮಿಕ ಸಮಾನತೆಯನ್ನು ಸಂರಕ್ಷಿಸಲು ಪರಿಹಾರಗಳನ್ನೂ, ಪ್ರತಿಯೊಬ್ಬನ ಕರ್ತವ್ಯವನ್ನೂ ಕಂಡುಕೊಳ್ಳುವುದೇ ನಮ್ಮ ಕೆಲಸ. ನನ್ನ ಕೈಕಾಲುಗಳಿಂದ ದುಡಿಯುವುದೇ ನನ್ನ ಈ ಧರ್ಮ, ನನ್ನ ದುಡಿಮೆಯ ಫಲವನ್ನು ಕಸಿದುಕೊಳ್ಳುವವನೊಡನೆ ಅಸಹಕಾರ ಹೂಡುವುದೇ ತತ್ಸಂಬಂಧವಾದ ಪರಿಹಾರ ಮಾರ್ಗ. ಬಂಡವಾಳಗಾರನ ಹಾಗೂ ದುಡಿಮೆಗಾರನ ನಡುವಣ ಮೂಲಭೂತ ಸಮಾನತೆಯ ತತ್ತ್ವವನ್ನು ನಾ ಮನಗಂಡುದಾದರೆ — ನಾ ಮನಗಾಣಲೇಬೇಕು — ನಾನು ಅವನ ವಿನಾಶವನ್ನು ಅಪೇಕ್ಷಿಸತಕ್ಕುದಲ್ಲ. ಅವನ ಪರಿವರ್ತನೆಗೆ ನಾ ಹೆಣಗತಕ್ಕದ್ದು. ಅವನು ಮಾಡುತ್ತಿರಬಹುದಾದ ತಪ್ಪಿಗೆ ಅವನ ಕಣ್ಣನ್ನು ನನ್ನ ಅಸಹಕಾರ ತೆರೆಸಬೇಕು. ನಾನು ಅಸಹಕಾರ ಮಾಡಿದಾಗ ನನ್ನ ಸ್ಥಳವನ್ನು ಬೇರಾರೋ ಆಕ್ರಮಿಸಿಬಿಡಬಹುದೆಂಬ ಭಯ ನನಗೆ ಇರಬಾರದು. ನನ್ನ ಮಾಲಿಕನ ತಪ್ಪಿತದಲ್ಲಿ ನನ್ನ ಸಹ-ಉದ್ಯೋಗಿಗಳು ನೆರವಾಗದಂತೆ ಅವರನ್ನು ಪ್ರಭಾವಿತಗೊಳಿಸಿಯೇನೆಂದು ನನ್ನ ನಿರೀಕ್ಷೆ. ಕಾರ್ಮಿಕಸ್ತೋಮದ ಈ ಬಗೆಯ ಶಿಕ್ಷಣ ನಿಧಾನವಾದ ಕ್ರಮ, ನಿಸ್ಸಂಶಯ; ಆದರೆ ಅದೇ ಅತ್ಯಂತ ನಿಶ್ಚಿತವಾದುದರಿಂದ ಅದೇ ಅತ್ಯಂತ ಶೀಘ್ರವಾದುದೂ ಹೌದು. ಬಂಡವಾಳಗಾರನನ್ನು ನಾಶಪಡಿಸುವುದೆಂದರೆ ಕಡೆಗೆ ಕೆಲಸಗಾರನ ವಿನಾಶವೆಂದೇ ಸುಲಭವಾಗಿ ತೋರಿಸಬಹುದು. ಯಾವ ಮನುಷ್ಯನೂ ಸುಧಾರಣೆಗೊಳ್ಳದಷ್ಟು ಕೆಟ್ಟವನಲ್ಲ. ಆದುದರಿಂದ ತಾನು ಪೂರಾ ಕೆಟ್ಟವನೆಂದು ತಪ್ಪಾಗಿ ಭಾವಿಸುವವನನ್ನು ನಾಶಪಡಿಸುವಷ್ಟು ಯಾವ ಮನುಷ್ಯನೂ ಪರಿಪೂರ್ಣನಲ್ಲ.೧೫೪

* * * *

**ಪ್ರಶ್ನೆ**—ಸಮಾಜವಾದೀ ಕ್ರಾಂತಿ ಆಗಿಬಿಟ್ಟರೆ ಜಾತೀಯ ಪ್ರಶ್ನೆಯನ್ನು ಹಿಂಬದಿಗೆ ತಳ್ಳಿ ಆರ್ಥಿಕ ಪ್ರಶ್ನೆ ಮುಂದೆ ಬಂದುಬಿಡುತ್ತದೆ — ಎನ್ನುತ್ತಾರೆ

ಬಹುಮಂದಿ ಸಮಾಜವಾದಿಗಳು. ನೀವು ಅವನ್ನು ಒಪ್ಪುವಿರಾ? ಅಂಥ ಕ್ರಾಂತಿಯಾದರೆ ನೀವು 'ರಾಮರಾಜ್ಯ'ವೆಂದು ಕರೆಯುವ ಭಗವಂತನ ಸಾಮ್ರಾಜ್ಯದ ಸ್ಥಾಪನೆಗೆ ಅದು ನೆರವಾಗುವುದೇ?

**ಉತ್ತರ**—ನೀವು ಕಲ್ಪಿಸಿಕೊಳ್ಳುವ ಆರ್ಥಿಕ ಸಂಘರ್ಷ ಹಿಂದೂ-ಮುಸ್ಲಿಂ ತಿಕ್ಕಾಟವನ್ನು ಸ್ವಲ್ಪ ಕಡಿಮೆ ಉಲ್ಬಣಗೊಳಿಸಬಹುದು. ಹಿಂದೂ-ಮುಸ್ಲಿಂ ತಿಕ್ಕಾಟ ಕೊನೆಗಂಡರೂ ನಮ್ಮ ಎಲ್ಲ ತೊಡಕುಗಳೂ ಕೊನೆಗಂಡ ಹಾಗಲ್ಲ. ದಾಸ್ಯ ಅಳಿದು, ಸ್ವಾತಂತ್ರ್ಯ ಉದಯಿಸಿದಾಗ ನಮ್ಮ ದೌರ್ಬಲ್ಯ ಗಳೆಲ್ಲ ಮೇಲೆ ಬರತೊಡಗುತ್ತವೆ. ಈಗ ಆಗುತ್ತಿರುವುದೂ ಇದೇ. ಅದಕ್ಕಾಗಿ ನಾವು ಅನಾವಶ್ಯಕವಾಗಿ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ನಮ್ಮ ಸಮತೂಕ ವನ್ನು ಕಾಯ್ದುಕೊಂಡರೆ ಅಂಥ ಪ್ರಸಂಗದಲ್ಲಿ ಎಲ್ಲ ತೊಡಕುಗಳನ್ನೂ ಬಿಡಿಸಿ ಕೊಳ್ಳಬಹುದು. ಆರ್ಥಿಕ ಸಮಸ್ಯೆಯನ್ನಂತೂ ಹೇಗೂ ನಾವು ಪರಿಹರಿಸಲೇ ಬೇಕು. ಇಂದೋ ಅಪಾರ ಆರ್ಥಿಕ ಅಸಮಾನತೆ ಇದೆ. ಆರ್ಥಿಕ ಸಮತೆಯೇ ಸಮಾಜವಾದದ ಆಧಾರ. ಕೆಲವರು ಐಶ್ವರ್ಯದಲ್ಲಿ ಹೊರಳಾಡಿ, ಜನತೆಗೆ ಉಣ್ಣಲು ಕೂಡ ಸಿಗದಂತಿರುವ ಇಂದಿನಂಥ ವಿಷಮ ಅಸಮಾನತೆಯ ಸ್ಥಿತಿ ಯಲ್ಲಿ ರಾಮರಾಜ್ಯವೇ ಶಕ್ಯವಿಲ್ಲ. ನಾನು ದಕ್ಷಿಣ ಆಫ್ರಿಕದಲ್ಲಿದ್ದಾಗಲೇ ಸಮಾಜವಾದದ ತತ್ತ್ವವನ್ನು ಒಪ್ಪಿಕೊಂಡುಬಿಟ್ಟಿದ್ದೆ. ಯಾವುದೇ ಸ್ಥಿರ ಸುಧಾರಣೆ ತರಲು ಹಿಂಸಾಸಾಧನವನ್ನು ಬಳಸುವುದನ್ನು ಖಂಡಿಸುವುದರಲ್ಲೇ ಸಮಾಜವಾದಿಗಳಿಗೆ ನನ್ನ ವಿರೋಧ.[೧೫೪]

'ಬಾಲ್ಶೆವಿಜಂ' (ಬಾಲ್ಶೆವಿಕರ ಅರ್ಥಾತ್ ಕಮ್ಯುನಿಸ್ಟರ ವಾದ) ಏನು ಎಂಬುದನ್ನು ನಾ ಅರಿಯೆ, ನಾನಿನ್ನೂ ಅದನ್ನು ಅಧ್ಯಯನ ಮಾಡಲಾಗಿಲ್ಲ. ಅದು ಕಟ್ಟಕಡೆಗೆ ರಷ್ಯಕ್ಕೆ ಹಿತಕಾರಿಯೋ ಅಲ್ಲವೋ ನಾನರಿಯೆ. ಹಿಂಸೆ ಹಾಗೂ ಭಗವಂತನ ನಿರಾಕರಣೆಯ ಆಧಾರದ ಮೇಲೆ ನಿಂತಿರುವುದರಿಂದ ನಾನದಕ್ಕೆ ಹೇಸುತ್ತೇನೆ. ವಿಜಯಕ್ಕೆ ಹಿಂಸಾತ್ಮಕವಾದ ಒಳಹಾದಿಗಳಲ್ಲಿ ನನಗೆ ನಂಬಿಕೆಯಿಲ್ಲ. ನನ್ನ ಕಡೆ ಲಕ್ಷ್ಯ ಕೊಡುತ್ತಿರುವ ಬಾಲ್ಶೆವಿಕ್ ಮಿತ್ರರ ಸ್ತುತ್ಯ ಉದ್ದೇಶ್ಯಗಳನ್ನು ನಾನು ಎಷ್ಟೇ ಮೆಚ್ಚಿದರೂ ಅತ್ಯಂತ ಉದಾತ್ತ ಧ್ಯೇಯಸಾಧನೆಗಾದರೂ ಹಿಂಸಾಮಾರ್ಗ ಅನುಸರಿಸುವುದರ ಜಗ್ಗದ ಸಗ್ಗದ ವಿರೋಧಿ ನಾನು ಎಂಬುದನ್ನು ಅರಿತುಕೊಳ್ಳಲಿ. ಹಿಂಸಾಪಂಥಿಗಳ ಹಾಗೂ

ನನ್ನ ನಡುವೆ ಸಾಮಾನ್ಯ ಭೂಮಿಕೆ ಇಲ್ಲವೇ ಇಲ್ಲ. ನನ್ನ ಅಹಿಂಸಾಧರ್ಮ ಅರಾಜಕತಾವಾದಿಗಳು ಹಾಗೂ ಹಿಂಸೆಯನ್ನು ನಂಬುವವರೆಲ್ಲರೊಂದಿಗೂ ವ್ಯವಹರಿಸಲು ನಿಷೇಧಿಸಿರುವುದಷ್ಟೇ ಅಲ್ಲ, ಅವರೊಡನೆ ಕೂಡಲೂ ಒತ್ತಾಯ ಪಡಿಸುತ್ತದೆ. ಆ ಸಹವಾಸವೂ ನನಗೆ ಅವರ ತಪ್ಪೆಂದು ಕಾಣುವುದರಿಂದ ಅವರನ್ನು ಪರಾವೃತ್ತಗೊಳಿಸುವ ಏಕೈಕ ಉದ್ದೇಶ್ಯಕ್ಕಾಗಿಯೇ. ಏಕೆಂದರೆ ಅಸತ್ಯ ಹಾಗೂ ಹಿಂಸಾಮಾರ್ಗದಿಂದ ಶಾಶ್ವತ ಹಿತ ಎಂದೂ ಬಾರದೆಂದು ನನ್ನ ಅನುಭವ ನನಗೆ ಪೂರಾ ಮನಗಾಣಿಸಿಕೊಟ್ಟಿದೆ. ನನ್ನ ನಂಬಿಕೆ ಒಂದು ನೆಚ್ಚಿನ ಭ್ರಮೆಯಿರಬಹುದು, ಆದು ಚಿತ್ತಾಕರ್ಷಕ ಭ್ರಮೆಯೆಂದು ಎಲ್ಲರೂ ಒಪ್ಪಿಯಾರು ೧೫೫

* * * *

**ಪ್ರಶ್ನೆ**—ಬಾಲ್ಷೆವಿಜಂನ ಸಮಾಜಮುಖೀ ಅರ್ಥಶಾಸ್ತ್ರದ ವಿಷಯದಲ್ಲಿ ನಿಮ್ಮ ಅಭಿಮತವೇನು? ನಮ್ಮ ದೇಶ ಅದನ್ನು ಎಷ್ಟರಮಟ್ಟಿಗೆ ಅನುಕರಿಸುವುದು ಸೂಕ್ತ?

**ಉತ್ತರ**—ಬಾಲ್ಷೆವಿಜಂನ ಅರ್ಥವನ್ನು ನಾನು ಇನ್ನೂ ಪೂರಾ ಅರಿಯುವುದಾಗಿಲ್ಲವೆಂದು ನಾ ಒಪ್ಪಿಕೊಳ್ಳಬೇಕು. ಖಾಸಗಿ ಸೊತ್ತಿನ ಸಂಸ್ಥೆಯನ್ನು (ವ್ಯವಸ್ಥೆಯನ್ನು) ಅದು ತೊಡೆದುಹಾಕಬಯಸುತ್ತದೆ ಎಂದಷ್ಟೇ ನಾನು ಬಲ್ಲೆ. ಇದು ಆರ್ಥಿಕ ಕ್ಷೇತ್ರಕ್ಕೆ ಅಪರಿಗ್ರಹ ನೀತಿತತ್ತ್ವದ ಪ್ರಯೋಗ, ಅಷ್ಟೆ. ಈ ಆದರ್ಶವನ್ನು ಜನ ತಾವಾಗಿಯೇ ಅಂಗೀಕರಿಸಿದರೆ, ಅಥವಾ ಶಾಂತಿಯುತ ಪರಿವರ್ತನೆ–ಅನುನಯಗಳಿಂದ ಒಪ್ಪುವಂತೆ ಮಾಡಿದುದಾದರೆ ಅಂಥದು ಮತ್ತಾವುದಿದ್ದೀತು! ಆದರೆ ಬಾಲ್ಷೆವಿಜಂ ನಾ ತಿಳಿದಿರುವಷ್ಟುಮಟ್ಟಿಗೆ ಖಾಸಗಿ ಸೊತ್ತನ್ನು ಕಸಿದುಕೊಳ್ಳಲು ಹಾಗೂ ಸಾಮುದಾಯಿಕವಾದ ಪ್ರಭುತ್ವದ ಒಡೆತನವನ್ನು ಕಾಯ್ದುಕೊಳ್ಳಲು ದಂಡಪ್ರಯೋಗವನ್ನು ತಡೆಯದಿರುವುದಷ್ಟೇ ಅಲ್ಲದೆ ಅದಕ್ಕೆ ಮುಕ್ತಸಮ್ಮತಿಯನ್ನೂ ಕೊಡುತ್ತದೆ. ಅದು ಹಾಗೆ ಆದ ಪಕ್ಷದಲ್ಲಿ ಬಾಲ್ಷೆವಿಕ್ ಪ್ರಭುತ್ವ ಅದರ ಇಂದಿನ ಸ್ವರೂಪದಲ್ಲಿ ಬಹಳ ದಿನ ಬಾಳಲಾರದು. ಈ ಮಾತು ಹೇಳಲು ನನಗೆ ಯಾವ ಹಿಂಜರಿಕೆಯೂ ಇಲ್ಲ. ಹಿಂಸೆಯ ಆಧಾರದ ಮೇಲೆ ಸ್ಥಿರವಾದುದಾವುದನ್ನೂ ನಿರ್ಮಿಸಲು ಸಾಧ್ಯವಿಲ್ಲ. ಇದು ನನ್ನ ದೃಢವಿಶ್ವಾಸ. ಹೀಗಿದ್ದರೂ ಸಹ ಬಾಲ್ಷೆವಿಕ್ ಆದರ್ಶದ ಹಿಂದೆ

ತಮ್ಮ ಸರ್ವಸ್ವವನ್ನೂ ಅದಕ್ಕಾಗಿ ಧಾರೆಯೆರೆದಿರುವ ಅಸಂಖ್ಯ ಸ್ತ್ರೀಪುರುಷರ ಅತ್ಯಂತ ಪರಿಶುದ್ಧತ್ಯಾಗದ ಬಲವಿದೆ. ಲೆನಿನ್ ಮಹಾಶಯನಂಥ ವಿಭೂತಿ ಪುರುಷರ ತ್ಯಾಗದಿಂದ ಪುನೀತವಾದ ಆದರ್ಶ ಎಂದೂ ವ್ಯರ್ಥವಾಗದು. ಅವರ ಸರ್ವ ಪರಿತ್ಯಾಗದ ಉದಾತ್ತ ಉದಾಹರಣೆ ಸರ್ವಕಾಲಕ್ಕೂ ಅಲಂಕಾರಪ್ರಾಯ ವಾಗಿ ಇದ್ದೀತು, ಕಾಲ ಸಂದಂತೆಲ್ಲ ಆ ಆದರ್ಶಕ್ಕೆ ಗತಿಶೀಲತೆ, ಶುದ್ಧಿ ಎರಡನ್ನೂ ನೀಡೀತು.೧೫೬

ನೀವೇನೋ ಕಮ್ಯುನಿಸ್ಟರು ಎಂದುಕೊಳ್ಳುತ್ತೀರಿ, ಆದರೆ ಕಮ್ಯುನಿಜಂನ, ಸಾಮ್ಯವಾದೀ ಬಾಳುವೆಯನ್ನು ನೀವು ಬಾಳುತ್ತಿಲ್ಲ. ಅದರ ಅತ್ಯುತ್ಕೃಷ್ಟ ಅರ್ಥದಲ್ಲಿ ನಾನು ಸಾಮ್ಯವಾದದ ಆದರ್ಶದ ಬದುಕನ್ನು ಬದುಕಲು ನನ್ನ ಸರ್ವ ಪ್ರಯತ್ನವನ್ನೂ ಮಾಡುತ್ತಿದೇನೆಂದು ನಿಮಗೆ ಹೇಳಬಲ್ಲೆ. ಸಾಮ್ಯ ವಾದ ಸೌಜನ್ಯವನ್ನೇನೂ ಬಹಿಷ್ಕರಿಸುವುದಿಲ್ಲವೆಂದು ನನ್ನೆಣಿಕೆ. ದೇಶವನ್ನು ನೀವು ನಿಮ್ಮೊಂದಿಗೆ ಒಯ್ಯಬಯಸುವುದಾದರೆ ನೀವು ಅವರೊಡನೆ ವಾದಮಾಡಿ ಆ ಸ್ಥಿತಿಯನ್ನು ಮುಟ್ಟಬೇಕು. ಬಲಾತ್ಕಾರದಿಂದ ನೀವು ಕೊಂಡೊಯ್ಯಲಾರಿರಿ. ನಿಮ್ಮ ಅಭಿಪ್ರಾಯಕ್ಕೆ ಬರುವಂತೆ ಮಾಡಲು ನಿಮ್ಮ ದೇಶಕ್ಕೆ ವಿನಾಶ ಉಂಟು ಮಾಡಬಹುದು. ಆದರೆ ಎಷ್ಟು ಮಂದಿಯನ್ನು ಕೊಂದೀರಿ? ಕೋಟಿಗಟ್ಟಲೆ ಜನರನ್ನಲ್ಲ, ಕೆಲವಾರು ಸಾವಿರ ಮಂದಿಯನ್ನು ನೀವು ಕೊಲ್ಲಬಲ್ಲಿರಿ— ಅದೂ ನಿಮ್ಮ ಬಳಿ ಲಕ್ಷಾಂತರ ಜನ ಇದ್ದರೆ. ಆದರೆ ನೀವಾದರೋ ಇಂದು ಹಿಡಿಯಷ್ಟು ಜನ! ಕಾಂಗ್ರೆಸ್ಸನ್ನೇ ಪರಿವರ್ತನೆ ಮಾಡಿಕೊಂಡು ಸಾಧ್ಯವಿದ್ದರೆ ನಿಮ್ಮ ಕೈಗೆ ತಗೆದುಕೊಳ್ಳಿ ಎನ್ನುತ್ತೇನೆ ನಾನು. ಆದರೆ ಸೌಜನ್ಯದ ಸಾಮಾನ್ಯ ನಿಯಮಗಳಿಗೂ ತಿಲಾಂಜಲಿ ಕೊಟ್ಟು ನೀವು ಆ ರೀತಿ ಮಾಡುವುದು ಸಾಧ್ಯ ಇಲ್ಲ. ಭಾರತವೇನೋ ಸುಸಂಬದ್ಧವಾಗಿ ಮಾತನಾಡುವ ಎಂಥವನಿಗೇ ಆದರೂ ಕಿವಿಗೊಡುವಷ್ಟು ಸಹಿಷ್ಣುವಾಗಿದೆ. ನೀವೂ ನಿಮ್ಮ ಅಭಿಪ್ರಾಯ ಗಳನ್ನು ಪೂರಾ ಪ್ರಕಟಿಸಬಹುದು. ಅಂಥದರಲ್ಲಿ ಸಾಮಾನ್ಯ ಸೌಜನ್ಯವನ್ನೂ ನೀವೇಕೆ ಕಳೆದುಕೊಳ್ಳಬೇಕೋ ನಾನರಿಯೆ.

ನನ್ನ ಯಾವುದೇ ಚಟುವಟಿಕೆ ಕೆಲಸಗಾರರಿಗೆ ಹಾನಿ ಉಂಟುಮಾಡಿಲ್ಲ, ಎಂದೂ ಮಾಡುವುದು ಸಾಧ್ಯವಿಲ್ಲ. ಕಮ್ಯುನಿಸ್ಟ್ ಪಕ್ಷ ಹುಟ್ಟುವ ಬಹು ಮುಂಚೆಯೇ ರೈತ–ಕಾರ್ಮಿಕರ ಸ್ವರಾಜ್ಯವಲ್ಲದ ಸ್ವರಾಜ್ಯಕ್ಕೆ ಅರ್ಥವೇ

ಇರದೆಂದು ಕಾಂಗ್ರೆಸ್ ತೀರ್ಮಾನಿಸಿತ್ತು. ಬಹುಶಃ ಇಲ್ಲಿರುವ ಕೆಲಸಗಾರರು ನೀವು ಯಾರೂ ತಿಂಗಳಿಗೆ ೨೦ ರೂಪಾಯಿಗಳಿಗಿಂತ ಕಡಿಮೆ ಕೂಲಿ ಪಡೆಯು ಲಾರಿರಿ. ನಾನು ನಿಮ್ಮ ಸ್ವರಾಜ್ಯಕ್ಕಾಗಿ ಅಷ್ಟೇ ಅಲ್ಲ, ದಿನಕ್ಕೆ ಒಪ್ಪೊತ್ತು ಊಟವೂ ಸಿಗದೆ, ಒಂದು ತುಣುಕು ಹಳಸಲು ರೊಟ್ಟಿಯನ್ನು ಚಿಟಿಕೆ ಉಪ್ಪಿ ನೊಡನೆ ಕಡಿಯಬೇಕಾದ ದುರ್ಗತಿ ಇರುವ ದುಡಿವ, ನಿರುದ್ಯೋಗಿ ಜನಕೋಟಿ ಗಾಗಿ ನಾನು ಸ್ವರಾಜ್ಯ ತರಲು ದುಡಿಯುತ್ತಿದೇನೆ. ನಾನೇನೂ ನಿಮಗೆ ಮೋಸಮಾಡಬಯಸುವುದಿಲ್ಲ. ನಾನು ನಿಮಗೆ ಎಚ್ಚರಿಕೆ ಕೊಡುವೆ. ಬಂಡವಾಳಗಾರರಿಗೆ ನಾನು ಏನೂ ಕೇಡು ಬಗೆಯುವುದಿಲ್ಲ. ಅವರಿಗೆ ಕೆಡಕು ಮಾಡುವುದನ್ನು ನಾನು ಯೋಚಿಸಲಾರೆ. ಆದರೆ ನಾನೇ ಕಷ್ಟ ಸಹಿಸಿ ಅವರ ಕರ್ತವ್ಯಭಾವನೆಯನ್ನು ಜಾಗೃತಗೊಳಿಸಬಯಸುತ್ತೇನೆ; ಅವರ ಹೃದಯವನ್ನು ಕರಗಿಸಬಯಸುತ್ತೇನೆ, ತಮ್ಮ ನತದೃಷ್ಟ ಸೋದರರಿಗೆ ನ್ಯಾಯ ಸಲ್ಲಿಸಲು ಕೇಳುತ್ತೇನೆ. ಅವರೂ ಮನುಷ್ಯರು, ಅವರಲ್ಲಿ ನನ್ನ ಬಿನ್ನಹ ವ್ಯರ್ಥವಾಗದು. ಜಪಾನಿನ ಇತಿಹಾಸ ಆತ್ಮಾರ್ಪಣಮಾಡಿದ ಎಷ್ಟೋ ಬಂಡ ವಾಳಗಾರರ ನಿದರ್ಶನಗಳನ್ನು ನೀಡುತ್ತದೆ. ಈಚಿನ ಸತ್ಯಾಗ್ರಹದಲ್ಲಿ ಸಾಕಷ್ಟು ಜನ ಬಂಡವಾಳಗಾರರು ಗಣನೀಯ ತ್ಯಾಗ ಸಲ್ಲಿಸಿವರು, ಜೇಲಿಗೆ ಹೋದರು, ಕಷ್ಟಪಟ್ಟರು. ಅವರನ್ನು ದೂರೀಕರಿಸಬಯಸುವಿರಾ? ನಮ್ಮ ಸಮಷ್ಟಿ ಧ್ಯೇಯಕ್ಕಾಗಿ ಅವರೂ ದುಡಿಯುವುದು ಬೇಡವೆನ್ನುವಿರಾ?

ದೇವರು ನಿಮಗೆ ಬುದ್ಧಿ, ಪ್ರತಿಭೆ ಕೊಟ್ಟಿದಾನೆ. ಅವನ್ನು ಸದುಪಯೋಗ ಗೊಳಿಸಿ. ನಿಮ್ಮ ತರ್ಕಶಕ್ತಿಯ ಮೇಲೆ ಮುಚ್ಚಳ ಹಾಕಬೇಡಿ. ನನ್ನ ಪ್ರಾರ್ಥನೆ ಇದು. ದೈವಸಹಾಯವಿರಲಿ ನಿಮಗೆ.[೧೫೬]

## ಅಹಿಂಸಕ ಸಾಮ್ಯವಾದದಲ್ಲಿ ನನ್ನ ಶ್ರದ್ಧೆ

**ಪ್ರಶ್ನೆ**—ಸಾಮ್ಯವಾದ ಕುರಿತು ನಿಮ್ಮದೇನು ಅಭಿಮತ? ಅದು ಭಾರತಕ್ಕೆ ಹಿತ ಎಸಗೀತೆನ್ನುವಿರಾ?

**ಉತ್ತರ**—ರಷ್ಯನ್ ಮಾದರಿಯ ಸಾಮ್ಯವಾದ, ಎಂದರೆ ಜನರ ಮೇಲೆ ಹೊರಿಸಿದ ಸಾಮ್ಯವಾದ ಭಾರತಕ್ಕೆ ಹೇಸಿಗೆಯಾದೀತು. ಅಹಿಂಸಕ ಸಾಮ್ಯ ವಾದದಲ್ಲಿ ನನಗೆ ಶ್ರದ್ಧೆ ಇದೆ.

**ಪ್ರಶ್ನೆ**—ರಷ್ಯದ ಸಾಮ್ಯವಾದ ಖಾಸಗಿ ಸೊತ್ತಿಗೆ ವಿರೋಧ. ನಿಮಗೆ ಖಾಸಗಿ ಸೊತ್ತು ಬೇಕೆ ?

**ಉತ್ತರ**—ಹಿಂಸೆಯಿಲ್ಲದೆ ಸಾಮ್ಯವಾದ ಬರುವುದಾದರೆ ಅದಕ್ಕೆ ಸ್ವಾಗತ. ಆಗ ಯಾರಾಗಲಿ ಜನತೆಯ ಪರವಾಗಿ ಜನತೆಗಾಗಿಯಲ್ಲದೆ ಆಸ್ತಿ ಇಟ್ಟುಕೊಳ್ಳರು. ಸಮಷ್ಟಿಹಿತಕ್ಕೆ ಬೇಕಾದಾಗ ರಾಜ್ಯ ಅದನ್ನು ವಹಿಸಿಕೊಂಡೀತು.[೧೫೮]

*  *  *  *

ನನ್ನ ಮನಸ್ಸಿನಲ್ಲಿ ಕೆಲವು ಸರ್ವಮಾನ್ಯಗಳಿವೆ, ನಿಸ್ಸಂಶಯವಾಗಿ ಅವು ನ್ಯಾಯವಾಗಿ ಗಳಿಸಿದಂಥವು ನಿಜ, ಆದರೆ ರಾಷ್ಟ್ರದ ಆತ್ಯಂತಿಕ ಹಿತಕ್ಕೆ ವಿರುದ್ಧವಾಗಿ ಹುಟ್ಟಿಬಂದಿವೆ. ನಿಮಗೆ ತಮಾಷೆಯಾದ ಒಂದು ಉದಾಹರಣೆ ಕೊಡುತ್ತೇನೆ, ಅಪರೂ ಅದು ಸಹಜ, ನಿಜ. ಈ ನವದೆಹಲಿ ಎಂಬ ಐರಾವತ(ಬಿಳಿ ಆನೆ)ವನ್ನು ನೋಡಿ. ಕೋಟಿಗಟ್ಟಲೆ ಅದಕ್ಕಾಗಿ ವೆಚ್ಚವಾಗಿದೆ. ಮುಂದೆ ಬರುವ ಸರಕಾರ ಇದನ್ನು, ಈ ಬಿಳಿ ಆನೆಯನ್ನು ನೋಡಿ ಇದನ್ನೇನಾದರೂ ಪ್ರಯೋಜನಕ್ಕೆ ಹಚ್ಚಬೇಕೆಂದು ನಿಶ್ಚಯಿಸಿತೆನ್ನಿ. ಹಳೆ ದೆಹಲಿಯಲ್ಲಿ ಪ್ಲೇಗೋ ಕಾಲರಾ ರೋಗವೋ ಹಬ್ಬಿದೆ ಎಂದುಕೊಳ್ಳೋಣ. ಬಡಜನರಿಗಾಗಿ ಆಸ್ಪತ್ರೆಗಳು ನಮಗೆ ಬೇಕು. ಏನು ಮಾಡಬೇಕು ನಾವು ? ರಾಷ್ಟ್ರೀಯ ಸರಕಾರ ಆಸ್ಪತ್ರೆ ಇತ್ಯಾದಿ ಕಟ್ಟಬಲ್ಲುದೆ ? ನಾವು ಆ ಕಟ್ಟಡಗಳನ್ನೆಲ್ಲ ವಶಪಡಿಸಿಕೊಂಡು ಪ್ಲೇಗ್‌ಪೀಡಿತ ಜನರನ್ನೆಲ್ಲ ಅಲ್ಲಿ ಹಾಕಿ ಇಟ್ಟೇವು. ಏಕೆಂದರೆ ಆ ಕಟ್ಟಡಗಳು ರಾಷ್ಟ್ರದ ಆತ್ಯಂತಿಕ ಹಿತಕ್ಕೆ ವಿರೋಧವಾದುವು. ಭಾರತದ ಜನಕೋಟಿಯ ಪ್ರತೀಕಗಳಲ್ಲ ಅವು. ಹಣವಂತರ ಪ್ರತೀಕಗಳಾಗಿರಬಹುದು.. .ಆದರೆ ಉಣ್ಣಲು ರೊಟ್ಟಿಯ ತುಣುಕೂ ಇಲ್ಲದೆ, ಮಲಗಲು ಛಾವಣಿಯೂ ಇಲ್ಲದ ಜನರ ಪ್ರತೀಕ ಖಂಡಿತ ಅಲ್ಲ. ರಾಷ್ಟ್ರೀಯ ಸರಕಾರಕ್ಕೆ ಇವು ಅನಾವಶ್ಯಕವೆನಿಸಿದರೆ ಅವನ್ನು ವಶಪಡಿಸಿಕೊಳ್ಳಬಹುದು, ಪರಿಹಾರವನ್ನೂ ಕೊಡದೆ ವಶಪಡಿಸಿಕೊಳ್ಳಬಹುದು ಎಂದೇನು. ಏಕೆಂದರೆ, ಈ ಸರಕಾರ ಪರಿಹಾರ ಕೊಡಬೇಕು ಎಂದರೆ ಅದು ಬೊಮ್ಮನಿಂದ ಕಸಿದು ತಿಮ್ಮನಿಗೆ ಕೊಡಬೇಕು ಅಷ್ಟೆ, ಅದಂತೂ ಅಸಾಧ್ಯ.[೧೫೯]

**ಪ್ರಶ್ನೆ**—ಸಮಾಜವಾದದ ವಿಷಯದಲ್ಲಿ ನಿಮಗೂ ಜವಾಹರಲಾಲರಿಗೂ ಏನಾದರೂ ಭಿನ್ನಾಭಿಪ್ರಾಯ ಇದೆಯೇ?

**ಉತ್ತರ**—ಇದೆ, ಆದರೆ ಅದು ಸ್ವರಭಾರದಲ್ಲಿ, ಒತ್ತಿಹೇಳುವಿಕೆಯಲ್ಲಿ ಮಾತ್ರ ಭೇದ. ಅವರು ಬಹುಶಃ ಫಲಿತಾಂಶ ಕುರಿತು ಒತ್ತಿಹೇಳಿಯಾರು, ನಾನು ಮಾರ್ಗ, ಸಾಧನ ಕುರಿತು ಒತ್ತಿಹೇಳುತ್ತೇನೆ. ಅವರ ಪ್ರಕಾರ, ಬಹುಶಃ ನಾನು ಅಹಿಂಸೆಯ ಮೇಲೆ ಹೆಚ್ಚಿನ ಭಾರ ಹಾಕುವೆ, ಅವರಾದರೋ ಅಹಿಂಸೆಯಲ್ಲಿ ನಂಬಿಕೆ ಇದ್ದರೂ, ಅಹಿಂಸೆಯಿಂದ ಅಶಕ್ಯವಾದರೆ ಇತರ ಮಾರ್ಗಗಳಿಂದಲಾದರೂ ಸಮಾಜವಾದ ಬರಲಿ ಎಂದಾರು. ಹೌದು, ಅಹಿಂಸೆಯ ಮೇಲಣ ನನ್ನ ಒತ್ತಾಯ ಒಂದು ತತ್ತ್ವದ ಆಗ್ರಹ. ಹಿಂಸೆಯಿಂದ ಸ್ವಾತಂತ್ರ್ಯ ಸಿಕ್ಕೇ ಸಿಗುತ್ತದೆ ಎಂಬ ಭರವಸೆ ಬಂದರೂ ನಾನದನ್ನು ತಿರಸ್ಕರಿಸಬಹುದು. ಅದು ನಿಜವಾದ ಸ್ವಾತಂತ್ರ್ಯವಾಗಿರದು.೧೬೦

* * * *

**ಪ್ರಶ್ನೆ**—ಕಾಂಗ್ರೆಸ್ ಸಾಮ್ಯವಾದದ ಕಡೆಗೇ ಒಲಿದುಬರುತ್ತಿಲ್ಲವೇ?

**ಉತ್ತರ**—ಹೌದೇ? ನನಗೇನು ಹಾಗನಿಸುತ್ತಿಲ್ಲ. ಹಾಗೇನಾದರೂ ಆದರೆ, ಅದು ರಷ್ಯದ ಮಾದರಿಯಲ್ಲಿದಿದ್ದರೆ ನನಗೇನೂ ಪರಿವೆ ಇಲ್ಲ. ಕೊನೆಯ ಪರೀಕ್ಷೆಯಲ್ಲಿ ಸಾಮ್ಯವಾದ ಎಂದರೆ ಅರ್ಥವಾದರೂ ಏನು? ವರ್ಗ-ಹೀನ ಸಮಾಜ ಎಂದೇ ಅರ್ಥ— ಪ್ರಯತ್ನಯೋಗ್ಯ ಆದರ್ಶವೇ. ಅದನ್ನು ಸಾಧಿಸಲು ದಂಡ-ಬಲವನ್ನು ಕರೆದಾಗ ಮಾತ್ರ ನಾನು ಆ ದಾರಿ ಬಿಡುತ್ತೇನೆ. ನಾವೆಲ್ಲ ಹುಟ್ಟಿನಿಂದ ಸಮಾನರು, ಇಷ್ಟೆಲ್ಲ ಶತಮಾನ ಕಾಲ ನಾವು ದೇವರ ಇಚ್ಛೆಗೆ ಇದಿರಾಗಿ ಕಾದಿದೇವೆ. ಅಸಮತೆಯ ಭಾವ, ಉಚ್ಚ-ನೀಚ ಭಾವ ಒಂದು ದೋಷವೇ, ಆದರೆ ಕತ್ತಿಹಿರಿದು ಮಾನವಹೃದಯದಿಂದ ದೋಷ ತೊಡೆವುದರಲ್ಲಿ ನನಗೆ ನಂಬಿಕೆ ಇಲ್ಲ. ಮಾನವಹೃದಯ ಅಂಥ ಸಾಧನಕ್ಕೆ ಸಗ್ಗದು.೧೬೧

* * * *

ಪಡುವಲ ಜಗತ್ತಿನ ಸಮಾಜವಾದ-ಸಾಮ್ಯವಾದಗಳು ನಮ್ಮ ಕಲ್ಪನೆಗಳಿಂದ ಮೂಲಭೂತವಾಗಿ ಭಿನ್ನ ಕಲ್ಪನೆಗಳ ಆಧಾರದ ಮೇಲೆ ನಿಂತವು.

ಮಾನವಸ್ವಭಾವದ ಮೂಲಭೂತ ಸ್ವಾರ್ಥಪರತೆಯಲ್ಲಿ ನಂಬಿಕೆ ಅಂಥದೊಂದು ಕಲ್ಪನೆ. ಈ ವಿಚಾರವನ್ನು ನಾ ಒಪ್ಪುವುದಿಲ್ಲ. ಏಕೆಂದರೆ ಮನುಷ್ಯ ತನ್ನ ಆತ್ಮನ ಕರೆಗೆ ಓಗೊಡಬಲ್ಲ, ಮೃಗಸಮಾನ ವಿಕಾರಗಳಿಂದ ಮೇಲೆ ಏಳಬಲ್ಲ. ಆದುದರಿಂದ ಮೃಗಸ್ವಭಾವಕ್ಕೆ ಮಾತ್ರ ಸಲ್ಲುವ, ಮಾನವನ ಅಮರಚೇತನಕ್ಕೆ ಸಲ್ಲದ ಸ್ವಾರ್ಥ–ಹಿಂಸೆಗಳಿಂದ ಮೇಲೆ ಏಳಬಲ್ಲ. ಮನುಷ್ಯನಿಗೂ ಮೃಗಕ್ಕೂ ಇರುವ ಈ ಮೂಲಭೇದ ನನಗೆ ಗೊತ್ತು. ಇದೇ ಹಿಂದೂ ಧರ್ಮದ ಮೂಲ ಕಲ್ಪನೆ, ಅದರ ಹಿಂದೆ, ಆ ಸತ್ಯದ ಶೋಧಕ್ಕಾಗಿ ನಡೆದ ಶತಶತಮಾನಗಳ ತಪಃಪ್ರಭಾವದ ಬಲ ಇದೆ. ಅದಕ್ಕೇ ನಮ್ಮಲ್ಲಿ ಆತ್ಮಲೋಕದ ರಹಸ್ಯವನ್ನು ಅರಿಯಲು ತಮ್ಮ ದೇಹಗಳನ್ನು ತೆತ್ತ ಸಂತರ ಪರಂಪರೆ ಇದೆ, ಪಶ್ಚಿಮ ಜಗತ್ತಿನಂತೆ ಈ ಭೂಮಂಡಲದ ಅತಿದೂರದ, ಅತಿ ಎತ್ತರದ ಪ್ರದೇಶಗಳನ್ನು ಶೋಧಿಸಲು ಜೀವ ತೆತ್ತವರ ಪರಂಪರೆ ನಮ್ಮಲ್ಲಿಲ್ಲ. ಆದುದರಿಂದ ನಮ್ಮ ಸಮಾಜವಾದ–ಸಾಮ್ಯವಾದಗಳು ಅಹಿಂಸೆಯ ಆಧಾರದಮೇಲೆ, ಬಂಡವಾಳ–ಶ್ರಮಶಕ್ತಿ, ಭೂ-ಒಡೆಯ–ಗೇಣಿದಾರರ ನಡುವಣ ಸಾಮರಸ್ಯಪೂರ್ಣ ಸಹಕಾರದ ಮೇಲೆ ನಿಂತವಾಗಿರಬೇಕು.೧೬೨

## ಅಧ್ಯಾಯ – ೧೨

# ಧರ್ಮದರ್ಶಿತ್ವ

### ಧಾರ್ಮಿಕ, ದಾರ್ಶನಿಕ ಆಧಾರ

ಹಿಂದೂ ಧರ್ಮದ ಸಾರ ಏನು ಎಂದು ಕೆಲ ಕಾರ್ಯಕರ್ತರು ಕೇಳಿದಾರೆ. ಇಸ್ಲಾಂನಲ್ಲಿ ಇರುವಂತೆ ನಮ್ಮಲ್ಲಿ ಒಂದು ಸರಳವಾದ 'ಕಲ್ಮಾ' (ಮುಸ್ಲಿಮರ ಪ್ರಾರ್ಥನಾಶ್ಲೋಕ) ಆಗಲಿ, ಬೈಬಲಿನಲ್ಲಿ ಇರುವಂತೆ ಜಾನ್ ೩–೧೬ನೆಯ ವಿಭಾಗವಾಗಲಿ ನಮ್ಮಲ್ಲಿ ಇಲ್ಲ. ನಮ್ಮಲ್ಲಿ ಅತ್ಯಂತ ಉಚ್ಚ ವೇದಾಂತ ಮನೋಭಾವದವರಿಗಾಗಲಿ ಅಥವಾ ಅತ್ಯಂತ ವ್ಯಾವಹಾರಿಕ ಮನೋಭಾವದವರಿಗಾಗಲಿ ಸಮಾಧಾನ ಕೊಡುವಂಥದು ಏನಾದರೂ ಇದೆಯೆ ಎಂದು ಅವರು ಕೇಳುತ್ತಾರೆ. 'ಗಾಯತ್ರಿ' ಆ ಬೇಡಿಕೆಯನ್ನು ಪೂರೈಸುತ್ತದೆ ಎಂದು ಕೆಲವರು ಹೇಳಿದಾರೆ, ಅದಕ್ಕೆ ಪ್ರಬಲ ಕಾರಣವೂ ಇಲ್ಲದಿಲ್ಲ. ಗಾಯತ್ರಿ ಮಂತ್ರದ ಅರ್ಥ ಅರಿತುಕೊಂಡು ನಾನು ಎಷ್ಟೋ ಸಾವಿರ ಸಲ ಜಪ ಮಾಡಿದೇನೆ. ಆದರೂ ಅದು ನನ್ನ ಆಶೋತ್ತರಗಳನ್ನೆಲ್ಲ ಈಡೇರಿಸಲಿಲ್ಲವೆನಿಸುತ್ತದೆ. ಆಮೇಲೆ ನಿಮಗೆಲ್ಲ ತಿಳಿದಿರುವಂತೆ **ಭಗವದ್ಗೀತೆ**ಯನ್ನು ಎತ್ತಿಕೊಂಡು ನಾನು ಎಷ್ಟೋ ವರ್ಷಗಳಿಂದ ಆಣೆ ಮಾಡುತ್ತೇನೆ, ಅದು ನನ್ನ ತೊಡಕುಗಳನ್ನೆಲ್ಲ ನಿವಾರಿಸುತ್ತದೆಂದು ಹೇಳಿದೇನೆ, ಅದು ನನ್ನ **ಕಾಮಧೇನು,** ಸಂಶಯ, ಕಷ್ಟ ಕಾಡಿದ ನೂರಾರು ಸನ್ನಿವೇಶಗಳಲ್ಲಿ ಅದು ನನ್ನ ದಿಗ್ದರ್ಶಿಯಾಗಿದೆ, ಭಾಗ್ಯದ ಬಾಗಿಲಾಗಿದೆ. ಅದು ನನ್ನ ಕೈಬಿಟ್ಟ ಒಂದು ಸಂದರ್ಭವೂ ನನಗೆ ನೆನಪಿಲ್ಲ. ಆದರೆ ಆ ಕಾಮಧೇನು ತನ್ನ ಕೆಚ್ಚಲಿನಿಂದ ಅಮೃತ ದುಗ್ಧಧಾರೆ ಹರಿಸಬೇಕಾದರೆ ನಮಗೆ ಪ್ರಾರ್ಥನಾಪರ ಅಧ್ಯಯನ ಬೇಕು.

ಹಿಂದೂ ಧರ್ಮದ ಸಾರಸರ್ವಸ್ವವನ್ನೂ ಒಳಗೊಂಡ ಒಂದು **ಮಂತ್ರ**ವನ್ನು ನಾ ಕಂಡುಹಿಡಿದಿದೇನೆ. ನಿಮ್ಮಲ್ಲಿ ಅನೇಕರು ಈಶೋಪನಿಷತ್ತನ್ನು ಬಲ್ಲಿರಿ. ಎಷ್ಟೋ ವರ್ಷಗಳ ಹಿಂದೆ ನಾನು ಅದನ್ನು ಅನುವಾದ, ವ್ಯಾಖ್ಯಾನ ಸಹಿತ ಓದಿದೆ. ಯರವಡಾ ಸೆರೆಮನೆಯಲ್ಲಿ ಅದನ್ನು ಕಂಠಪಾಠಮಾಡಿದೆ.

ಆದರೆ ಈಚಿನ ಕೆಲತಿಂಗಳಲ್ಲಿ ಅದು ಸೆರೆಹಿಡಿದಂತೆ ಆಗ ಅದು ನನ್ನನ್ನು ಸೆರೆ ಹಿಡಿಯಲಿಲ್ಲ. ಇದ್ದಕ್ಕಿದ್ದಂತೆ ಎಲ್ಲ ಉಪನಿಷತ್ತುಗಳೂ ಧರ್ಮಗ್ರಂಥಗಳೂ ಸುಟ್ಟು ಬೂದಿಯಾಗಿಬಿಟ್ಟರೂ ಸಹ ಈಶೋಪನಿಷತ್ತಿನ ಮೊದಲ ಮಂತ್ರ ಹಿಂದೂಗಳ ಸ್ಮೃತಿಯಲ್ಲಿ ಅಚ್ಚಳಿಯದೆ ಉಳಿದುದಾದರೆ ಹಿಂದೂ ಧರ್ಮ ಎಂದೆಂದಿಗೂ ಉಳಿದೀತು—ಎಂಬ ಅಂತಿಮ ನಿರ್ಧಾರಕ್ಕೆ ನಾನು ಈಗ ಬಂದಿದೇನೆ.

ಈ ಮಂತ್ರದಲ್ಲಿ ನಾಲ್ಕು ಭಾಗ : ಮೊದಲನೆಯದು—"**ಈಶಾವಾಸ್ಯ-ಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್.**" ನಾವು ಈ ವಿಶ್ವದಲ್ಲಿ ನೋಡುವುದೆಲ್ಲವೂ ಈಶ್ವರನಿಂದ ಆವರಿಸಲ್ಪಟ್ಟಿದೆ — ಎಂದು ಇದರ ಅರ್ಥ. ಬಳಿಕ ಎರಡು-ಮೂರನೆಯ ಭಾಗಗಳು : "**ತೇನ ತ್ಯಕ್ತೇನ ಭುಂಜೀಥಾಃ.**" ಅವನ್ನು ಇಬ್ಭಾಗವಮಾಡಿ ಅವನ್ನು ಹೀಗೆ ಭಾಷಾಂತರಿಸುತ್ತೇನೆ :

"ನಮ್ಮ ಪ್ರಭು, ಈಶ್ವರ ಜಗತ್ತಿನಲ್ಲಿ ಇರುವುದನ್ನೆಲ್ಲ ಆವರಿಸಿದಾನೆ. ಆದುದರಿಂದ ಎಲ್ಲವನ್ನೂ ಪರಿತ್ಯಜಿಸು, ಅವನಿಗೆ ಒಪ್ಪಿಸು, ನಿನ್ನ ಪಾಲಿಗೆ ಬಂದುದನ್ನು ಬಳಿಕ ಭೋಗಿಸು. ಪರರ ಒಡವೆಗೆ ಎಂದೂ ಆಸೆಪಡಬೇಡ." ತ್ಯಜಿಸು, ಬಳಿಕ ಭೋಗಿಸು. ಇನ್ನೂ ಒಂದು ಅರ್ಥವಿದೆ, ಅದು : ಅವನು ಇತ್ತುದನ್ನು ಭುಜಿಸು. ಹಾಗೂ ಅದನ್ನು ಎರಡು ಭಾಗ ಮಾಡಬಹುದು. ಆ ಬಳಿಕ ಬರುವುದೇ ಕಡೆಯ, ಅತಿ ಮುಖ್ಯ ಭಾಗ : "**ಮಾ ಗೃಧಃ ಕಸ್ಯ ಸ್ವಿದ್ಧನಂ.**" ಯಾರೊಬ್ಬರ ಸೊತ್ತಿಗಾಗಲಿ ಸಂಪತ್ತಿಗಾಗಲಿ ಆಸೆಪಡ ಬೇಡ — ಎಂದು ಆದರ ಅರ್ಥ. ಈ ಪುರಾತನ ಉಪನಿಷತ್ತಿನ ಉಳಿದೆಲ್ಲ ಮಂತ್ರಗಳೂ ಈ ಮೊದಲ ಮಂತ್ರಕ್ಕೆ ವ್ಯಾಖ್ಯಾನ, ಆದರ ಪೂರ್ಣ ಅರ್ಥ ವಿವರಿಸುವ ಪ್ರಯತ್ನ.

ಈ ಮಂತ್ರವನ್ನು ಗೀತೆಯ ಬೆಳಕಿನಲ್ಲಿ ಓದಿದಾಗ ಅಥವಾ ಗೀತೆಯನ್ನು ಈ ಮಂತ್ರದ ಬೆಳಕಿನಲ್ಲಿ ಓದಿದಾಗ ಗೀತೆ ಈ ಮಂತ್ರದ ವ್ಯಾಖ್ಯಾನವಂತೆ ಎಂದೆನಿಸಿತು. ಸೋಷಲಿಸ್ಟರ ಹಾಗೂ ಕಮ್ಯುನಿಸ್ಟರ, ವೇದಾಂತಿಯ ಹಾಗೂ ಅರ್ಥಶಾಸ್ತ್ರಿಯ ಬಯಕೆಗಳನ್ನೆಲ್ಲ ಅದು ಈಡೇರಿಸುವಂತೆ ನನಗೆ ತೋರುತ್ತದೆ. ಹಿಂದೂ ಧರ್ಮಕ್ಕೆ ಸೇರದವರ ಬಯಕೆಗಳನ್ನೂ ಅದು ಈಡೇರಿಸೀತು ಎಂದು ಅವರಿಗೂ ಹೇಳುವ ಸಾಹಸವನ್ನೂ ನಾ ಮಾಡುತ್ತೇನೆ. ಅದು ನಿಜವಾದ

ಪಕ್ಷದಲ್ಲಿ—ನಿಜವೆಂದೇ ನನ್ನ ಎಣಿಕೆ—ಈ ಮಂತ್ರಕ್ಕೆ ವಿರುದ್ಧವಾದುದು ಅಥವಾ ಅಸಂಗತವಾದುದು ಯಾವುದನ್ನೂ ನೀವು ಹಿಂದೂ ಧರ್ಮದಲ್ಲಿ ಪರಿಗ್ರಹಿಸಬೇಕಾಗಿಲ್ಲ ಒಬ್ಬನೇ ಸೃಷ್ಟಿಕರ್ತ, ಈಶ್ವರ, ಒಡೆಯ ಈ ಜಗತ್ತನ್ನೆಲ್ಲ ಆವರಿಸಿದಾನೆ ಎಂಬುದಕ್ಕಿಂತ ಹೆಚ್ಚಿನದಾವುದನ್ನು ಹಾದಿಹೋಕ ಮನುಷ್ಯ ಕಲಿಯಬಯಸಿಯಾನು ?

ಈ ಮಂತ್ರದ ಕಡೆಯ ಮೂರು ಭಾಗಗಳು ಮೊದಲನೆಯ ಭಾಗದಿಂದಲೇ ಪ್ರತ್ಯಕ್ಷವಾಗಿ ನಿಷ್ಪನ್ನವಾಗುವಂಥವು. ದೇವರು ತನ್ನ ಸೃಷ್ಟಿಯನ್ನೆಲ್ಲ ಆವರಿಸಿಕೊಂಡಿದಾನೆಂದು ನೀವು ನಂಬುವುದಾದರೆ ಅವನು ಕೊಡದುದನ್ನು ನೀವು ಭೋಗಿಸಲಾರಿರಿ ಎಂದೇ ನಂಬಬೇಕಾದೀತು ಆತ ಅಸಂಖ್ಯ ಮಕ್ಕಳ ಸೃಷ್ಟಿಕರ್ತನೆಂದು ಕಂಡುಕೊಂಡಮೇಲೆ ಒಬ್ಬ ಇನ್ನೊಬ್ಬನ ಸೊತ್ತಿಗೆ ಆಸೆಪಡುವಂತೆಯೇ ಇಲ್ಲ. ಅವನ ಅಸಂಖ್ಯ ಸೃಷ್ಟಿಗಳಲ್ಲಿ ನೀವೂ ಒಬ್ಬರೆಂದು ಭಾವಿಸುವುದಾದರೆ ನಿಮ್ಮದೆಲ್ಲವನ್ನೂ ಅವನ ಪದತಲದಲ್ಲಿ ಅರ್ಪಿಸಬೇಕಾದುದು ನಿಮ್ಮ ಧರ್ಮ. ಸರ್ವಸ್ವಪರಿತ್ಯಾಗದ ಈ ಕೃತಿ ಕೇವಲ ಭೌತತ್ಯಾಗವಲ್ಲ, ಅದೊಂದು ದ್ವಿತೀಯ ಅಥವಾ ಪುನರ್ಜನ್ಮ. ಅದೊಂದು ಬುದ್ಧಿಪೂರ್ವಕ ಕ್ರಿಯೆ, ತಿಳಿಯದೆ ಮಾಡಿದ ಕೆಲಸವಲ್ಲ. ಆದುದರಿಂದ ಅದೊಂದು ಪುನರುಜ್ಜೀವನ ಶರೀರ ಧಾರಣೆ ಮಾಡಿರುವುದರಿಂದ ಆತ ಉಣಬೇಕು, ಉಡಬೇಕು, ಆದಕಾರಣ ತನಗೆ ಬೇಕಾದುದನ್ನೆಲ್ಲ ಬೇಡಬೇಕು. ಪರಿತ್ಯಾಗಕ್ಕೆ ಸಹಜ ಫಲವಾಗಿ ಅವನು ಅದನ್ನು ಪಡೆದಾನು.

ಇದು ನಾಲದೋ ಎಂಬಂತೆ ಮಂತ್ರ ಈ ಅದ್ಭುತ ವಿಚಾರದೊಂದಿಗೆ ಉಪಸಂಹಾರಗೊಳ್ಳುತ್ತದೆ: ಯಾರೊಬ್ಬರ ಸೊತ್ತನ್ನೂ ಬಯಸಬೇಡ. ಈ ನಿಯಮಗಳನ್ನು ಆಚರಿಸಿದ ಕ್ಷಣವೇ ಸಮಸ್ತ ಜೀವರಾಶಿಯೊಡನೆಯೂ ಶಾಂತಿಯುತವಾಗಿ ಬಾಳುವ ವಿವೇಕಶಾಲಿ ಸದ್ಗೃಹಸ್ಥರಾಗುತ್ತೀರಿ ನೀವು. ಈ ಲೋಕ ಪರಲೋಕಗಳೆರಡರಲ್ಲೂ ಪರಮಪುರುಷಾರ್ಥವನ್ನು ಅದು ಈಡೇರಿಸಿಕೊಡುತ್ತದೆ. ಹೌದು, ದೇವರಲ್ಲಿ, ಅವನ ಪರಮಪ್ರಭುತ್ವದಲ್ಲಿ ನಂಬಿಕೆ ಇಲ್ಲದವನ ಪುರುಷಾರ್ಥವನ್ನು ತೃಪ್ತಿಪಡಿಸದು, ನಿಸ್ಸಂಶಯ. ಎಲ್ಲ ರಾಜಮಹಾರಾಜರೂ ಈಶಸೇವಕರೆಂದು ಕರೆಯುಕೊಂಡುದಾದರೆ ತಮ್ಮನ್ನು ಸರಿಯಾಗಿ ವರ್ಣಿಸಿಕೊಂಡಂತಾದೀತು, ಆದರೆ ಜನಸೇವಕರಾದ ಹೊರತು ಅವರು ಈಶಸೇವಕ

ರಾಗಲಾರರು, ಜಮೀನುದಾರರು ತಾವು ಧರ್ಮದರ್ಶಿಗಳು ಎಂದು ಭಾವಿಸಿ, ನಾನು ಇಲ್ಲಿ ವಿವರಿಸಿರುವ ಪರಿತ್ಯಾಗದ ಕ್ರಿಯೆಯನ್ನು ಆಚರಿಸುವುದಾದರೆ ಈ ಜಗತ್ತು ನಿಜಕ್ಕೂ ದಿವ್ಯ ಪ್ರಪಂಚವಾದೀತು.೧೬೩

## ಧರ್ಮದರ್ಶಿತ್ವದ ತತ್ತ್ವ

"ಧರ್ಮದರ್ಶಿತ್ವದ ತತ್ತ್ವ ನನ್ನ ಬುದ್ಧಿಗೇಕೋ ನಿಲುಕದಾಗಿದೆ. ಸ್ವಲ್ಪ ಸಂಗ್ರಹವಾಗಿ ವಿವರಿಸುವಿರಾ ?"—ಎಂದು ಕೇಳಿದರು ಸದಸ್ಯರೊಬ್ಬರು.

**ಗಾಂಧೀಜೀ**—ಕೆಲನಿಮಿಷಗಳಲ್ಲಿ ಹೇಗೆ ವಿವರಿಸಬಲ್ಲೆ? ಕೆಲನಿಮಿಷ ಗಳಲ್ಲಿ ವಿವರಿಸಲಾರೆನಾದರೆ ಕೆಲವು ಗಂಟೆಗಳಲ್ಲೂ ವಿವರಿಸಲಾರೆ. ಕುಲಧನ ವಾಗಿಯೋ ವ್ಯಾಪಾರ ಉದ್ಯೋಗಗಳ ದೆಸೆಯಿಂದಲೋ ನನ್ನಲ್ಲಿ ಸಾಕಷ್ಟು ಪ್ರಮಾಣದ ಸಂಪತ್ತು ಸೇರಿದೆಯೆನ್ನಿ. ಆ ಎಲ್ಲ ಸಂಪತ್ತೂ ನನಗೆ ಸೇರಿದ್ದಲ್ಲ ಎಂದು ನಾ ತಿಳಿಯಬೇಕು. ಕೋಟಿಗಟ್ಟಲೆ ಜನರು ಅನುಭವಿಸುತ್ತಿರುವುದ ಕ್ಕಿಂತ ಹೆಚ್ಚಿಲ್ಲದ ಗೌರವಯುತ ಜೀವನದ ಹಕ್ಕು ಮಾತ್ರ ನನಗೆ ಉಂಟು. ನನ್ನ ಸಂಪತ್ತಿನ ಉಳಿದ ಭಾಗವೆಲ್ಲ ಸಮಾಜಕ್ಕೆ ಸೇರಿದ್ದು, ಅದರ ಕಲ್ಯಾಣ ಕ್ಕಾಗಿಯೇ ಉಪಯೋಗಿಸಲ್ಪಡಬೇಕು. ಜಮೀನುದಾರರು ಹಾಗೂ ದೇಶೀ ಅರಸರ ಆಸ್ತಿಪಾಸ್ತಿಗಳ ಬಗೆಗೆ ದೇಶದ ಎದುರು ಸಮಾಜವಾದಿಗಳು ಇಟ್ಟ ತತ್ತ್ವದ ಸಂದರ್ಭದಲ್ಲಿ ನಾನು ಈ ತತ್ತ್ವವನ್ನು ಪ್ರತಿಪಾದಿಸಿದೆ. ಅವರಂತೂ ಈ ವಿಶಿಷ್ಟ ಹಕ್ಕುಗಳುಳ್ಳ ವರ್ಗಗಳನ್ನು ತೊಡೆದಾರು. ನಾನಾದರೋ ಬಲ್ಲಿದರು ತಮ್ಮ ಲೋಭ ಹಾಗೂ ಆಸ್ತಿಭಾವನೆಯನ್ನು ಮೀರಿ ಬೆಳೆಯಲಿ, ತಮ್ಮಲ್ಲಿ ಸಂಪತ್ತಿದ್ದರೂ ದುಡಿದು ಅನ್ನ ಗಳಿಸುವವರ ಮಟ್ಟಕ್ಕೆ ಬರಲಿ ಎಂದು ಆಶಿಸುತ್ತೇನೆ. ದುಡಿಮೆಗಾರ ತನ್ನ ದುಡಿಯುವ ಶಕ್ತಿಯ ಒಡೆಯನಾಗಿರುವುದ ಕ್ಕಿಂತ ಕಡಿಮೆ ಪಾಲು ಶ್ರೀಮಂತ ತನ್ನ ಐಶ್ವರ್ಯದ ಒಡೆಯ ಎಂಬುದನ್ನು ದುಡಿಮೆಗಾರ ಮನಗಾಣಬೇಕು.

"ಈ ವ್ಯಾಖ್ಯೆಯಂತೆ ಎಷ್ಟು ಮಂದಿ ನಿಜವಾದ ಧರ್ಮದರ್ಶಿಗಳಾದಾರು ಎಂಬುದು ಬೇರೆ ಮಾತು. ತತ್ತ್ವ ಸರಿಯೆಂದಾದರೆ ಅನೇಕರು ಅದನ್ನು ಆಚರಿಸಲಿ, ಒಬ್ಬನೇ ಒಬ್ಬ ಆಚರಿಸಲಿ ಅದು ಅಪ್ರಕೃತ. ಇದು ಸಂಕಲ್ಪ

ಶಕ್ತಿಯ ಪ್ರಶ್ನೆ. ಗೆಲ್ಲುವಿರೋ ಸೋಲುವಿರೋ, ಅಹಿಂಸೆಯನ್ನು ಅಂಗೀಕರಿಸುವ ಪಕ್ಷಕ್ಕೆ ಅದರಂತೆ ಬದುಕಲು ನೀವು ಹೆಣಗಲೇಬೇಕು. ಬುದ್ಧಿಗೆ ನಿಲುಕದಂಥದು ಈ ತತ್ತ್ವದಲ್ಲಿ ಯಾವುದೂ ಇಲ್ಲ, ಆಚರಣೆಗೆ ಕಷ್ಟ ಎಂದು ನೀವು ಹೇಳಬಹುದು, ಅಷ್ಟೆ."೧೬೪

* * * *

"ಶ್ರೀಮಂತರನ್ನು ಧರ್ಮದರ್ಶಿಗಳಾಗಿ ಎಂದು ಕೇಳಿದೀರಿ. ಎಂದರೆ ಅವರು ತಮ್ಮ ಸೊತ್ತಿನ ಖಾಸಗಿ ಒಡೆತನ ಬಿಟ್ಟುಕೊಟ್ಟು ಶಾಸನಬದ್ಧವಾದ ಹಾಗೂ ಜನತಾಂತ್ರಿಕವಾಗಿ ನಡೆಸುವಂಥ ಟ್ರಸ್ಟ್ (ಧರ್ಮದರ್ಶಿತ್ವ ಸಂಸ್ಥೆ) ನಿರ್ಮಿಸಬೇಕೆಂದು ಅರ್ಥವೇ? ಈಗಿನ ಧರ್ಮದರ್ಶಿ ತೀರಿಕೊಂಡ ಬಳಿಕ ಅವನ ವಾರಸುದಾರನ ತೀರ್ಮಾನ ಹೇಗೆ ಆದೀತು?"

ಎಲ್ಲವೂ ದೇವರಿಗೆ ಸೇರಿದುದು, ದೇವರಿಂದ ಆದುದು ಎಂಬ ತತ್ತ್ವಕ್ಕೆ ಅನೇಕ ವರ್ಷಗಳ ಹಿಂದೆಯೇ ತಾವು ಬದ್ಧರಾದುದಾಗಿ ಗಾಂಧೀಜೀ ಉತ್ತರಿಸಿದರು. ಆದುದರಿಂದ ಆ ತತ್ತ್ವ ಎಲ್ಲ ಜನರಿಗಾಗಿಯೇ ಹೊರತು ಕೇವಲ ಒಬ್ಬ ವ್ಯಕ್ತಿಗಾಗಿ ಅಲ್ಲ. ತನ್ನ ಪ್ರಮಾಣಕ್ಕಿಂತ ಹೆಚ್ಚಿನ ಸಂಪತ್ತುಳ್ಳವನಾದರೆ ವ್ಯಕ್ತಿ ದೇವರ ಜನರಿಗಾಗಿ ಆ ಪ್ರಮಾಣದ ಸಂಪತ್ತಿಗೆ ತಾನು ಧರ್ಮದರ್ಶಿ ಆಗಿರಬೇಕು—ಎಂದೂ ಹೇಳಿದರು.

ಸರ್ವಶಕ್ತನಾದ ಭಗವಂತ ಕೂಡಿಡಬೇಕಿಲ್ಲ. ದಿನದಿನವೂ ಆತ ಸೃಷ್ಟಿ ಮಾಡುತ್ತಾನೆ. ಆದುದರಿಂದ ಜನರೂ ಅಹನ್ಯಹನಿ ಕಾಲಕ್ಷೇಪ ಮಾಡಬೇಕು, ಕೂಡಿಡತಕ್ಕುದಲ್ಲ. ಜನ ಇದನ್ನು ಸಾರ್ವತ್ರಿಕವಾಗಿ ಅರಿತುಕೊಂಡು ಬಳಕೆಗೆ ತಂದರೆ ಅದೇ ಶಾಸನಬದ್ಧ ವ್ಯವಸ್ಥೆಯಾದೀತು. ಜಗತ್ತಿಗೆ ಇದೇ ಭಾರತದ ಕಾಣಿಕೆಯಾಗಬೇಕೆಂದೂ ನನ್ನ ಆಸೆ. ಆಗ ಶೋಷಣೆಯೇ ಇರದು, ಆಸ್ಟ್ರೇಲಿಯಾ ಹಾಗೂ ಇತರ ದೇಶಗಳಲ್ಲಿರುವಂತೆ ಬಿಳಿಯರಿಗೂ ಅವರ ಭವಿಷ್ಯತ್ಸಂತಾನಕ್ಕೂ ಕಾದಿರಿಸಿದ ಸ್ಥಳಗಳೂ ಇರವು. ಈ ಭೇದಗಳಲ್ಲೇ ಕಳೆದ ಎರಡು ಮಹಾಯುದ್ಧಗಳಿಗಿಂತ ಘೋರತರವಾದ ಯುದ್ಧದ ಬೀಜ ಅಡಕವಾಗಿದೆ. ವಾರಸುದಾರನನ್ನು ಶಾಸನಸಮ್ಮತನಾಗಿ ನೇಮಿಸುವ ಹಕ್ಕು ಧರ್ಮದರ್ಶಿಗೇ ಇದ್ದೀತು—ಎಂದೂ ಹೇಳಿದರು ಗಾಂಧೀಜೀ ೧೬೫

* * * *

ಅನೇಕ ಮಂದಿ ಬಂಡವಾಳಗಾರರು ನನ್ನೊಡನೆ ಸ್ನೇಹದಿಂದಿದ್ದಾರೆ, ನನ್ನನ್ನು ಕಂಡು ಅಂಜುವುದಿಲ್ಲ—ಎಂದು ಹೇಳಿಕೊಳ್ಳಲು ನನಗೇನೂ ನಾಚಿಕೆ ಇಲ್ಲ. ಅತ್ಯಂತ ಅಗ್ರಗಾಮಿ ಸಮಾಜವಾದಿ ಅಥವಾ ಸಾಮ್ಯವಾದಿಯಷ್ಟು—ಪೂರಾ ಇಲ್ಲದಿದ್ದರೂ — ಹೆಚ್ಚುಕಡಿಮೆ ಅಷ್ಟೇ ಬಂಡವಾಳವಾದವನ್ನು ಕೊನೆಗಾಣಿಸಬಯಸುವೆನೆಂದು ಅವರಿಗೆ ಗೊತ್ತು. ಆದರೆ ನಮ್ಮ ಮಾರ್ಗಗಳು ಭಿನ್ನ, ಭಾಷೆ ಭಿನ್ನ. ನನ್ನ 'ಧರ್ಮದರ್ಶಿತ್ವ' ಸಿದ್ಧಾಂತ ತಾತ್ಕಾಲಿಕ ಪರಿಹಾರೋಪಾಯವಲ್ಲ, ವೇಷಧಾರಿತನವಂತೂ ಖಂಡಿತ ಅಲ್ಲ. ಉಳಿದೆಲ್ಲ ಸಿದ್ಧಾಂತಗಳು ಹೋದ ಬಳಿಕವೂ ಇದು ಉಳಿದೀತು, ನನಗೆ ಭರವಸೆ ಇದೆ. ದರ್ಶನದ, ಧರ್ಮದ ಸಮ್ಮತಿ ಅದಕ್ಕಿದೆ. ಸಂಪತ್ತಿನ ಒಡೆಯರು ಆ ಸಿದ್ಧಾಂತದಂತೆ ನಡೆದಿಲ್ಲವೆಂಬುದು ಸಿದ್ಧಾಂತವನ್ನೇ ಸುಳ್ಳುಮಾಡದು; ಸಿರಿವಂತರ ದೌರ್ಬಲ್ಯವನ್ನಷ್ಟೇ ಅದು ತೋರಿಸುತ್ತದೆ. ಬೇರಾವ ತತ್ತ್ವವೂ ಅಹಿಂಸೆಗೆ ಅಳವಡದು. ಅಹಿಂಸಾಮಾರ್ಗದಲ್ಲಿ ಅನ್ಯಾಯಕಾರಿ ತನ್ನ ಅನ್ಯಾಯವನ್ನು ಸರಿಪಡಿಸದಿದ್ದರೆ ತನ್ನ ಅಂತ್ಯಕ್ಕೆ ತಾನೇ ಕಾರಣನಾಗುತ್ತಾನೆ. ಇಲ್ಲವೆ ಅಹಿಂಸಾತ್ಮಕ ಅಸಹಕಾರದಿಂದ ಅವನ ದೋಷವನ್ನು ಅವನು ಕಂಡುಕೊಳ್ಳುವಂತೆ ಮಾಡಲಾಗುವುದು, ಇಲ್ಲವೆ ಅವನು ಪೂರಾ ದೂರೀಕರಿಸಲ್ಪಟ್ಟಾನು. ಆದುದರಿಂದ ವಿವೇಕಶಾಲಿ ಸೋಷಲಿಸ್ಟರೂ, ವಾಮಪಕ್ಷೀಯರೂ ಕೃತಿಯ ಕಾಲ ಒದಗಿಬಂದಾಗ ನನಗೆ ಅಡ್ಡಿಯಾಗರೆಂದು ಆಶಿಸುತ್ತೇನೆ. ನನ್ನ ಮಾರ್ಗ ಫಲಿಸಿದರೆ ದರಿದ್ರರೂ, ಪದದಲಿತರೂ ಸುಖಿಗಳಾದಾರೆಂದು ಅವರು ಬಲ್ಲರು. ತಮ್ಮ ಕ್ರಮದಂತೆ ಕೃತಿಗಿಳಿಯಲು ಅವರು ಸಿದ್ಧರಿಲ್ಲ; ನನ್ನ ಪ್ರಾಮಾಣಿಕತೆ ಮತ್ತು ದೇಶಪ್ರೇಮಗಳನ್ನು ನಂಬುವತನಕ ನನ್ನನ್ನು ಅಡ್ಡಿಪಡಿಸದಿರುವಷ್ಟು ದೇಶಾಭಿಮಾನ ಅವರಲ್ಲಿದೆ.೧೬೬

* * * *

**ಪ್ರಶ್ನೆ**—ಹಿಂಸೆಯ ಮೂಲಕವೇ ಸಾಧಿಸಬಹುದಾದುದನ್ನು ಅಹಿಂಸಾ ಮಾರ್ಗದಿಂದ ರಕ್ಷಿಸಿಕೊಳ್ಳಬಹುದೇ, ಸಾಧ್ಯವೇ?

**ಉತ್ತರ**—ಹಿಂಸೆಯಿಂದ ಸಾಧಿಸಿದ್ದನ್ನು ಅಹಿಂಸೆಯಿಂದ ರಕ್ಷಿಸಿಕೊಳ್ಳಲು ಅಸಾಧ್ಯವಷ್ಟೇ ಅಲ್ಲ, ದುರಾರ್ಜಿತ ಲಾಭವನ್ನು ಬಿಡಬೇಕೆಂದೂ ಅಹಿಂಸೆ ಹೇಳುತ್ತದೆ.

**ಪ್ರಶ್ನೆ**—ಬಹಿರಂಗವಾಗಿಯೋ ರಹಸ್ಯವಾಗಿಯೋ ಹಿಂಸೆಯಿಲ್ಲದೆ ಬಂಡವಾಳದ ಸಂಗ್ರಹ ಸಾಧ್ಯವೇ ?

**ಉತ್ತರ**—ಹಿಂಸಾತ್ಮಕ ಮಾರ್ಗಗಳಿಂದಲ್ಲದೆ ಅಂಥ ಸಂಗ್ರಹ ಬಿಡಿ ಬಿಡಿ ವ್ಯಕ್ತಿಗಳಿಂದ ಸಾಧ್ಯವಿಲ್ಲ, ಆದರೆ ಅಹಿಂಸಾತ್ಮಕ ಸಮಾಜದಲ್ಲಿ ರಾಜ್ಯದ ಕೈಲಿ ಬಂಡವಾಳಸಂಗ್ರಹ ಅಹಿಂಸಾತ್ಮಕವಾಗಿ ಸಾಧ್ಯವಷ್ಟೇ ಅಲ್ಲ, ಅಪೇಕ್ಷಣೀಯ ಮತ್ತು ಅನಿವಾರ್ಯ.

**ಪ್ರಶ್ನೆ**—ಭೌತ ಅಥವಾ ನೀತಿಯ ಸಂಪತ್ತನ್ನು ಸಮಾಜದ ಇತರ ಸದಸ್ಯರ ಸಹಾಯ-ಸಹಕಾರಗಳಿಂದ ಯಾವನೇ ಆಗಲಿ ಗಳಿಸಬೇಕು. ಅವನ್ನು ಮುಖ್ಯವಾಗಿ ತನ್ನ ಸ್ವಂತ ಲಾಭಕ್ಕಾಗಿಯೇ ಅದರಲ್ಲಿ ಎಷ್ಟನ್ನಾಗಲಿ ಬಳಸಿಕೊಳ್ಳಲು ನೈತಿಕ ಅಧಿಕಾರವಿದೆಯೇ ?

**ಉತ್ತರ**—ಇಲ್ಲ, ನೈತಿಕ ಅಧಿಕಾರವಿಲ್ಲ ಅವನಿಗೆ.

**ಪ್ರಶ್ನೆ**—ಧರ್ಮದರ್ಶಿಯ ವಾರಸುದಾರನನ್ನು ನಿರ್ಣಯಿಸುವುದು ಹೇಗೆ? ಹೆಸರನ್ನು ಸೂಚಿಸುವ ಅಧಿಕಾರ ಅವನಿಗಿದ್ದು, ಅದನ್ನು ಅಂತಿಮವಾಗಿ ನಿರ್ಧರಿಸುವ ಹಕ್ಕನ್ನು ಪ್ರಭುತ್ವದ ಕೈಲಿ ಇಡಬೇಕೇ ?

**ಉತ್ತರ**—ಮೊಟ್ಟಮೊದಲಿನ ಧರ್ಮದರ್ಶಿಯಾದ ಮೊದಲಿನ ಒಡೆಯ ವಾರಸುದಾರನನ್ನು ಆರಿಸಲು ಅವಕಾಶ ಕೊಡಬೇಕು, ಆ ಆಯ್ಕೆಯನ್ನು ದೃಢಪಡಿಸುವುದು ರಾಜ್ಯದ ಕೈಲಿರಬೇಕು. ಅಂಥ ಏರ್ಪಾಟು ರಾಜ್ಯದ ಮೇಲೂ ಆ ವ್ಯಕ್ತಿಯ ಮೇಲೂ ಹತೋಟಿ ಇರುವಂತೆ ಮಾಡುತ್ತದೆ.

**ಪ್ರಶ್ನೆ**—ಹೀಗೆ ಖಾಸಗಿ ಸೊತ್ತು ಧರ್ಮದರ್ಶಿತ್ವ ಸಿದ್ಧಾಂತದ ಅನ್ವಯದ ಪ್ರಕಾರ ಸಾರ್ವಜನಿಕ ಸೊತ್ತಾದಾಗ ಒಡೆತನ, ಹಿಂಸಾಸಾಧನವಾದ ರಾಜ್ಯಶಕ್ತಿಯ ಬಳಿ ಇದ್ದೀತೇ ? ಅಥವಾ ಗ್ರಾಮಸಮುದಾಯಗಳು ಅಥವಾ ಪೌರಸಭೆಗಳೆ ಮುಂತಾದ ರಾಜ್ಯಶಕ್ತಿಯಿಂದಾದ ಶಾಸನಗಳಿಂದ ಅಂತಿಮ ಅಧಿಕಾರ ಪಡೆಯುವ ಜನರ ಸ್ವ-ಇಚ್ಛೆಯಿಂದ ರಚಿತವಾದ ಸಂಸ್ಥೆಗಳಲ್ಲಿ ಇದ್ದೀತೇ ?

**ಉತ್ತರ**—ಈ ಪ್ರಶ್ನೆಯಲ್ಲಿ ಸ್ವಲ್ಪ ವಿಚಾರಗೊಂದಲವಿದೆ. ಈ ಪರಿವರ್ತಿತ ಪರಿಸ್ಥಿತಿಯಲ್ಲಿ ಶಾಸನಬದ್ಧ ಒಡೆತನ ಧರ್ಮದರ್ಶಿಯ ಬಳಿಯೇ ಇರುತ್ತದೆ, ರಾಜ್ಯದ ಬಳಿಯಲ್ಲ. ಮುಟ್ಟುಗೋಲು ಹಾಕಿಕೊಳ್ಳುವುದನ್ನು

ತಡೆಯುವುದಕ್ಕಾಗಿಯೇ ಮೂಲ ಒಡೆಯನ ಸಾಮರ್ಥ್ಯವನ್ನು ಅವನ ಹಕ್ಕಿನಂತೆಯೇ ಉಳಿಸಿಕೊಳ್ಳುವಂಥ ಧರ್ಮದರ್ಶಿತ್ವಸಿದ್ಧಾಂತ ಬಂದುದು. ಅಲ್ಲದೆ ರಾಜ್ಯಶಕ್ತಿ ಯಾವಾಗಲೂ ಹಿಂಸೆಯ ಆಧಾರದ ಮೇಲೆಯೇ ನಿರ್ಮಿತವಾಗಿರಬೇಕಾದುದೂ ಇಲ್ಲ. ತತ್ತ್ವಶಃ ಹಾಗಿರಬಹುದು ಅದು, ಆದರೆ ಆ ತತ್ತ್ವದ ಆಚರಣೆಯಲ್ಲಿ ರಾಜ್ಯ ಬಹುಪಾಲು ಅಹಿಂಸೆಯನ್ನೇ ಆಧಾರವಾಗಿ ಅವಲಂಬಿಸಿ ಇರಬಹುದು.೧೬೭

*　　　*　　　*　　　*

**ಪ್ರಶ್ನೆ**—ಪ್ರೇಮ ಅಥವಾ ಅಹಿಂಸೆ, ಸೊತ್ತು ಅಥವಾ ಯಾವುದೇ ರೂಪದ ಶೋಷಣೆಯೊಂದಿಗೆ ಸಂಗತವಾದುದೇ? ಸೊತ್ತು-ಅಹಿಂಸೆಗಳೆರಡೂ ಒಟ್ಟಿಗೆ ಹೋಗಲಾಗದವಾದರೆ ಭೂಮಿಯ ಅಥವಾ ಕಾರ್ಖಾನೆಗಳ ವ್ಯಕ್ತಿಗತ ಒಡೆತನವನ್ನು, ವ್ಯಕ್ತಿಗಳು ಪಕ್ವವಾಗದವರೆಗೆ ಅಥವಾ ಅವರು ಅವುಗಳನ್ನು ಬಿಟ್ಟಿರಲು ಸಾಕಷ್ಟು ಸುಶಿಕ್ಷಿತರಾಗದಿರುವವರೆಗೆ ಅನಿವಾರ್ಯ ದೋಷವೆಂದು ಭಾವಿಸಿ, ಅವರ ಕೈಲೇ ಉಳಿಯಲೆಂದು ಪ್ರತಿಪಾದಿಸುವಿರಾ? ಅಂಥ ಕ್ರಮ ಏನಾದರೂ ಆಗುವ ಪಕ್ಷಕ್ಕೆ ಎಲ್ಲ ಭೂಮಿಯನ್ನೂ ಪ್ರಭುತ್ವದ ಒಡೆತನಕ್ಕೆ ವಹಿಸಿ, ಪ್ರಭುತ್ವವನ್ನು ಜನತೆಯ ಹಿಡಿತಕ್ಕೆ ಒಪ್ಪಿಸುವುದು ಮೇಲಾಗದೇ?

**ಉತ್ತರ**—ಪ್ರೇಮ ಹಾಗೂ ವಿಶಿಷ್ಟ ವ್ಯಕ್ತಿಗತ ಒಡೆತನ ಒಟ್ಟಿಗೇ ಹೋಗಲಾರವು. ತತ್ತ್ವಶಃ ಪರಿಪೂರ್ಣ ಪ್ರೇಮವಿರುವಾಗ ಪರಿಪೂರ್ಣ ಅಪರಿಗ್ರಹವೇ ಇರಬೇಕು. ದೇಹವೇ ನಮ್ಮ ಕಡೆಯ ಸೊತ್ತು. ಆದುದರಿಂದ ಸಾವನ್ನು ಅಪ್ಪಲು ಸಿದ್ಧವಾಗಿ, ಮಾನವಸೇವೆಗಾಗಿ ದೇಹತ್ಯಾಗ ಮಾಡುವಾಗಲೇ ವ್ಯಕ್ತಿ ಪರಿಪೂರ್ಣ ಪ್ರೇಮವನ್ನು ಪಾಲಿಸಿ ಪೂರಾ ಅಪರಿಗ್ರಹಿಯಾಗಿ ಇದ್ದಂತೆ. ಆದರೆ ಅದು ಕೇವಲ ತಾತ್ತ್ವಿಕವಾಗಿ ಮಾತ್ರ ನಿಜ. ವಾಸ್ತವಿಕ ಬಾಳಿನಲ್ಲಿ ನಾವು ಪರಿಪೂರ್ಣ ಪ್ರೇಮ ಪಾಲಿಸಲಾರೆವು, ಏಕೆಂದರೆ ದೇಹವೇ ಒಂದು ಸೊತ್ತಾಗಿ ಸದಾ ನಮ್ಮ ಬಳಿ ಇರುತ್ತದೆ. ಮಾನವ ಎಂದೂ ಅಪರಿಪೂರ್ಣನಾಗಿಯೇ ಇದ್ದಾನು, ಪೂರ್ಣನಾಗಲು ಪ್ರಯತ್ನಿಸುವುದೇ ಎಂದಿಗೂ ಅವನ ಪಾಲಿನ ಕೆಲಸ. ಆದಕಾರಣ ಪ್ರೇಮದ ಅಥವಾ ಅಪರಿಗ್ರಹದ ಪರಿಪೂರ್ಣ ಸಿದ್ಧಿ ನಾವು ಬದುಕಿರುವವರೆಗೆ ಮುಟ್ಟಲಾರದ ಆದರ್ಶವಾಗಿಯೇ ಇದ್ದೀತು, ಆದರೆ ಅದಕ್ಕಾಗಿ ನಾವು ನಿರಂತರ ಹೆಣಗುತ್ತಲೇ ಇರಬೇಕು.

ಧನಿಕರು ತಮ್ಮ ಐಶ್ವರ್ಯವನ್ನು ಬಡವರಿಗಾಗಿ ತಮ್ಮಲ್ಲಿ ಇಟ್ಟುಕೊಂಡ ಧರ್ಮದರ್ಶಿಗಳಂತೆ ವರ್ತಿಸಬೇಕೆಂದು ಕೇಳುತ್ತಿದೇವೆ ಅವರನ್ನು. ಧರ್ಮ ದರ್ಶಿತ್ವ ಶಾಸನದ ಪ್ರಕಾರ ಕಟ್ಟುಕತೆ, ಠಕ್ಕು ಎಂದೀರಿ ನೀವು. ಆದರೆ ಜನ ಅದನ್ನು ಕುರಿತು ಸತತ ಚಿಂತಿಸಿ, ಅದರಂತೆ ನಡೆದುದಾದರೆ ಈ ಲೋಕದ ಬಾಳುವೆ ಇಂದಿಗಿಂತ ಹೆಚ್ಚು ಪಾಲು ಪ್ರೇಮಾಧಾರಿತವಾದೀತು. ಪರಿಪೂರ್ಣ ಧರ್ಮದರ್ಶಿತ್ವ ಯೂಕ್ಲಿಡ್‌ನ ಬಿಂದುವ್ಯಾಖ್ಯೆಯಂತೆ ತಾತ್ತ್ವಿಕ ವಿಷಯ, ಅಷ್ಟೇ ಅಪ್ರಾಪ್ಯ. ಆದರೆ ಅದಕ್ಕಾಗಿ ಯತ್ನಿಸಿದರೆ ಜಗತ್ತಿನಲ್ಲಿ ಮತ್ತಾವುದೇ ಮಾರ್ಗಕ್ಕಿಂತ ಹೆಚ್ಚಿನ ಸಮಾನತೆಯ ಅವಸ್ಥೆಯನ್ನು ಸಾಧಿಸಲು ಬಹುದೂರ ಸಾಗಿಹೋದೇವು.

**ಪ್ರಶ್ನೆ**—ಖಾಸಗಿ ಸೊತ್ತು ಅಹಿಂಸೆಗೆ ಅಸಂಗತವೆನ್ನುವುದಾದರೆ ನೀವೇಕೆ ಅದನ್ನು ಸಹಿಸುವಿರಿ ?

**ಉತ್ತರ**—ಹಣ ಗಳಿಸಿ ಅದನ್ನು ತಾವಾಗಿಯೇ ಮಾನವಕುಲದ ಹಿತಕ್ಕೆ ಬಳಸದವರಿಗೆ ತೋರಿಸತಕ್ಕ ರಿಯಾಯಿತಿ ಅದು.

**ಪ್ರಶ್ನೆ**—ಹಾಗಾದರೆ ಖಾಸಗಿ ಒಡೆತನದ ಬದಲು ಪ್ರಭುತ್ವದ ಒಡೆತನ ವನ್ನೇಕೆ ಇಟ್ಟುಕೊಂಡು ಹಿಂಸೆಯನ್ನು ಕನಿಷ್ಠ ಮಿತಿಗೆ ಇಳಿಸಬಾರದು ?

**ಉತ್ತರ**—ಅದು ಖಾಸಗಿ ಒಡೆತನಕ್ಕಿಂತ ಲೇಸೇ. ಆದರೆ ಅದೂ ಸಹ ಹಿಂಸೆಯ ಕಾರಣದ ಮೇಲೆ ಆಕ್ಷೇಪಾರ್ಹ. ಪ್ರಭುತ್ವ ಹಿಂಸಾತ್ಮಕವಾಗಿ ಬಂಡವಾಳಗಾರಿಕೆಯನ್ನು ತುಳಿದುಹಾಕಿದರೆ ಅದು ತಾನೇ ಹಿಂಸೆಯ ಸುಳಿಗೆ ಸಿಕ್ಕಿಕೊಂಡೀತು, ಅಹಿಂಸೆಯನ್ನು ಎಂದೂ ಬೆಳೆಸಲಾರದೆ ಹೋದೀತು. ಪ್ರಭುತ್ವ (ರಾಜ್ಯ) ಕೇಂದ್ರೀಕೃತ, ಸುವ್ಯವಸ್ಥಿತ ಹಿಂಸಾಶಕ್ತಿಯ ಪ್ರತೀಕ. ವ್ಯಕ್ತಿಗಾದರೋ ಆತ್ಮವೊಂದಿದೆ, ಪ್ರಭುತ್ವ ಆತ್ಮವಿರಹಿತ ಯಂತ್ರ, ಅದನ್ನು ಅದರ ಅಸ್ತಿತ್ವಕಾರಣವಾದ ಹಿಂಸಾಶಕ್ತಿಯಿಂದ ಪರಾವೃತ್ತಗೊಳಿಸುವುದು ಎಂದಿಗೂ ಅಶಕ್ಯ. ಅಂತಲೇ ಧರ್ಮದರ್ಶಿತ್ವ ಸಿದ್ಧಾಂತವನ್ನು ನಾ ವರಿಸುತ್ತೇನೆ.

**ಪ್ರಶ್ನೆ**—ನಿರ್ದಿಷ್ಟ ನಿದರ್ಶನಕ್ಕೆ ಬರೋಣ. ಒಬ್ಬ ಕಲಾವಿದ ತನ್ನ ಕೆಲವಾರು ಚಿತ್ರಗಳನ್ನು ತನ್ನ ಮಗನಿಗೆ ಬಿಟ್ಟು ಹೋಗುತ್ತಾನೆ. ಮಗನಿಗೆ ಅವುಗಳ ಬೆಲೆ ತಿಳಿಯದು, ರಾಷ್ಟ್ರಕ್ಕೆ ಅವು ಎಷ್ಟು ಅಮೂಲ್ಯವೆಂಬುದನ್ನು ಅವ ಅರಿಯಲಾರ. ಅವನು ಅವನ್ನು ಮಾರುತ್ತಾನೆ, ಅಥವಾ ಹಾಳುಮಾಡಿ

ಬಿಡುತ್ತಾನೆ. ಹೀಗಾಗಿ ಒಬ್ಬನ ಮೂರ್ಖತನದಿಂದ ರಾಷ್ಟ್ರ ಅಮೂಲ್ಯವಾದುದನ್ನು ಕಳೆದುಕೊಳ್ಳುತ್ತದೆ. ನೀವು ಭಾವಿಸುವ ಅರ್ಥದಲ್ಲಿ ಮಗ ಧರ್ಮದರ್ಶಿ ಆಗಿ ಎಂದೂ ಇರಲಾರನೆಂದು ನಿಮಗೆ ಭರವಸೆ ಬಂದರೆ ಪ್ರಭುತ್ವ ಆದಷ್ಟು ಕಡಿಮೆ ಹಿಂಸೆ ಬಳಸಿ ಅದನ್ನು ಅವನಿಂದ ಪಡೆದುಕೊಂಡರೆ ಸಮರ್ಥನೀಯ ಎಂದು ನೀವು ಭಾವಿಸಲಾರಿರಾ ?

**ಉತ್ತರ**—ಹೌದು, ಪ್ರಭುತ್ವ ಖಂಡಿತ ಅವನ್ನು ವಶಪಡಿಸಿಕೊಂಡೀತು ; ಅತಿ ಕಡಿಮೆ ಹಿಂಸೆ ಉಪಯೋಗಿಸಿದರೂ ಸಮರ್ಥನೀಯವೆಂದೇ ನಂಬುತ್ತೇನೆ ನಾನು. ಆದರೆ ತನ್ನಿಂದ ಭಿನ್ನ ಅಭಿಪ್ರಾಯ ಉಳ್ಳವರ ಮೇಲೆ ಮಿತಿಮೀರಿದ ಹಿಂಸೆ ಉಪಯೋಗಿಸಿಬಿಡಬಹುದೆಂಬ ಭಯ ಸದಾ ಇದ್ದೀತು. ಸಂಬಂಧಿಸಿದವರು ಧರ್ಮದರ್ಶಿಗಳಂತೆ ನಡೆದುಕೊಂಡರೆ ನನಗೆ ಬಹು ಸಂತೋಷವಾದೀತು ; ಆದರೆ ಅವರು ಹಾಗಾಗದಿದ್ದರೆ ಆದಷ್ಟು ಕಡಿಮೆ ಬಲಪ್ರಯೋಗಮಾಡಿ ಪ್ರಭುತ್ವ ಅವರ ಸೊತ್ತುಗಳನ್ನು ವಶಪಡಿಸಿಕೊಳ್ಳಬೇಕಾಗಬಹುದೆಂದು ನಂಬುತ್ತೇನೆ. ಅಂತಲೇ ಚಕ್ರಗೋಷ್ಠಿಯ ಸಂದರ್ಭದಲ್ಲಿ ಪ್ರತಿಯೊಂದು ಪಟ್ಟಭದ್ರ ಹಿತವನ್ನೂ ಪರಿಶೀಲನೆ ಮಾಡಬೇಕು, ಆವಶ್ಯಕವೆಂದು ತೋರಿದರೆ ಪರಿಹಾರ ಕೊಟ್ಟೋ, ಕೊಡದೆಯೋ ವಶಪಡಿಸಿಕೊಳ್ಳತಕ್ಕದ್ದು ಎಂದು ಹೇಳಿದೆ.

ಆದರೆ ವ್ಯಕ್ತಿಶಃ ರಾಜ್ಯದ ಕೈಲಿ ಅಧಿಕಾರದ ಕೇಂದ್ರೀಕರಣಕ್ಕೆ ನನ್ನ ಒಲವಿಲ್ಲ, ಧರ್ಮದರ್ಶಿತ್ವಸಿದ್ಧಾಂತದ ಪ್ರಯೋಗವನ್ನೇ ಬಯಸಿಯೇನು. ಏಕೆಂದರೆ ಖಾಸಗಿ ಒಡೆತನದ ಹಿಂಸೆ, ಪ್ರಭುತ್ವದ ಹಿಂಸೆಗಿಂತ ಕಡಿಮೆ ಹಾನಿಕರವೆಂದು ನನ್ನ ಮತ. ಆದರೂ ಅನಿವಾರ್ಯವಾದರೆ, ಕನಿಷ್ಠಪ್ರಮಾಣದ ಪ್ರಭುತ್ವದ ಒಡೆತನಕ್ಕೆ ನನ್ನ ಬೆಂಬಲ ಕೊಡುವೆ.

**ಪ್ರಶ್ನೆ**—ಹಾಗಾದರೆ, ಸಮಾಜವಾದಿಗಳಿಗೂ ನಿಮಗೂ ಇರುವ ಮೂಲಭೂತ ಅಂತರ ಇದು: ಅಭ್ಯಾಸಬಲಕ್ಕಿಂತ ಹೆಚ್ಚಾಗಿ ಆತ್ಮಪ್ರತ್ಯಯದಿಂದ ಜನ ಬದುಕುತ್ತಾರೆಂದು ನೀವು ನಂಬುತ್ತೀರಿ. ಆತ್ಮೇಚ್ಛೆಗಿಂತ ಹೆಚ್ಚಾಗಿ ಅಭ್ಯಾಸಬಲದಿಂದ ಜನ ಬಾಳುವೆ ನಡೆಸುತ್ತಾರೆಂದು ಅವರು ನಂಬುತ್ತಾರೆ. ಆದಕಾರಣ ಆತ್ಮಶುದ್ಧೀಕರಣಕ್ಕೆ ನಿಮ್ಮ ಪ್ರಯತ್ನ, ಅವರದೋ, ಜನ ಪರರ ಶೋಷಣೆಯ ಇಚ್ಛೆಯನ್ನು ವ್ಯಕ್ತಪಡಿಸಲು ಅವಕಾಶವಿಲ್ಲದಂಥ ವ್ಯವಸ್ಥೆಯ ನಿರ್ಮಾಣದ ಪ್ರಯತ್ನ. ಅಲ್ಲವೇ ?

**ಉತ್ತರ**—ಮಾನವನು ಅಭ್ಯಾಸಬಲದಿಂದಲೇ ಬದುಕುತ್ತಿದಾನೆಂದು ಒಪ್ಪಿಕೊಳ್ಳುತ್ತೇನೆ. ಆದರೆ ತನ್ನ ಇಚ್ಛಾಪೂರ್ವಕವಾಗಿ ಬದುಕಲು ಯತ್ನಿಸುವುದು ಅವನಿಗೆ ಹೆಚ್ಚು ಶ್ರೇಯಸ್ಕರ. ಶೋಷಣೆಯನ್ನು ಕನಿಷ್ಠ ಮಿತಿಗೆ ಇಳಿಸುವಷ್ಟು ಪ್ರಮಾಣಕ್ಕೆ ಜನ ತಮ್ಮ ಇಚ್ಛಾಶಕ್ತಿಯನ್ನು ಬೆಳೆಸಿಕೊಳ್ಳಬಹುದೆಂದೂ ನನ್ನ ನಂಬಿಕೆ. ಪ್ರಭುತ್ವದ ಅಧಿಕಾರದ ಹೆಚ್ಚಳ ಕಂಡರೆ ನನಗೆ ಅತ್ಯಂತ ಹೆಚ್ಚು ಹೆದರಿಕೆ, ಏಕೆಂದರೆ ಶೋಷಣೆಯನ್ನು ಅತಿ ಕನಿಷ್ಠ ಮಿತಿಗೆ ಇಳಿಸಿದರೂ, ಎಲ್ಲ ಪ್ರಗತಿಯ ಮೂಲಾಧಾರವಾದ ವ್ಯಕ್ತಿತ್ವವನ್ನೇ ನಾಶಮಾಡಿ, ಮಾನವಕುಲಕ್ಕೇ ಅದು ಅತ್ಯಂತ ಹೆಚ್ಚು ಹಾನಿ ಎಸಗುತ್ತದೆ. ಧರ್ಮದರ್ಶಿತ್ವ ಸಿದ್ಧಾಂತವನ್ನು ಅನುಸರಿಸಿರುವ ಎಷ್ಟೋ ನಿದರ್ಶನಗಳನ್ನು ನಾವು ಬಲ್ಲೆವು, ಆದರೆ ಬಡವರಿಗಾಗಿ ನಿಜಕ್ಕೂ ಬದುಕಿದ ಪ್ರಭುತ್ವದ ನಿದರ್ಶನ ಒಂದನ್ನೂ ಕಾಣೆವು.

**ಪ್ರಶ್ನೆ**—ನೀವು ಕೆಲವು ವೇಳೆ ಉದಾಹರಿಸುವ ಧರ್ಮದರ್ಶಿತ್ವದ ನಿದರ್ಶನಗಳು ಬೇರಾವುದಕ್ಕಿಂತ ಹೆಚ್ಚಾಗಿ ನಿಮ್ಮ ವೈಯಕ್ತಿಕ ಪ್ರಭಾವದ ಪರಿಣಾಮವಲ್ಲವೇ ? ನಿಮ್ಮಂಥ ಉಪದೇಶಕರು ಆಗೊಮ್ಮೆ ಈಗೊಮ್ಮೆ ಬರುತ್ತಾರೆ. ಆದಕಾರಣ ಮಾನವನಲ್ಲಿ ತರಬೇಕಾದ ಪರಿವರ್ತನೆಗಳಿಗೆ ನಿಮ್ಮಂಥ ಜನರ ಆಕಸ್ಮಿಕ ಆಗಮನವನ್ನು ಅವಲಂಬಿಸದೆ ಯಾವುದಾದರೊಂದು ವ್ಯವಸ್ಥೆಗೆ ಅದನ್ನು ವಹಿಸುವುದು ಉತ್ತಮವಾಗದೇ ?

**ಉತ್ತರ** — ನನ್ನನ್ನು ಒತ್ತಟ್ಟಿಗೆ ಬಿಡಿ. ಮಾನವಕುಲದ ಎಲ್ಲಾ ಮಹಾ ಉಪದೇಶಕರ ಪ್ರಭಾವವೂ ಅವರ ಜೀವಿತಕಾಲದ ಬಳಿಕವೂ ಉಳಿದಿದೆ ಎಂಬುದನ್ನು ನೆನಪಿಡಿ. ಮಹಮ್ಮದ್, ಬುದ್ಧ, ಏಸುವಿನಂಥ ಪ್ರವಾದಿಗಳೊಬ್ಬಬ್ಬರ ಉಪದೇಶಗಳಲ್ಲೂ ಒಂದು ಶಾಶ್ವತ ಅಂಶವೂ ಇತ್ತು, ಆಯಾ ಕಾಲಕ್ಕೆ ಬೇಕಿದ್ದ ಅಂಶಗಳೂ ಇದ್ದುವು. ಅವರ ಉಪದೇಶಗಳ ಶಾಶ್ವತ ಅಂಶಗಳನ್ನು ತತ್ಕಾಲೀನ ಸಂಗತಿಗಳೊಡನೆ ಬೆರಸಿಕೊಳ್ಳಬಯಸುವೆವಾದ ಕಾರಣದಿಂದಲೇ ಇಂದು ಧಾರ್ಮಿಕ ಆಚರಣೆಯಲ್ಲಿ ಇಷ್ಟೊಂದು ತಿರುವುಮುರುವು ಕಾಣುತ್ತಿರುವುದು. ಅದು ಹೇಗಾದರಿರಲಿ, ಅವರು ಆಗಿಹೋದ ಬಳಿಕವೂ ಅವರ ಪ್ರಭಾವ ಉಳಿದಿದೆ.

ಹೇಗೂ ಈ ದಂಡಶಕ್ತಿಯನ್ನು ಆಧರಿಸಿ ನಿಂತ ವ್ಯವಸ್ಥೆಯನ್ನೇ ನಾ ಬೇಡ ಎನ್ನುವುದು. ಪ್ರಭುತ್ವ ಅಂಥದೇ ಒಂದು. ಸ್ವ-ಇಚ್ಛೆಯಿಂದ ನಿರ್ಮಿತ ವ್ಯವಸ್ಥೆ ಇರಲೇಬೇಕು.೧೬೮

* * * *

"ಇಂದಿನ ಐಶ್ವರ್ಯವಂತರು ಯುದ್ಧ ಇಲ್ಲವೆ ಸ್ವ-ಇಚ್ಛೆಯಿಂದ ತಮ್ಮ ಐಶ್ವರ್ಯಕ್ಕೆ ಧರ್ಮದರ್ಶಿಗಳಾಗಿ ತಮ್ಮನ್ನು ತಾವೇ ಪರಿವರ್ತಿಸಿಕೊಳ್ಳುವುದು— ಇವೆರಡರಲ್ಲಿ ಒಂದನ್ನು ಆರಿಸಿಕೊಳ್ಳಬೇಕು. ತಮ್ಮ ಸೊತ್ತಿನ ಸೂತ್ರಧಾರಿಗಳಾಗಿ ಉಳಿಯಲು, ತಮ್ಮ ಪ್ರತಿಭೆಯನ್ನು ಅದರ ಹೆಚ್ಚಳಕ್ಕಾಗಿ ಬಳಸಲು ನಾವು ಅವಕಾಶ ಕೊಟ್ಟೇವು; ತಮ್ಮ ಸ್ವಾರ್ಥಕ್ಕಾಗಿ ಅಲ್ಲ. ರಾಷ್ಟ್ರಹಿತಕ್ಕಾಗಿ, ಆದಕಾರಣ ಶೋಷಣೆ ಇಲ್ಲದಂತೆ. ಅವರು ಸಲ್ಲಿಸಿದ ಸೇವೆ ಹಾಗೂ ಸಮಾಜಕ್ಕೆ ಅದರಿಂದಾದ ಲಾಭಕ್ಕೆ ಅನುಗುಣವಾಗಿ ಅವರಿಗೆ ಸಿಗಬೇಕಾದ ಸಂಭಾವನೆಯ ಪ್ರಮಾಣವನ್ನು ಪ್ರಭುತ್ವ ಗೊತ್ತುಪಡಿಸೀತು. ಅವರ ಮಕ್ಕಳು ಯೋಗ್ಯತೆಯನ್ನು ಸಿದ್ಧಮಾಡಿಕೊಂಡರೆ ಮಾತ್ರವೇ ಅವರ ಸೂತ್ರಧಾರಿತನಕ್ಕೆ ವಾರಸುದಾರರಾದಾರು. .

"ನಾಳೆ ಭಾರತ ಸ್ವತಂತ್ರ ರಾಷ್ಟ್ರವಾಯಿತೆಂದರೆ ಎಲ್ಲ ಬಂಡವಾಳಗಾರರೂ ಶಾಸನಬದ್ಧ ಧರ್ಮದರ್ಶಿಗಳಾಗುವ ಅವಕಾಶ ಒದಗೀತು. ಆದರೆ ಆ ಶಾಸನವನ್ನು ಯಾರೂ ಮೇಲಿಂದ ಹೊರಿಸರು. ಅಡಿಯಿಂದ ಮೂಡಿಬರಬೇಕಾದೀತು. ಧರ್ಮದರ್ಶಿತ್ವದ ರಹಸ್ಯವನ್ನು ಜನ ಅರಿತುಕೊಂಡಾಗ, ಕಾಲ ಅದಕ್ಕೆ ಮಾಗಿಬಂದಾಗ, ಜನರೇ ಸ್ವತಃ ಗ್ರಾಮಪಂಚಾಯಿತಿಗಳಿಂದ ಹಿಡಿದು ಅಂಥ ಶಾಸನ ತಂದಾರು. ಅಡಿಯಿಂದ ಮೂಡಿಬರುವ ಅಂಥ ವ್ಯವಸ್ಥೆ ಅರಗಿಸಿಕೊಳ್ಳಲೂ ಸುಲಭ. ಮೇಲಿನಿಂದ ಹೊರಿಸಿದುದಾದರೆ ಅದು ಪೆಡಂಭೂತವಾಗಿ ಪರಿಣಮಿಸೀತು" ಎಂದು ಮುಕ್ತಾಯ ಮಾಡಿದರು ಗಾಂಧೀಜೀ.೧೬೯

* * * *

**ಪ್ರಶ್ನೆ**—ನಿಮ್ಮ ಲೇಖನಗಳಿಂದ ನಿಮ್ಮ "ಧರ್ಮದರ್ಶಿ" ಎಂದರೆ **ಬಹಳ ಉದಾರಿಯಾದ ಪರೋಪಕಾರಿ, ದಾನಿಗಿಂತ ಹೆಚ್ಚೇನೂ ಅಲ್ಲ, ಮೊದಲಿನ ಪಾರ್ಸಿ ಶ್ರೀಮಂತರು, ಟಾಟಾ ಮನೆತನ, ವಾಡಿಯಾಗಳು,**

ಬಿರ್ಲಾಗಳು, ಶ್ರೀ ಬಜಾಜ್ ಇತ್ಯಾದಿ, ಎಂಬ ಅಭಿಪ್ರಾಯ ಉಂಟಾಗುತ್ತದೆ. ಹೌದೇ? ಐಶ್ವರ್ಯವಂತನೊಬ್ಬನ ಸೊತ್ತಿನ ಪ್ರಧಾನ ಅಥವಾ ಅಧಿಕಾರ ಸಂಪನ್ನರಾಗಿ ಪ್ರಯೋಜನ ಪಡೆದಂಥವರು ಯಾರಾಗಬೇಕೆಂದು ನೀವು ಭಾವಿಸುವಿರೆಂಬುದನ್ನು ದಯವಿಟ್ಟು ವಿವರಿಸುವಿರಾ? ಆತ ತನಗಾಗಿ, ತನ್ನ ಬಂಧುಬಳಗಕ್ಕಾಗಿ ಮತ್ತು ಇತರ ಅಹಿಂಸಾತ್ಮಕ ಉದ್ದೇಶ್ಯಗಳಿಗಾಗಿ ಆದಾಯದ ಹಾಗೂ ಬಂಡವಾಳದ ಎಷ್ಟು ಪ್ರಮಾಣವನ್ನು ವೆಚ್ಚಮಾಡಿಕೊಳ್ಳ ಬೇಕೆಂಬುದಕ್ಕೆ ಏನಾದರೂ ಮಿತಿ ಉಂಟೇ? ಆ ಮಿತಿ ಮೀರುವವರನ್ನು ತಡೆಯಬಹುದೇ? ಧರ್ಮದರ್ಶಿಯಾಗಿರಲು ಅನರ್ಹನಾಗಿದ್ದರೆ ಅಥವಾ ಬೇರಾವ ವಿಧದಿಂದಾಗಲಿ ತನ್ನ ಹೊಣೆ ನಿರ್ವಹಿಸದೆ ಹೋದರೆ ಅವನನ್ನು ಪ್ರಯೋಜನ ಪಡೆಯುವವರಾಗಲಿ ಪ್ರಭುತ್ವವಾಗಲಿ ವಜಾ ಮಾಡಬಹುದೇ, ಅಥವಾ ಅವನು ಲೆಕ್ಕಪತ್ರ ಕೊಡುವಂತೆ ಕೇಳಬಹುದೇ? ರಾಜಮಹಾರಾಜ ರಿಗೂ ಮತ್ತು ಜಮೀನುದಾರರಿಗೂ ಇದೇ ತತ್ತ್ವ ಅನ್ವಯವಾಗುವುದೋ ಅಥವಾ ಬೇರೆ ಬಗೆಯ ಧರ್ಮದರ್ಶಿತ್ವವೇನಾದರೂ ಇದೆಯೋ?

**ಉತ್ತರ**—ಧರ್ಮದರ್ಶಿತ್ವದ ವಿಚಾರ ಜನರನ್ನು ಆಕರ್ಷಿಸುವುದಾದರೆ ಈಗ ನಾವು ಕಾಣುವಂಥ ಪರೋಪಕಾರ, ಔದಾರ್ಯ ಮಾಯವಾದೀತು. ನೀವು ಹೆಸರಿಸಿರುವವರಲ್ಲಿ ಜಮನಾಲಾಲ್ ಒಬ್ಬರೇ ಅದರ ಹತ್ತಿರ ಹತ್ತಿರ ಬಂದರು, ಅದೂ ಹತ್ತಿರ ಹತ್ತಿರ ಅಷ್ಟೇ. ಧರ್ಮದರ್ಶಿಗೆ ಜನತೆಯಲ್ಲದೆ ಬೇರಾವ ವಾರಸುದಾರರೂ ಇಲ್ಲ. ಅಹಿಂಸೆಯ ಆಧಾರದ ಮೇಲೆ ನಿರ್ಮಿತ ವಾದ ಪ್ರಭುತ್ವದಲ್ಲಿ ಧರ್ಮದರ್ಶಿಗಳ ಸಂಭಾವನೆ ಗೊತ್ತುಪಡಿಸಲ್ಪಟ್ಟೀತು. ರಾಜರೂ ಜಮೀನುದಾರರೂ ಸಹ ಇತರ ಸಿರಿವಂತರಿಗೆ ಸಮನಾಗಿಯೇ ಇದ್ದಾರು.೧೭೦

* * * *

**ಪ್ರಶ್ನೆ**—ಅಹಿಂಸಕನಾದ ಮನುಷ್ಯ ಐಶ್ವರ್ಯ ಹೊಂದಿರಬಹುದೇ? ಹೊಂದಿರಬಹುದಾದರೆ ಅದನ್ನು ಅಹಿಂಸಾತ್ಮಕವಾಗಿ ಇಟ್ಟುಕೊಳ್ಳುವುದು ಹೇಗೆ?

**ಗಾಂಧೀಜೀ**—ಅವನ ಬಳಿ ಲಕ್ಷಾಂತರವಿದ್ದರೂ ಯಾವ ಐಶ್ವರ್ಯಕ್ಕೂ ಅವನು ಒಡೆಯನಾಗಿರಬೇಕಿಲ್ಲ ಅದನ್ನೆಲ್ಲ ಇಡುಪು ಧನವನ್ನಾಗಿ ಇಟ್ಟು

ಕೊಂಡಿರಲಿ. ಡಕಾಯಿತರು, ಕಳ್ಳರ ನಡುವೆ ಇರುವುದಾದರೆ, ಅವರನ್ನು ನಂಬುವುದಾದರೆ ಮುಂಡಿವರೆಗೆ ಪಂಚೆಯಿಲ್ಲದೆ ಮತ್ತೇನನ್ನೂ ಆತ ಹೊಂದಿರ ಬೇಕಿಲ್ಲ. ಹೀಗೆ ಮಾಡಿದರೆ ಅವನು ಅವರನ್ನು ಪರಿವರ್ತನೆ ಮಾಡಿಯಾನು.

ಆದರೆ ನೀವು ಈ ಮಾತನ್ನು ಸರ್ವತ್ರ ಅನ್ವಯಿಸಬಾರದು. ಅಹಿಂಸಾತ್ಮಕ ರಾಜ್ಯದಲ್ಲಿ ಎಲ್ಲೋ ಕೆಲ ಡಕಾಯಿತರಿದ್ದಾರು. ಏನನ್ನೂ ಪಡೆಯದಿರುವುದೇ ಸುವರ್ಣನಿಯಮ. ಅಪರಾಧಿ ಜನಾಂಗಗಳೆಂಬುವರ ನಡುವೆ ನೆಲಸಿ ದುಡಿಯಲು ನಾ ನಿಶ್ಚಯಿಸಿದುದಾದರೆ ಯಾವ ಒಡವೆ-ವಸ್ತುವನ್ನೂ ನಾನು ಅಲ್ಲಿಗೆ ಒಯ್ಯೆ. ನನ್ನ ಅನ್ನವಸತಿಗಳಿಗೆ ಅವರನ್ನೇ ಅವಲಂಬಿಸಿಯೇನು. ನಾನು ಅವರ ಸೇವೆಗಾಗಿ ಅವರ ನಡುವೆ ಹೋಗಿದೇನೆಂದು ಅವರಿಗೆ ಅನಿಸಿದ ಗಳಿಗೆಯೇ ಅವರು ನನ್ನ ಗೆಳೆಯರಾದಾರು. ಆ ನಿಲುವಿನಲ್ಲೇ ನಿಜವಾದ ಅಹಿಂಸೆ ಇರುವುದು.೧೭೧

* * * *

**ಪ್ರಶ್ನೆ**—ಐಶ್ವರ್ಯವಂತರಿಗೆ ಯಾವುದಾದರೂ ಜೀವನನಿಯಮವನ್ನು ಗೊತ್ತುಪಡಿಸಬಹುದೇ ? ಎಂದರೆ, ಅವರಿಗೆ ಎಷ್ಟು ಪಾಲು ಸೇರಿರಬೇಕು, ಎಷ್ಟು ಪಾಲು ಅವರಿಗೆ ಸೇರಿರಬಾರದು ಎಂದು ?

**ಉತ್ತರ**—" ಹೌದು "—ಎಂದರು ಗಾಂಧೀಜೀ : " ಐಶ್ವರ್ಯವಂತ ಶೇಕಡಾ ೫ ಭಾಗ ಅಥವಾ ೧೦ ಭಾಗ ಅಥವಾ ೧೫ ಭಾಗ ತೆಗೆದುಕೊಳ್ಳಲಿ."

" ಆದರೆ ೮೫ ಭಾಗವಲ್ಲ ? "

" ಹೌದು ! ಶೇ. ೫೫ ಭಾಗಕ್ಕೆ ಹೋಗಲು ಯೋಚಿಸುತ್ತಿದ್ದೆ ! ಆದರೆ ಎಂಥ ಶೋಷಕನೂ ೮೫ ಭಾಗ ತೆಗೆದುಕೊಳ್ಳುವ ವಿಚಾರಮಾಡತಕ್ಕದಲ್ಲ ! "

ಐಶ್ವರ್ಯವಂತನಿಗೆ ವಿಚಾರ ಬರುವಂತೆ ಮಾಡಲು ಎಷ್ಟು ಕಾಲ ಕಾಯ ಬೇಕು ?—ಎಂಬುದೇ ಪ್ರಶ್ನೆ ಹಾಕಿದವರ ತೊಡಕಾಗಿತ್ತು.

" ಅಲ್ಲೇ ನನಗೂ ಕಮ್ಯುನಿಸ್ಟರಿಗೂ ಭಿನ್ನಾಭಿಪ್ರಾಯ " — ಎಂದರು ಗಾಂಧೀಜೀ : " ನನಗೆ ಅಹಿಂಸೆಯೇ ಅಂತಿಮ ಒರೆಗಲ್ಲು. ನಾವೂ ಒಂದಾ ನೊಂದು ದಿವಸ ಶ್ರೀಮಂತ ಮನುಷ್ಯನ ಸ್ಥಿತಿಯಲ್ಲೇ ಇದ್ದೆವು ಎಂಬುದನ್ನು ನೆನಪಿಡೋಣ. ನಮ್ಮದೇನೂ ಸುಲಭ ಕ್ರಮವಾಗಿರಲಿಲ್ಲ. ನಮ್ಮಷ್ಟಕ್ಕೆ

ನಾವೇ ತಡೆಯಲಿಲ್ಲವೇ ? ಹಾಗೆಯೇ ಇತರರನ್ನೂ ಸ್ವಲ್ಪ ತಾಳೋಣ. ಅಲ್ಲದೆ, ನಾನು ಸರಿ, ಆತ ತಪ್ಪು ಎಂದು ತಿಳಿಯುವ ಹಕ್ಕು ಯಾವುದೂ ನನಗೆ ಇಲ್ಲ. ನನ್ನ ದೃಷ್ಟಿಕೋಣಕ್ಕೆ ಅವನನ್ನು ತಿರುಗಿಸಿಕೊಳ್ಳುವವರೆಗೆ ನಾನು ತಡೆಯಲೇಬೇಕು. ಏತನ್ಮಧ್ಯೆ " ಶೇ. ೨೫ ಭಾಗ ನಾ ಇಟ್ಟುಕೊಂಡು ೭೫ ಭಾಗ ದಾನಕ್ಕೆ ಕೊಡುವೆ " ಎಂದು ಆತ ಹೇಳಿದರೆ ಆ ಸೂಚನೆ ಒಪ್ಪಿಬಿಟ್ಟೇನು ನಾನು. ಏಕೆಂದರೆ ತಾನಾಗಿಯೇ ಕೊಟ್ಟ ೭೫ ಭಾಗ ಕತ್ತಿ ಹಿರಿದು ತೋರಿಸಿದಾಗ ತೆರುವ ೧೦೦ ಭಾಗಕ್ಕಿಂತ ಲೇಸಾದುದೆಂದು ನನಗೆ ಗೊತ್ತು. ಹೀಗೆ ೭೫ ಭಾಗದಿಂದ ತೃಪ್ತನಾಗಿ ಅದನ್ನು ಸಲ್ಲಬೇಕಾದವರಿಗೆ ಸಲ್ಲಿಸಿಬಿಟ್ಟೇನು. ಅಹಿಂಸೆಯೇ ನಮ್ಮ ನಡುವೆ ಸಾಮಾನ್ಯ ನಿಯಮವಾಗಿರಬೇಕು.

" ಇಂದು ಬಲಾತ್ಕಾರವಾಗಿ ಅರ್ಪಿಸಿದ ಮನುಷ್ಯ ನಾಳೆ ಸ್ವ-ಇಚ್ಛೆಯಿಂದ ಆ ನಿಲುವನ್ನು ಒಪ್ಪಿಯಾನು ಎಂದು ನೀವು ವಾದಿಸಬಹುದು. ನನ್ನ ದೃಷ್ಟಿಗೆ ಅದು ತೀರಾ ದೂರದ ಸಾಧ್ಯತೆ. ಅದರ ಆಧಾರದ ಮೇಲೆ ಯಾವ ಗೋಪುರವನ್ನೂ ನಾ ಕಟ್ಟೆ. ನಾನು ಇಂದು ಹಿಂಸಾಪ್ರಯೋಗ ಮಾಡಿದರೆ ನಾಳೆ ನಿಸ್ಸಂಶಯವಾಗಿ ನನ್ನೆದುರು ಇನ್ನೂ ಹೆಚ್ಚಿನ ಹಿಂಸೆ ನಿಂತೀತು, ಇದು ಖಂಡಿತ. ಅಹಿಂಸೆಯೇ ನಿಯಮವಾಗಿರುವ ಬಾಳುವೆ ನಿಸ್ಸಂದೇಹವಾಗಿ ಒಪ್ಪಂದಗಳ ಮಾಲೆಯೇ ಸರಿ. ಕೊನೆಯಿಲ್ಲದ ಸಂಘರ್ಷಗಳ ಸರಪಳಿಗಿಂತ ಅದು ಎಷ್ಟೋ ಲೇಸು."

" ಸಿರಿವಂತನ ನ್ಯಾಯವಾದ ನಿಲುಮೆಯನ್ನು ಸಂಕ್ಷೇಪವಾಗಿ ನೀವು ಹೇಗೆ ವಿವರಿಸುವಿರಿ ? "

" ಧರ್ಮದರ್ಶಿ—ಎಂಬುದಾಗಿ. ಎಷ್ಟೋ ಗಳಿಸಿ ಎಲ್ಲವನ್ನೂ ಬಡವರಿಗಾಗಿ ವೆಚ್ಚಮಾಡುವ ಅನೇಕ ಸ್ನೇಹಿತರನ್ನು ನಾ ಬಲ್ಲೆ, ಅವರು ತಾವು ತಮ್ಮ ಸಂಪತ್ತಿನ ಧರ್ಮದರ್ಶಿಗಳೆಂದಷ್ಟೇ ತಿಳಿದುಕೊಂಡಿದಾರೆ."[೧೬೨]

* * * *

**ಪ್ರಶ್ನೆ**—ಧರ್ಮದ ದಾರಿಯಲ್ಲಿ ಲಕ್ಷಾಂತರ ಗಳಿಸುವುದು ಹೇಗೆ ಸಾಧ್ಯ ? ವ್ಯಾಪಾರಿಗಳ ದೊರೆ ಜಮನಾಲಾಲ್‌ಜೀ ಅದು ಸಾಧ್ಯವಿಲ್ಲವೆಂದು ಹೇಳುತ್ತಿದ್ದರು. ಅಲ್ಲದೆ, ಶ್ರೀಮಂತ ಎಷ್ಟೇ ಎಚ್ಚರಿಕೆಯಿಂದಿದ್ದರೂ ತನ್ನ ಯಥಾರ್ಥ ಆವಶ್ಯಕತೆಗಿಂತ ಹೆಚ್ಚು ತನಗಾಗಿ ವೆಚ್ಚಮಾಡಿಕೊಂಡೇ ಮಾಡಿಕೊಂಡಾನು.

ಆದುದರಿಂದ ಐಶ್ವರ್ಯದ ಧರ್ಮದರ್ಶಿತ್ವಕ್ಕಿಂತ ಹೆಚ್ಚಾಗಿ ಐಶ್ವರ್ಯವಂತನಾಗದೇ ಇರುವುದರ ಮೇಲೇ ಹೆಚ್ಚು ಭಾರ ಹಾಕಬಾರದೇಕೆ ?

**ಉತ್ತರ** — ಸೂಕ್ತವಾದ ಪ್ರಶ್ನೆ, ಹಿಂದೆಯೇ ಕೇಳಿದಾರೆ ಹೀಗೆ. ಜಮುನಾಲಾಲ್‌ಜೀ ಅಂದುಕೊಂಡಿರಬಹುದಾದುದು ಗೀತೆಯ ಅರ್ಥದಲ್ಲಿ ಎಲ್ಲ ಕರ್ಮವೂ ಕಲಂಕಿತವೇ ಎಂಬಂತೆ ಇದ್ದೀತು. ಪ್ರಜ್ಞಾಪೂರ್ವಕವಾಗಿ ಕೇಡು ಬಗೆಯದೆ, ಮಾಡದೆ ಐಶ್ವರ್ಯ ಗಳಿಸಲು ಸಾಧ್ಯ ಎಂಬುದು ನನ್ನ ನಂಬಿಕೆ. ಉದಾಹರಣೆಗೆ ನನ್ನ ಒಂದು ಎಕರೆ ಹೊಲದಲ್ಲೇ ನನಗೊಂದು ಬಂಗಾರದ ಗಣಿ ಸಿಗಬಹುದು. ಆದರೆ ಐಶ್ವರ್ಯ ಗಳಿಸಿ, ಆಮೇಲೆ ಅದರ ಧರ್ಮದರ್ಶಿಯಾಗುವುದಕ್ಕಿಂತ ಐಶ್ವರ್ಯವನ್ನು ಅಪೇಕ್ಷಿಸದಿರುವುದೇ ಉತ್ತಮವೆಂದು ಒಪ್ಪುತ್ತೇನೆ. ನಾನು ನನ್ನ ಆಸೆಯನ್ನು ಹಿಂದೆಯೇ ಬಿಟ್ಟುಕೊಟ್ಟೆ. ಅದು ಇತರರೂ ಬಿಟ್ಟುಕೊಡಿರೆನ್ನುವುದಕ್ಕೆ ಸಾಕ್ಷಿಯಾಗಲು ಸಾಕು. ಆದರೆ ಈಗಾಗಲೇ ಶ್ರೀಮಂತರಾಗಿರುವವರಿಗೆ, ಶ್ರೀಮಂತರಾಗುವ ಆಸೆಯನ್ನು ಬಿಡದವರಿಗೆ ನಾನೇನು ಹೇಳಲಿ? ಅವರ ಐಶ್ವರ್ಯವನ್ನು ಸೇವೆಗಾಗಿ ಬಳಸಿ ಎಂದೇ ಹೇಳಬೇಕು. ಸಾಮಾನ್ಯವಾಗಿ ಅವರು ಬೇಕಾದುದಕ್ಕಿಂತ ಹೆಚ್ಚು ಹಣವನ್ನು ತಮಗಾಗಿ ವೆಚ್ಚಮಾಡುವರೆಂಬುದು ದಿಟ. ಇದನ್ನು ತಪ್ಪಿಸುವಂತಿಲ್ಲ. ಜಮುನಾಲಾಲ್‌ಜೀ ತಮ್ಮ ಸರಿಸಮಾನ ಅಂತಸ್ತಿನವರು ಖರ್ಚುಮಾಡುತ್ತಿದ್ದುದಕ್ಕಿಂತ, ಎಷ್ಟೋ ಮಧ್ಯಮವರ್ಗದವರಿಗಿಂತ ಬಹಳ ಕಡಮೆ ತಮಗಾಗಿ ವ್ಯಯಿಸುತ್ತಿದ್ದರು. ತಮಗಾಗಿ ವೆಚ್ಚವಾಡುವುದರಲ್ಲಿ ಅಸಂಖ್ಯಾತ ಜಿಪುಣರನ್ನು ನಾ ಕಂಡಿದೇನೆ. ಕೆಲವರಿಗಂತೂ ಯತ್ಕಿಂಚಿತ್ತೂ ವೆಚ್ಚಮಾಡದಿರುವುದೇ ಅವರ ಸ್ವಭಾವದ ಅಂಶವಾಗಿಬಿಟ್ಟಿರುತ್ತದೆ. ಹಾಗೆ ಮಾಡಿ ಏನೋ ಗುಣ ಗಳಿಸಿದೆವೆಂದೂ ಅವರು ತಿಳಿಯುವುದಿಲ್ಲ.

ಐಶ್ವರ್ಯವಂತರ ಮಕ್ಕಳಿಗೂ ಇದೇ ಅನ್ವಯಿಸುತ್ತದೆ. ವ್ಯಕ್ತಿಶಃ ಪಿತ್ರಾರ್ಜಿತ ಐಶ್ವರ್ಯದಲ್ಲಿ ನನಗೆ ನಂಬಿಕೆ ಇಲ್ಲ. ಶ್ರೀಮಂತರು ತಮ್ಮ ಮಕ್ಕಳಿಗೆ ಒಳ್ಳೆ ಶಿಕ್ಷಣ ಕೊಟ್ಟು ಮುಂದೆ ತರಬೇಕು, ಸ್ವತಂತ್ರರಾಗಿ ಬದುಕುವುದನ್ನು ಕಲಿಸಬೇಕು. ಅವರ ಮಕ್ಕಳಿಗೆ ಸ್ವಲ್ಪ ಶಿಕ್ಷಣವೇನೋ ಸಿಗುತ್ತದೆ, ದಾರಿದ್ರ್ಯವನ್ನು ಪ್ರಶಂಸಿಸುವ ಶ್ಲೋಕಗಳನ್ನೂ ಅವರು ಪಠಿಸುತ್ತಾರೆ, ಆದರೆ ಅಪ್ಪನ ಆಸ್ತಿಯನ್ನು ಅನುಭವಿಸುವುದರಲ್ಲಿ ಅವರಿಗೆ ಯಾವ ಹಿಂಜರಿಕೆಯೂ ಇರದು.

ಹೀಗಿರುವಾಗ ನಾನು ನನ್ನ ವ್ಯವಹಾರಬುದ್ಧಿ ಬಳಸಿ ವ್ಯವಹಾರ್ಯವಾದುದನ್ನು ಸಲಹೆಮಾಡುತ್ತೇನೆ. ದಾರಿದ್ರ್ಯವನ್ನು ವರಿಸುವುದನ್ನು ಧರ್ಮವೆಂದು ತಿಳಿಯುವ, ಮತ್ತು ಆರ್ಥಿಕ ಸಮಾನತೆಯನ್ನೇ ನಂಬಿ, ಅದನ್ನೇ ಬಯಸುವ ನಮ್ಮಂಥವರು ಐಶ್ವರ್ಯವಂತರನ್ನು ಕಂಡು ಕರುಬಬಾರದು; ನಮ್ಮ ಬಡತನದಲ್ಲೇ ನಿಜವಾದ ಸೌಖ್ಯ ಪ್ರದರ್ಶಿಸಬೇಕು, ಇತರರು ನಮ್ಮನ್ನು ಅನುಸರಿಸುವಂತೆ ಮಾಡಬೇಕು. ವಿಷಾದದ ಸಂಗತಿ, ಹೀಗೆ ಸೌಖ್ಯವಾಗಿರುವವರು ವಿರಳ, ಅಪರೂಪ.೧೭೩

## " ತೇನ ತ್ಯಕ್ತೇನ ಭುಂಜೀಥಾಃ "

ಐಶ್ವರ್ಯವಂತರು ಇಂದು ತಮ್ಮ ಧರ್ಮವೇನೆಂದು ಚೆನ್ನಾಗಿ ಯೋಚಿಸಬೇಕು. ತಮ್ಮ ಸಂಪತ್ತನ್ನು ಕಾಯಲೆಂದು ನೇಮಿಸಿಕೊಂಡ ತೊತ್ತುಗಳೇ, ಕಾವಲುಗಾರರೇ ತಮ್ಮ ಮೇಲೆ ತಿರುಗಿಬಿದ್ದಾರು. ಧನಿಕ ವರ್ಗಗಳು ಇಲ್ಲವೇ ಶಸ್ತ್ರಾಸ್ತ್ರಗಳಿಂದ, ಇಲ್ಲವೇ ಅಹಿಂಸೆಯಿಂದ ಕಾದಾಡಲು ಕಲಿಯಬೇಕಾದೀತು. ಎರಡನೆಯ ಹಾದಿ ಹಿಡಿಯಬಯಸುವವರಿಗೆ ಅತ್ಯಂತ ಪರಿಣಾಮಕಾರೀ ಮಂತ್ರ: **' ತೇನ ತ್ಯಕ್ತೇನ ಭುಂಜೀಥಾಃ '** (ಸಂಪತ್ತನ್ನು ಪರಿತ್ಯಜಿಸಿ ಭೋಗಿಸು). ವಿಸ್ತರಿಸಿದರೆ: " ಕೋಟಿಗಟ್ಟಲೆ ಗಳಿಸಿ. ಆದರೆ ನಿಮ್ಮ ಸಿರಿ ನಿಮ್ಮದಲ್ಲ; ಜನರಿಗೆ ಸೇರಿದುದು. ನಿಮ್ಮ ನ್ಯಾಯವಾದ ಅಗತ್ಯಗಳಿಗೆ ಬೇಕಾದುದಷ್ಟನ್ನು ತೆಗೆದುಕೊಳ್ಳಿ, ಉಳಿದುದನ್ನು ಸಮಾಜಕ್ಕಾಗಿ ವಿನಿಯೋಗಿಸಿ " ಎಂದೇ ಅರ್ಥ. ಈ ಸತ್ಯದಂತೆ ಈ ತನಕ ನಡೆದಿಲ್ಲ; ಧನಿಕ ವರ್ಗಗಳು ಇಂದಿನಂಥ ಸಂಕಟದ ಸನ್ನಿವೇಶದಲ್ಲೂ ಈ ರೀತಿ ನಡೆಯದಿದ್ದರೆ ಅವರು ತಮ್ಮ ಸಿರಿವಂತಿಕೆಯ, ವಿಕಾರ-ಉನ್ಮಾದಗಳ ದಾಸರಾಗಿ ಉಳಿದಾರು, ಕಡೆಗೆ ಅವರನ್ನು ಸದೆಬಡಿಯುವವರ ದಾಸರೂ ಆದಾರು.

ಈ ಯುದ್ಧದ ಅಂತ್ಯವೇ ಬಂಡವಾಳದ ಆಳ್ವಿಕೆಯ ಅಂತ್ಯವೂ ಆದೀತೆಂದು ನನಗೆ ಕಾಣುತ್ತಿದೆ. ಬಡವರ ಆಳ್ವಿಕೆಯ ದಿನ ಬರುತ್ತಿರುವುದನ್ನು ನಾ ನೋಡುತ್ತಿದೇನೆ, ಆ ಆಳ್ವಿಕೆ ಶಸ್ತ್ರಬಲದಿಂದಲೋ ಅಥವಾ ಅಹಿಂಸೆಯಿಂದಲೋ ಬಂದೇ ಬಂದೀತು. ಪಾಶವೀ ಶಕ್ತಿ ನಶ್ವರವೆಂಬುದು ನೆನಪಿರಲಿ, ಈ ಶರೀರವೂ ನಶ್ವರವಿದ್ದಂತೆ. ಆದರೆ ಆತ್ಮಬಲ ಶಾಶ್ವತ, ಆತ್ಮನೂ ಶಾಶ್ವತ ಇದ್ದಂತೆ.೧೭೪

## ಧರ್ಮದರ್ಶಿತ್ವ ಸೂತ್ರ

ಮುಂದೆ ಕಂಡ 'ಸರಳ, ವ್ಯಾವಹಾರಿಕ ಧರ್ಮದರ್ಶಿತ್ವ ಸೂತ್ರ' ಗಾಂಧೀಜೀಯ ಒಪ್ಪಿಗೆ ಪಡೆದಿತ್ತು :

೧. ಧರ್ಮದರ್ಶಿತ್ವ ಇಂದಿನ ಬಂಡವಾಳಶಾಹೀ ಸಮಾಜವ್ಯವಸ್ಥೆಯನ್ನು ಸಾಮ್ಯನಿಷ್ಠ ಸಮಾಜವಾಗಿ ಪರಿವರ್ತಿಸುವ ಒಂದು ಮಾರ್ಗವನ್ನು ನೀಡುತ್ತದೆ. ಅದು ಬಂಡವಾಳಶಾಹಿಗೆ ಎಡೆಕೊಡದು, ಆದರೆ ಬಂಡವಾಳ ವರ್ಗ ಆತ್ಮಸುಧಾರಣೆ ಮಾಡಿಕೊಳ್ಳಲು ಒಂದು ಅವಕಾಶ ಕೊಡುತ್ತದೆ. ಮಾನವಸ್ವಭಾವ ಎಂದಿಗೂ ಪರಿವರ್ತನೆಗೆ ಮೀರಿದುದಲ್ಲವೆಂಬ ಶ್ರದ್ಧೆಯ ಮೇಲೆ ಅದು ನಿಂತಿದೆ.

೨. ಸಮಾಜ ತನ್ನ ಕ್ಷೇಮಸಾಧನೆಗಾಗಿ ಅನುಮತಿಸುವಷ್ಟುಮಟ್ಟಿಲ್ಲದೆ ಉಳಿದಾವ ಖಾಸಗಿ ಸೊತ್ತಿನ ಅಧಿಕಾರವನ್ನೂ ಅದು ಮಾನ್ಯಮಾಡುವುದಿಲ್ಲ.

೩. ಸಂಪತ್ತಿನ ಒಡೆತನ ಹಾಗೂ ಉಪಯೋಗವನ್ನು ಶಾಸನದಿಂದ ನಿಯಮನಗೊಳಿಸುವುದನ್ನು ಅದು ಬಹಿಷ್ಕರಿಸದು.

೪. ಹೀಗೆ, ರಾಜ್ಯ ನಿಯಮಿತ ಧರ್ಮದರ್ಶಿತ್ವದ ಅಡಿಯಲ್ಲಿ ವ್ಯಕ್ತಿ ತನ್ನ ಸ್ವಾರ್ಥತೃಪ್ತಿಗಾಗಿ ಅಥವಾ ಸಮಾಜದ ಹಿತವನ್ನು ದುರ್ಲಕ್ಷಿಸಿ ಐಶ್ವರ್ಯ ಹೊಂದಿರಲು, ಬಳಸಲು ಸ್ವತಂತ್ರನಾಗಿರಲಾರ.

೫. ನ್ಯಾಯೋಚಿತವಾದ ಕನಿಷ್ಠ ಜೀವನ ವೇತನವನ್ನು ಗೊತ್ತುಪಡಿಸುವ ಸೂಚನೆಯಂತೆಯೆ ಸಮಾಜದಲ್ಲಿ ಯಾವನೇ ವಕ್ತಿಗೂ ಬಿಡಬಹುದಾದ ಗರಿಷ್ಠ ಆದಾಯದ ಮಿತಿಯನ್ನೂ ಗೊತ್ತುಪಡಿಸಬೇಕು. ಅಂಥ ಕನಿಷ್ಠ–ಗರಿಷ್ಠ ಆದಾಯಗಳ ಅಂತರ ತರ್ಕಬದ್ಧವಿರಬೇಕು, ನ್ಯಾಯಸಮ್ಮತ ಇರಬೇಕು, ಕಾಲಕಾಲಕ್ಕೆ ಬದಲಾಗುವಂಥದಿರಬೇಕು. ಹೀಗಾಗಿ ಆ ಅಂತರ ಅಳಿಸಿಹಾಕುವ ಕಡೆಗೇ ಪ್ರವೃತ್ತಿ ಇರಬೇಕು.

೬. ಗಾಂಧೀ ದೃಷ್ಟಿಯ ಅರ್ಥವ್ಯವಸ್ಥೆಯಲ್ಲಿ ಉತ್ಪಾದನೆಯ ಸ್ವರೂಪವನ್ನು ಸಾಮಾಜಿಕ ಆವಶ್ಯಕತೆ ನಿರ್ಧರಿಸೀತು, ವ್ಯಕ್ತಿಯ ಖುಷಿ ಅಥವಾ ಲೋಭವಲ್ಲ.[೧೭೫]

---

# ನಿವೇದನ

## ವಿಷಯಮೂಲಸೂಚಿ

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೨೩ | xiii | (ಹರಿಜನ, ೨-೩-೧೯೪೦) |
| ೨೪ | xiv | (ಹರಿಜನ, ೧-೫-೧೯೩೭) |
| ೨೫ | xiv | (ಹರಿಜನ, ೧-೫-೧೯೩೭) |
| ೨೬ | xv | (ಹರಿಜನ, ೧೩-೫-೧೯೩೯) |
| ೨೭ | xv | (ಹರಿಜನ, ೧೫-೭-೧೯೩೫) |
| ೨೮ | xv | (ಯಂಗ್ ಇಂಡಿಯಾ, ೧೨-೬-೧೯೨೪) |
| ೨೯ | xvi | (ಯಂಗ್ ಇಂಡಿಯಾ, ೧೦-೧೦-೧೯೩೯) |
| ೩೦ | xvi | (ಬಾಂಬೆ ಕ್ರಾನಿಕಲ್, ೯-೮-೧೯೪೨) |

# ಅರ್ಥವಿಚಾರ

## ವಿಷಯಮೂಲಸೂಚಿ

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೧ | ೩೯ | (ಅಲಹಾಬಾದ್ ಮ್ಯೂರ್ ಸೆಂಟ್ರಲ್ ಕಾಲೇಜಿನ ಅರ್ಥಶಾಸ್ತ್ರ ಸಂಘದಲ್ಲಿ ೧೯೧೬ರ ಡಿಸೆಂಬರ್ ೨೨ರಂದು ಇತ್ತ ಪ್ರವಚನ.) |
| ೨ | ೩೯ | (ಹರಿಜನ, ೯-೧೦-೧೯೩೭) |
| ೩ | ೪೦ | (ಯಂಗ್ ಇಂಡಿಯಾ, ೧೩-೧೦-೧೯೨೧) |
| ೪ | ೪೨ | (ಯಂಗ್ ಇಂಡಿಯಾ, ೩-೧೧-೧೯೨೭) |
| ೫ | ೪೩ | (ಯಂಗ್ ಇಂಡಿಯಾ, ೯-೧೨-೧೯೨೧) |
| ೬ | ೪೩ | (ಯಂಗ್ ಇಂಡಿಯಾ, ೨-೭-೧೯೩೧) |
| ೭ | ೪೪ | (ಹರಿಜನ, ೧೧-೮-೧೯೪೦) |
| ೮ | ೪೭ | (ಹಿಂದ್ ಸ್ವರಾಜ್ಯ, ೧೯೦೮) |
| ೯ | ೪೮ | (ಹರಿಜನ, ೧-೨-೧೯೪೨) |
| ೧೦ | ೫೦ | (‘ ನೀತಿಧರ್ಮ ’ದಿಂದ) |
| ೧೧ | ೫೧ | (‘ ಮಂಗಳ ಪ್ರಭಾತ ’ದಿಂದ) |
| ೧೨ | ೫೫ | (ಲಂಡನ್ನಿನ ಗಿಲ್ಡ್ ಹೌಸ್ ಅಲ್ಲಿ ಸೆಪ್ಟೆಂಬರ್ ೨೩ರಂದು ಇತ್ತ ಪ್ರವಚನ — ಮಹಾತ್ಮಾ ಗಾಂಧೀ ಅವರ ಭಾಷಣಗಳು-ಬರಹಗಳಿಂದ) |
| ೧೩ | ೫೬ | (ಹರಿಜನ, ೨೧-೭-೧೯೪೬) |
| ೧೪ | ೫೮ | (‘ ಮಂಗಳ ಪ್ರಭಾತ ’ದಿಂದ) |
| ೧೫ | ೫೯ | (ಹರಿಜನ, ೨೯-೬-೧೯೩೫) |
| ೧೬ | ೬೦ | (ಯಂಗ್ ಇಂಡಿಯಾ, ೧೫-೧೦-೧೯೨೫) |
| ೧೭ | ೬೦ | (ಹರಿಜನ, ೬-೨-೧೯೪೭) |
| ೧೮ | ೬೨ | (ಹರಿಜನ, ೮-೩-೧೯೩೫) |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೧೯ | ೬೬ | (ಗಾಂಧೀಜಿಯ ಭಾಷಣಗಳು–ಬರಹಗಳು) |
| ೨೦ | ೬೭ | (‘ ಖಾದಿಯ ಅರ್ಥಶಾಸ್ತ್ರ ’ ಗ್ರಂಥದಿಂದ) |
| ೨೧ | ೬೮ | (ಯಂಗ್ ಇಂಡಿಯಾ, ೧೨–೩–೧೯೨೫) |
| ೨೨ | ೭೦ | (‘ ಆಶ್ರಮ ವ್ರತಗಳ ಅನುಷ್ಠಾನ ’ದಿಂದ) |
| ೨೩ | ೭೪ | (‘ ಮಂಗಳ ಪ್ರಭಾತ ’ದಿಂದ) |
| ೨೪ | ೭೬ | (ಯಂಗ್ ಇಂಡಿಯಾ, ೨೧–೪–೧೯೨೦) |
| ೨೫ | ೭೭ | (ಹರಿಜನ, ೨೫–೨–೧೯೩೯) |
| ೨೬ | ೭೮ | (ಯಂಗ್ ಇಂಡಿಯಾ, ೧೫–೧೧–೧೯೨೮) |
| ೨೭ | ೭೯ | (ಯಂಗ್ ಇಂಡಿಯಾ, ೨೭–೧೦–೧೯೨೧) |
| ೨೮ | ೮೦ | (ಯಂಗ್ ಇಂಡಿಯಾ, ೨೦–೯–೧೯೨೮) |
| ೨೯ | ೮೧ | (ಯಂಗ್ ಇಂಡಿಯಾ, ೧೩–೧೦–೧೯೨೭) |
| ೩೦ | ೮೧ | (ಯಂಗ್ ಇಂಡಿಯಾ, ೨೧–೭–೧೯೨೦) |
| ೩೧ | ೮೨ | (ಯಂಗ್ ಇಂಡಿಯಾ, ೨೩–೧೧–೧೯೨೧) |
| ೩೨ | ೮೩ | (ಯಂಗ್ ಇಂಡಿಯಾ, ೨೧–೮–೧೯೨೪) |
| ೩೩ | ೮೩ | (ಯಂಗ್ ಇಂಡಿಯಾ, ೧೮–೬–೧೯೨೫) |
| ೩೪ | ೮೩ | (ಯಂಗ್ ಇಂಡಿಯಾ, ೧೭–೩–೧೯೨೭) |
| ೩೫ | ೮೪ | (ಯಂಗ್ ಇಂಡಿಯಾ, ೧–೧೧–೧೯೨೮) |
| ೩೬ | ೮೪ | (ಯಂಗ್ ಇಂಡಿಯಾ, ೧೭–೨–೧೯೨೭) |
| ೩೭ | ೮೫ | (ಯಂಗ್ ಇಂಡಿಯಾ, ೩೦–೯–೧೯೨೬) |
| ೩೮ | ೮೬ | (ಯಂಗ್ ಇಂಡಿಯಾ, ೧೩–೪–೧೯೪೦) |
| ೩೯ | ೮೬ | (ಯಂಗ್ ಇಂಡಿಯಾ, ೮–೧೨–೧೯೨೧) |
| ೪೦ | ೮೭ | (ಯಂಗ್ ಇಂಡಿಯಾ, ೨೯–೬–೧೯೨೧) |
| ೪೧ | ೮೮ | (ಹರಿಜನ, ೧೭–೧೧–೧೯೪೬) |
| ೪೨ | ೯೧ | (ಹರಿಜನ, ೨೦–೬–೧೯೩೬) |
| ೪೩ | ೯೨ | (ಯಂಗ್ ಇಂಡಿಯಾ, ೧೬–೭–೧೯೩೧) |
| ೪೪ | ೯೪ | (ಹರಿಜನ, ೨೭–೪–೧೯೩೪) |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೪೫ | ೯೫ | (ಯಂಗ್ ಇಂಡಿಯಾ, ೨೭–೧೦–೧೯೨೭) |
| ೪೬ | ೯೬ | (ಹರಿಜನ, ೧೦–೧೨–೧೯೩೮) |
| ೪೭ | ೯೭ | (ಹರಿಜನ, ೨೯–೩–೧೯೩೫) |
| ೪೮ | ೯೯ | (ಹರಿಜನ, ೨೧–೭–೧೯೪೬) |
| ೪೯ | ೧೦೩ | (ಹರಿಜನ, ೧೬–೧೧–೧೯೩೪) |
| ೫೦ | ೧೦೫ | (ಹರಿಜನ, ೨೭–೧೦–೧೯೩೩) |
| ೫೧ | ೧೦೭ | (ಹರಿಜನ, ೭–೧೨–೧೯೩೪) |
| ೫೨ | ೧೦೮ | (‘ನಿರ್ಮಾಣ ಕಾರ್ಯಕ್ರಮ’, ೧೯೪೫ರ ಆವೃತ್ತಿ) |
| ೫೩ | ೧೦೯ | (ಹರಿಜನ, ೪–೧–೧೯೩೫) |
| ೫೪ | ೧೧೧ | (ಹರಿಜನ, ೨೨–೬–೧೯೩೫) |
| ೫೫ | ೧೧೧ | (ಹರಿಜನ, ೨೯–೮–೧೯೩೬) |
| ೫೬ | ೧೧೨ | (ಹರಿಜನ, ೧೯–೧೨–೧೯೩೬) |
| ೫೭ | ೧೧೩ | (ಹರಿಜನ, ೮–೨–೧೯೩೫) |
| ೫೮ | ೧೧೩ | (ಪತ್ರಿಕಾವರದಿ, ಜುಲೈ ೧೯೩೪) |
| ೫೯ | ೧೧೫ | (ಹರಿಜನ, ೧–೧೦–೧೯೪೦) |
| ೬೦ | ೧೨೨ | (ಯಂಗ್ ಇಂಡಿಯಾ, ೧೩–೧೦–೧೯೨೧) |
| ೬೧ | ೧೨೩ | (ಯಂಗ್ ಇಂಡಿಯಾ, ೨೬–೧೨–೧೯೨೬) |
| ೬೨ | ೧೨೩ | (ಹರಿಜನ, ೨೯–೮–೧೯೩೬) |
| ೬೩ | ೧೨೩ | (ಹರಿಜನ, ೨೦–೧–೧೯೪೦) |
| ೬೪ | ೧೨೪ | (ಹರಿಜನ, ೨೫–೩–೧೯೩೯) |
| ೬೫ | ೧೨೬ | (ಹರಿಜನ, ೨೬–೭–೧೯೪೨) |
| ೬೬ | ೧೨೭ | (ಹರಿಜನ, ೧೦–೧೧–೧೯೪೬) |
| ೬೭ | ೧೨೮ | (ಹರಿಜನ, ೮–೨–೧೯೩೫) |
| ೬೮ | ೧೨೯ | (ಹರಿಜನ, ೧–೩–೧೯೩೫) |
| ೬೯ | ೧೩೦ | (ಹರಿಜನ, ೧೫–೩–೧೯೩೫) |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೭೦ | ೧೩೧ | (ಹರಿಜನ, ೨-೧-೧೯೩೭) |
| ೭೧ | ೧೩೨ | (೧೯೩೧ರಲ್ಲಿ ಲಂಡನ್ನಿನ ಚಕ್ರಗೋಷ್ಠಿಯ ಭಾಷಣವೊಂದರಿಂದ) |
| ೭೨ | ೧೩೪ | (ಹಿಂದೂಸ್ತಾನ್ ಸ್ಟಾಂಡರ್ಡ್ ಪತ್ರಿಕಾ ವರದಿ, ೧೫-೧-೧೯೪೫) |
| ೭೩ | ೧೩೫ | ('ನೇಷನ್ಸ್ ವಾಯ್ಸ್'ನಿಂದ, ಪುಟ ೭೧) |
| ೭೪ | ೧೩೭ | (ಯಂಗ್ ಇಂಡಿಯಾ, ೫-೧೨-೧೯೨೯) |
| ೭೫ | ೧೩೮ | (ಯಂಗ್ ಇಂಡಿಯಾ, ೨೮-೫-೧೯೩೧) |
| ೭೬ | ೧೩೮ | (ಯಂಗ್ ಇಂಡಿಯಾ, ೨೮-೫-೧೯೩೧) |
| ೭೭ | ೧೩೯ | (ಹರಿಜನ, ೨-೮-೧೯೫೨) |
| ೭೮ | ೧೪೧ | (ಅಮೃತಬಜಾರ್ ಪತ್ರಿಕಾ, ೨-೮-೧೯೩೪) |
| ೭೯ | ೧೪೨ | (ಹರಿಜನ, ೫-೧೨-೧೯೩೬) |
| ೮೦ | ೧೪೪ | (ಹರಿಜನ, ೨೩-೪-೧೯೩೮) |
| ೮೧ | ೧೪೫ | (ಹರಿಜನ, ೩೧-೩-೧೯೪೬) |
| ೮೨ | ೧೪೬ | (ಪತ್ರಿಕಾವರದಿ, ೨೮-೧೦-೧೯೪೪) |
| ೮೩ | ೧೪೭ | (ಯಂಗ್ ಇಂಡಿಯಾ, ೨೯-೫-೧೯೨೪) |
| ೮೪ | ೧೪೯ | (ಯಂಗ್ ಇಂಡಿಯಾ, ೨೨-೮-೧೯೨೫) |
| ೮೫ | ೧೫೦ | (ಹರಿಜನ, ೩೧-೮-೧೯೪೭) |
| ೮೬ | ೧೫೨ | (ಯಂಗ್ ಇಂಡಿಯಾ, ೭-೫-೧೯೨೫) |
| ೮೭ | ೧೫೨ | (ಯಂಗ್ ಇಂಡಿಯಾ, ೨೨-೧೦-೧೯೨೫) |
| ೮೮ | ೧೫೪ | (ಯಂಗ್ ಇಂಡಿಯಾ, ೫-೧೧-೧೯೨೫) |
| ೮೯ | ೧೫೬ | (ಯಂಗ್ ಇಂಡಿಯಾ, ೩೧-೩-೧೯೨೭) |
| ೯೦ | ೧೫೭ | (ಹರಿಜನ, ೮-೨-೧೯೪೨) |
| ೯೧ | ೧೫೭ | (ಹರಿಜನ, ೮-೨-೧೯೪೨) |
| ೯೨ | ೧೫೮ | (ಯಂಗ್ ಇಂಡಿಯಾ, ೩೧-೩-೧೯೨೭) |
| ೯೩ | ೧೬೧ | (ಹರಿಜನ, ೧೫-೨-೧೯೪೨) |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೯೪ | ೧೬೨ | (ಹರಿಜನ, ೮-೩-೧೯೪೨) |
| ೯೫ | ೧೬೩ | (ಹರಿಜನ, ೫-೫-೧೯೪೬) |
| ೯೬ | ೧೬೪ | (ಯಂಗ್ ಇಂಡಿಯಾ, ೩-೯-೧೯೨೫) |
| ೯೭ | ೧೬೪ | ('ಮಹಾತ್ಮರ ಮನೋರಂಗ'ದಿಂದ) |
| ೯೮ | ೧೬೮ | (ಹರಿಜನ, ೨೫-೮-೧೯೪೦) |
| ೯೯ | ೧೬೮ | (ಯಂಗ್ ಇಂಡಿಯಾ, ೨೬-೧೧-೧೯೩೧) |
| ೧೦೦ | ೧೭೦ | ('ನಿರ್ಮಾಣ ಕಾರ್ಯಕ್ರಮ', ೧೯೪೫ರ ಆವೃತ್ತಿ) |
| ೧೦೧ | ೧೭೨ | (ಹರಿಜನ, ೩೧-೩-೧೯೪೬) |
| ೧೦೨ | ೧೭೨ | (ಹರಿಜನ, ೩೧-೩-೧೯೪೬) |
| ೧೦೩ | ೧೭೩ | (ಹರಿಜನ, ೨೫-೧-೧೯೪೨) |
| ೧೦೪ | ೧೭೩ | (ಸಂಭಾಷಣೆಯೊಂದರ ಟಿಪ್ಪಣಿ, ೨೨-೮-೧೯೩೪, ಹರಿಜನ, ೨೪-೧೦-೧೯೪೮ರಲ್ಲಿ ಪ್ರಕಟಿತ) |
| ೧೦೫ | ೧೭೪ | (ಹರಿಜನ, ೧೬-೩-೧೯೪೭) |
| ೧೦೬ | ೧೭೪ | (ಹರಿಜನ, ೨೭-೭-೧೯೪೭) |
| ೧೦೭ | ೧೭೫ | (ಹರಿಜನ, ೯-೪-೧೯೪೬) |
| ೧೦೮ | ೧೭೬ | (ಯಂಗ್ ಇಂಡಿಯಾ, ೫-೧೧-೧೯೩೧) |
| ೧೦೯ | ೧೭೮ | (ಪ್ರಾರ್ಥನಾಪ್ರವಚನ, ೩-೧೧-೧೯೪೭) |
| ೧೧೦ | ೧೭೯ | (ಪ್ರಾರ್ಥನಾಪ್ರವಚನ, ೮-೧೨-೧೯೪೭) |
| ೧೧೧ | ೧೮೨ | (ಯಂಗ್ ಇಂಡಿಯಾ, ೬-೮-೧೯೨೫) |
| ೧೧೨ | ೧೮೩ | (ಯಂಗ್ ಇಂಡಿಯಾ, ೧೭-೧೨-೧೯೨೫) |
| ೧೧೩ | ೧೮೫ | (ಯಂಗ್ ಇಂಡಿಯಾ, ೭-೧೦-೧೯೨೬) |
| ೧೧೪ | ೧೮೭ | (ಯಂಗ್ ಇಂಡಿಯಾ, ೧೨-೧೧-೧೯೩೧) |
| ೧೧೫ | ೧೮೮ | (ಹರಿಜನ, ೧-೯-೧೯೪೬) |
| ೧೧೬ | ೧೯೨ | (ಯಂಗ್ ಇಂಡಿಯಾ, ೨೫-೭-೧೯೨೯) |
| ೧೧೭ | ೧೯೪ | (ಹರಿಜನ, ೧೨-೨-೧೯೩೮) |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೧೩೬ | ೨೩೪ | (‘ಭಾರತಕ್ಕೆ ಸ್ವರಾಜ್ಯದ ಪ್ರತಿಪಾದನೆ’ ಗ್ರಂಥದಿಂದ) |
| ೧೩೭ | ೨೩೫ | (ಹರಿಜನ, ೩-೭-೧೯೩೭) |
| ೧೩೮ | ೨೩೭ | (ಹರಿಜನ, ೨೫-೬-೧೯೩೮) |
| ೧೩೯ | ೨೩೯ | (ಯಂಗ್ ಇಂಡಿಯಾ, ೧೬-೨-೧೯೨೧) |
| ೧೪೦ | ೨೪೨ | (ಯಂಗ್ ಇಂಡಿಯಾ, ೨೨-೯-೧೯೨೧) |
| ೧೪೧ | ೨೪೩ | (ಯಂಗ್ ಇಂಡಿಯಾ, ೩೧-೭-೧೯೨೪) |
| ೧೪೨ | ೨೪೫ | (ಯಂಗ್ ಇಂಡಿಯಾ, ೧೮-೧೧-೧೯೨೬) |
| ೧೪೩ | ೨೪೭ | (ಹರಿಜನ, ೨೦-೪-೧೯೪೦) |
| ೧೪೪ | ೨೫೦ | (ಪುಣೆ, ೩-೩-೧೯೪೬; ಹರಿಜನ, ೧೦-೩-೧೯೪೬) |
| ೧೪೫ | ೨೫೧ | (ಉರುಳಿ, ೨೩-೩-೧೯೪೬; ಹರಿಜನ, ೩೧-೩-೧೯೪೬) |
| ೧೪೬ | ೨೫೨ | (ಉರುಳಿ, ೨೩-೩-೧೯೪೬; ಹರಿಜನ, ೩೧-೩-೧೯೪೬) |
| ೧೪೭ | ೨೫೨ | (ನವದೆಹಲಿ, ೨೬-೫-೧೯೪೬; ಹರಿಜನ, ೨-೬-೧೯೪೬) |
| ೧೪೮ | ೨೫೩ | (ಹರಿಜನ, ೨೨-೯-೧೯೪೬) |
| ೧೪೯ | ೨೫೬ | (ಹರಿಜನ, ೧೩-೭-೧೯೪೭) |
| ೧೫೦ | ೨೫೬ | (ಹರಿಜನ, ೨೦-೭-೧೯೪೭) |
| ೧೫೧ | ೨೫೮ | (ಹರಿಜನ, ೪-೮-೧೯೪೬) |
| ೧೫೨ | ೨೫೯ | (ಹರಿಜನ, ೨೦-೪-೧೯೪೦) |
| ೧೫೩ | ೨೬೧ | (ಯಂಗ್ ಇಂಡಿಯಾ, ೧೬-೩-೧೯೩೧) |
| ೧೫೪ | ೨೬೨ | (ಹರಿಜನ, ೧-೬-೧೯೪೭) |
| ೧೫೫ | ೨೬೩ | (ಯಂಗ್ ಇಂಡಿಯಾ, ೧೧-೧೨-೧೯೨೪) |
| ೧೫೬ | ೨೬೪ | (ಯಂಗ್ ಇಂಡಿಯಾ, ೧೫-೧೧-೧೯೨೮) |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೧೫೭ | ೨೬೫ | (ಯಂಗ್ ಇಂಡಿಯಾ, ೨೬–೩–೧೯೩೧) |
| ೧೫೮ | ೨೬೬ | (ಹರಿಜನ, ೧೩–೨–೧೯೩೭) |
| ೧೫೯ | ೨೬೬ | (‘ ರಾಷ್ಟ್ರದ ವಾಣಿ ’ [ನೇಷನ್ಸ್ ವಾಯ್ಸ್] ಗ್ರಂಥದಿಂದ) |
| ೧೬೦ | ೨೬೭ | (ಹರಿಜನ, ೧೩–೨–೧೯೩೭) |
| ೧೬೧ | ೨೬೭ | (ಹರಿಜನ, ೧೩–೩–೧೯೩೭) |
| ೧೬೨ | ೨೬೮ | (ಅಮೃತಬಜಾರ್ ಪತ್ರಿಕಾ, ೨–೮–೧೯೩೯) |
| ೧೬೩ | ೨೭೨ | (ಹರಿಜನ, ೩೦–೧–೧೯೩೭) |
| ೧೬೪ | ೨೭೩ | (ಹರಿಜನ, ೩–೬–೧೯೩೯) |
| ೧೬೫ | ೨೭೩ | (ಹರಿಜನ, ೨೩–೨–೧೯೪೭) |
| ೧೬೬ | ೨೭೪ | (ಹರಿಜನ, ೧೬–೧೨–೧೯೩೯) |
| ೧೬೭ | ೨೭೬ | (ಹರಿಜನ, ೧೬–೨–೧೯೪೭) |
| ೧೬೮ | ೨೮೦ | (‘ ಸ್ಟಡೀಸ್ ಇನ್ ಗಾಂಧೀಇಜ಼ಂ ’ ಗ್ರಂಥದಿಂದ — ೧೯೩೫ರ ಅಕ್ಟೋಬರ್ ತಿಂಗಳ ‘ ಮಾಡರ್ನ್ ರೆವ್ಯೂ ’ ಪತ್ರಿಕೆಯಲ್ಲಿ ಪ್ರಕಟವಾದ ಗಾಂಧೀಜಿಯೊಡನೆ ನಡೆದ ಪ್ರೊ. ನಿರ್ಮಲಕುಮಾರ ಬೋಸರ ಚರ್ಚೆಯ ವರದಿಯಿಂದ) |
| ೧೬೯ | ೨೮೦ | (ಹರಿಜನ, ೩೧–೩–೧೯೪೬) |
| ೧೭೦ | ೨೮೧ | (ಹರಿಜನ, ೧೨–೪–೧೯೪೨) |
| ೧೭೧ | ೨೮೨ | (ಹರಿಜನ, ೧–೯–೧೯೪೦) |
| ೧೭೨ | ೨೮೩ | (ಹರಿಜನ, ೧–೬–೧೯೩೫) |
| ೧೭೩ | ೨೮೫ | (ಹರಿಜನ, ೮–೩–೧೯೪೨) |
| ೧೭೪ | ೨೮೫ | (ಹರಿಜನ, ೧–೨–೧೯೪೨) |
| ೧೭೫ | ೨೮೬ | ([ಪ್ಯಾರೆಲಾಲ್] ಹರಿಜನ, ೨೫–೧೦–೧೯೫೨) |

**ಸ್ಫುಟವಿಚಾರ — ಮನೋಜ್ಞ ನಿರೂಪಣೆ — ಉತ್ತಮ ವಾಙ್ಮಯ**

## ಕನ್ನಡದಲ್ಲಿ ಗಾಂಧೀಜಿಯ ಸಾಹಿತ್ಯಸಾರಸರ್ವಸ್ವ

| | ಸಾದಾ ಪ್ರತಿ ಬೆಲೆ | ಉತ್ತಮ ಪ್ರತಿ ಬೆಲೆ |
|---|---|---|
| **೧. ಆತ್ಮಕಥೆ (ಸಂಕ್ಷಿಪ್ತ)–ಹಿಂದ್ ಸ್ವರಾಜ್ಯ** | ರೂ. ೨-೨೫ | ರೂ. ೩ |
| **೨. ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ** | ” | ” |
| **೩. ಗೀತಾಮಾತೆ** | ” | ” |
| **೪. ಸತ್ಯ–ಅಹಿಂಸೆ** | ರೂ. ೩ | ರೂ. ೪ |
| **೫. ಧರ್ಮ–ನೀತಿ** | ರೂ. ೨-೨೫ | ರೂ. ೩ |
| **೬. ಸಮಾಜಧರ್ಮ** | ” | ” |
| **೭. ಜೀವನಶಿಕ್ಷಣ** | ” | ” |
| **೮. ಅರ್ಥವಿಚಾರ** | ” | ” |
| **೯. ಸತ್ಯಾಗ್ರಹ** | ” | ” |

ಸಿದ್ಧಗೊಳ್ಳುತ್ತಿರುವ ಶೀರ್ಷಿಕೆಗಳು :

**ರಾಜ್ಯತತ್ತ್ವ, ಪತ್ರಗುಚ್ಛ, ಸಮಕಾಲೀನರು ಇತ್ಯಾದಿ ಇತ್ಯಾದಿ**

ಪ್ರತಿಗಳು ಸಿಗುವ ಸ್ಥಳ :

೧. ಪ್ರಧಾನ ಸಂಪಾದಕರು : ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ
೧೬೨, ರಮಾವಿಲಾಸ ರಸ್ತೆ, ಮೈಸೂರು

೨. ಸಂಚಾಲಕರು : ಗಾಂಧೀ ಸ್ಮಾರಕ ನಿಧಿ (ಕರ್ನಾಟಕ ಶಾಖೆ)
೧೩೪, ನೆಹ್ರೂ ಸರ್ಕಲ್, ಶೇಷಾದ್ರಿಪುರಂ, ಬೆಂಗಳೂರು–೨೦